# ತೆಲುಗು ದಿಗಂಬರ ಕಾವ್ಯ : ಒಂದು ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ. ಫಿಲ್. ಪದವಿಯ
ಅಂತಿಕ ಅವಶ್ಯಕತೆಗಾಗಿ ಅರ್ಪಿಸಿದ ನಿಬಂಧ)

ಸಂಶೋಧನೆ
ಮಾಣಿಕಪ್ಪ ಬಿ. ಬೇಗಾರ

ಮಾರ್ಗದರ್ಶನ
ಡಾ. ಎ. ಮೋಹನ ಕುಂಟಾರ್
ಪ್ರಾಧ್ಯಾಪಕರು



ಭಾಷಾಂತರ ಅಧ್ಯಯನ ವಿಭಾಗ
ಭಾಷಾ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೭

# ತೆಲುಗು ದಿಗಂಬರ ಕಾವ್ಯ: ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಯ
ಆಂಶಿಕ ಅವಶ್ಯಕತೆಗಾಗಿ ಅರ್ಪಿಸಿದ ನಿಬಂಧ)




ಸಂಶೋಧನೆ

**ಮಾಣಿಕಪ್ಪ ಬಿ. ಬೇಗಾರ**

ಮಾರ್ಗದರ್ಶನ

**ಡಾ. ಎ. ಮೋಹನ ಕುಂಟಾರ್**

ಪ್ರಾಧ್ಯಾಪಕರು







ಭಾಷಾಂತರ ಅಧ್ಯಯನ ವಿಭಾಗ

ಭಾಷಾ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

೨೦೦೭

# ಮಾರ್ಗದರ್ಶಕರ ದೃಢೀಕರಣ ಪತ್ರ

"ತೆಲುಗು ದಿಗಂಬರ ಕಾವ್ಯ: ಒಂದು ಅಧ್ಯಯನ" -ಎಂಬ ಶೀರ್ಷಿಕೆಯ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಯ ಆಂಶಿಕ ಅವಶ್ಯಕತೆಗಾಗಿ ಶ್ರೀ. ಮಾಣಿಕಪ್ಪ. ಬಿ. ಬೇಗಾರ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಪ್ರಸ್ತುತ ನಿಬಂಧವಾಗಲೀ ಅಥವಾ ಯಾವುದೇ ಭಾಗವನ್ನಾಗಲೀ ಈ ಮೊದಲು ಬೇರೆ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ:೩೧-೦೭-೨೦೦೭

ಡಾ. ಎ.ಮೋಹನ ಕುಂಟಾರ್
ಪ್ರಾಧ್ಯಾಪಕ, ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬, ಹೊಸಪೇಟೆ ತಾ.ಬಳ್ಳಾರಿ ಜಿ.

(ಡಾ. ಎ. ಮೋಹನ ಕುಂಟಾರ್)
ಮಾರ್ಗದರ್ಶಕರು ಹಾಗೂ ಮುಖ್ಯಸ್ಥರು
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ ೫೮೩ ೨೭೬

# ಪ್ರಮಾಣ ಪತ್ರ

"ತೆಲುಗು ದಿಗಂಬರ ಕಾವ್ಯ: ಒಂದು ಅಧ್ಯಯನ" -ಎಂಬ ಶೀರ್ಷಿಕೆಯ ನಿಬಂಧವನ್ನು ೨೦೦೬-೦೭ನೇ ಶೈಕ್ಷಣಿಕ ಸಾಲಿನಲ್ಲಿ ವಿಭಾಗದ ಮುಖ್ಯಸ್ಥರು ಡಾ. ಎ. ಮೋಹನ ಕುಂಟಾರ್ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದು, ಎಂ. ಫಿಲ್ ಪದವಿಯ ಆಂಶಿಕ ಅವಶ್ಯಕತೆಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿದ್ದೇನೆ. ಈ ನಿಬಂಧವನ್ನು ಪೂರ್ಣವಾಗಿಯಾಗಲಿ, ಆಂಶಿಕವಾಗಿಯಾಗಲಿ ಯಾವುದೇ ಪದವಿಗಾಗಿ ಈ ಮೊದಲು ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ:೩೧-೦೭-೨೦೦೭

(ಮಾಣಿಕಪ್ಪ. ಬಿ. ಬೇಗಾರ)
ಎಂ. ಫಿಲ್ ಸಂಶೋಧನಾ ವಿದ್ಯಾರ್ಥಿ
ಭಾಷಾಂತರ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ ೫೮೩ ೨೭೬

# ಕೃತಜ್ಞತೆಗಳು

ಕನ್ನಡ ವಿಶ್ವವಿದ್ಯಾಲಯ ನನಗೆ ಆಲೋಚಿಸಲು ಕಲಿಸಿದೆ. ಸಾಂಪ್ರದಾಯಿಕ ವಿಧಾನದಿಂದ ಈ ಕಾಲದ ವೈಚಾರಿಕತೆ ಪ್ರಜ್ಞೆಯನ್ನು ನೂತನವಾಗಿ ದುಡಿಸಿಕೊಳ್ಳುವಲ್ಲಿ ಕನ್ನಡ ವಿಶ್ವವಿದ್ಯಾಲಯದ ಪಾತ್ರ ಉತ್ಕೃಷ್ಟವಾದುದು. ಗ್ರಾಮೀಣ ಪ್ರದೇಶದಿಂದ ಬಂದ ನನ್ನಂತಹ ವಿದ್ಯಾರ್ಥಿಗಳಿಗೆ ನಮ್ಮದೇ ಆದ ದೇಸಿ ಆಲೋಚನಾ ವಿಧಾನದಲ್ಲಿ ಓದಲು, ಬರೆಯಲು ಅವಕಾಶ ಮಾಡಿಕೊಟ್ಟಿದೆ. ಇದರಿಂದ ''ತೆಲುಗು ದಿಗಂಬರ ಕಾವ್ಯ: ಒಂದು ಅಧ್ಯಯನ'' - ಎಂಬ ಶೀರ್ಷಿಕೆಯ ನಿಬಂಧ ರಚಿಸಲು ಸಾಧ್ಯವಾಯಿತು. ಆ ಕಾರಣಕ್ಕಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ತುಂಬ ಋಣಿ.

ಎಂ.ಫಿಲ್. ಸಂಶೋಧನೆಗೆ ಅವಕಾಶ ಮಾಡಿಕೊಟ್ಟ ವಿದ್ಯಾರ್ಥಿಗಳ ಅಚ್ಚು ಮೆಚ್ಚಿನ ಕುಲಪತಿಗಳಾದ ಡಾ.ಬಿ. ಎ. ವಿವೇಕ ರೈ ಹಾಗೂ ಈಗಿನ ಪ್ರಭಾರಿ ಕುಲಪತಿಗಳಾದ ಡಾ. ಕೆ.ವಿ.ನಾರಾಯಣ ಅವರನ್ನು ನೆನೆಯುತ್ತೇನೆ. ಆಡಳಿತಾತ್ಮಕವಾಗಿ ಅಧ್ಯಯನಕ್ಕೆ ನೆರವಾದ ಕುಲಸಚಿವರಾದ ಶ್ರೀ ವಿ. ಶಂಕರ್ ಅವರನ್ನೂ, ಅಧ್ಯಯನಾಂಗ ನಿರ್ದೇಶಕರಾದ ಡಾ.ಪಾಂಡುರಂಗ ಬಾಬು ಅವರನ್ನು, ಪ್ರಸಾರಾಂಗದ ನಿರ್ದೇಶಕರಾದ ಪ್ರೊ.ಮಲ್ಲೆಪುರಂ. ಜಿ. ವೆಂಕಟೇಶ್ ಅವರನ್ನು ಗೌರವಪೂರ್ವಕವಾಗಿ ನೆನೆಯುತ್ತೇನೆ.

ಅಧ್ಯಯನಕ್ಕೆ ಅವಕಾಶ ಕೊಟ್ಟು ಸಂಶೋಧನೆಗೆ ಸಜ್ಜುಗೊಳಿಸಿದ ನನ್ನನ್ನು ತಿದ್ದಿ, ತಾಳ್ಮೆಯಿಂದ ಅಧ್ಯಯನದ ಪ್ರತಿ ಹಂತದಲ್ಲಿ ಆತ್ಮೀಯವಾಗಿ ಮಾರ್ಗದರ್ಶನ ಮಾಡಿದ ಮುಖ್ಯಸ್ಥರು ಹಾಗೂ ಮಾರ್ಗದರ್ಶಕರಾದ ಪ್ರೀತಿಯ ಗುರುಗಳಾದ ಡಾ. ಎ. ಮೋಹನ ಕುಂಟಾರ್ ಅವರನ್ನು ತುಂಬು ಹೃದಯಪೂರ್ವಕವಾಗಿ ಸ್ಮರಿಸುತ್ತೇನೆ. ವಿಭಿನ್ನ ಆಲೋಚನೆಗಳನ್ನು ಕಲಿಸಿದ ವಿಭಾಗದ ಈಗಿನ ಮುಖ್ಯಸ್ಥರು ಡಾ.ಎ.ವಿ. ತಾರಾಕೇಶ್ವರ ಹಾಗೂ ಡಾ.ವಿಠ್ಠಲರಾವ್ ಗಾಯಕ್ವಾಡ್, ಡಾ.ಕರೀಗೌಡ ಬೀಚನಹಳ್ಳಿ, ಡಾ. ಎಂ. ಉಷಾ ಇವರನ್ನೂ ಸಹ ಪ್ರೀತಿಯಿಂದ ಸ್ಮರಿಸುತ್ತೇನೆ. ಸದಾ ನನ್ನ ಏಳಿಗೆಯನ್ನು ಬಯಸಿ ಆಶೀರ್ವದಿಸಿ ಅಧ್ಯಯನಕ್ಕೆ ಪ್ರೋತ್ಸಾಹಿಸಿದ ದೀಕ್ಷಾಗುರುಗಳಾದ ಪೂಜ್ಯ ಶ್ರೀಶ್ರೀಶ್ರೀ ಶಾಂತವೀರ ಸ್ವಾಮಿಗಳು ಅವರನ್ನು ಪೂಜ್ಯನೀಯ ಭಾವದಿಂದ ತುಂಬು ಹೃದಯಪೂರ್ವಕವಾಗಿ ಸ್ಮರಿಸುತ್ತೇನೆ.

ಹಲವಾರು ಸಲ ನನ್ನ ಅಧ್ಯಯನದ ಸಮಸ್ಯೆಗಳನ್ನು ಹೋಗಲಾಡಿಸಿ ಪ್ರೋತ್ಸಾಹಿಸಿದ ಡಾ.ಸಿ.ವೆಂಕಟೇಶ್, ಡಾ. ಕೆ. ಕೆ. ಮಾಧವ ಪೆರಾಜೆ, ಡಾ. ಸುಬ್ಬಣ್ಣ ರೈ, ಡಾ. ಕೆ. ರವೀಂದ್ರನಾಥ, ನಗ್ನಮುನಿ, ಗುರುಮೂರ್ತಿ ಪೆಂಡಕೂರು, ಡಾ. ಮಹಾದೇವಯ್ಯ, ಡಾ. ಹರಿಶ್ಚಂದ್ರ ದಿಗ್ಸಂಗಿಕರ, ಡಾ. ಮೈತ್ರಿ, ಡಾ. ಬಿ. ಎಸ್. ಸಿಂಗೆ, ಡಾ.ನಾಗರಾಜ, ಡಾ. ಮೋಗಳ್ಳಿ ಗಣೇಶ್ ಹಾಗೂ ಶ್ರೀಮಂತ ಮೋರೆ, ಸಂಗಮೇಶ ಎಲ್ಲರಿಗೂ ಆತ್ಮೀಯ ಕೃತಜ್ಞತೆಗಳು.

ನನ್ನ ಅಧ್ಯಯನಕ್ಕೆ ಪ್ರೋತ್ಸಾವನ್ನಿತ್ತ ನನ್ನ ಪೂಜ್ಯ ತಾಯಿ ಮಲ್ಲಮ್ಮ ಭೀಮಶಪ್ಪ ಬೇಗಾರ್, ಸಹೋದರ ತಮ್ಮಂದಿರಾದ ಮಂಜುನಾಥ, ಗೋಪಾಲ ಕೃಷ್ಣ, ಅಕ್ಕ ನರಸಿಂಗಮ್ಮ, ತಂಗಿಯರಾದ ಭೀಮಮ್ಮ, ಮಹಾದೇವಮ್ಮ ಸಂಗೀತಾ ಹಾಗೂ ಬಸವರಾಜ, ಪುಟಾಣಿಗಳಾದ, ಮಾರುತಿ, ಪೂಜಾ, ಅನಿಲ್ ಹಾಗೂ ಕುಟುಂಬದವರೆಲ್ಲರನ್ನು ಹೃದಯಪೂರ್ವಕವಾಗಿ ಸ್ಮರಿಸುತ್ತೇನೆ.

ನನ್ನ ಸಹಪಾಠಿ ಸ್ನೇಹಿತರಾದ ಸಾವಿತ್ರಿ ಪವಾರ್, ಲಲಿತ ಬಾವಿಕಟ್ಟಿ, ಸುಕನ್ಯ ಹಾವನೂರು, ಕಾವೇರಿ ಸಾಗರ, ಶ್ರೀದೇವಿ, ವಿಪ್ಲವಿ, ಅನುಪಮ ಉತ್ನಾಳ್, ಮೇಘ ರಾಯರ, ಪೂರ್ಣಿಮ, ಸುಮತಿ, ಸವಿತಾ, ನಿವೇದಿತಾ, ಬೇಬಿ, ಯಾಸ್ಮಿನ್, ಸತ್ಯಮೂರ್ತಿ, ಗಜಾನನ, ಬಾಬು, ಜಗದೀಶ್ ಕುಮಾರ್, ಬಸವರಾಜ. ಎ.ಡಿ., ಹೊಳಿಬಸಪ್ಪ, ಧರ್ಮವೀರ, ಹುಲುಗಪ್ಪ, ತುಕಾರಾಮ, ಕುಮಾರ, ಓಬಯ್ಯ, ರವಿನಾಯಕ, ಹನುಮಂತರಾಯ, ಹೂಲೆಪ್ಪ, ಎಲ್ಲಾ ನನ್ನ ಸಹಪಾಠಿಗಳನ್ನು ಹೃದಯಪೂರ್ವಕವಾಗಿ ನೆನೆಯುತ್ತೇನೆ.

ಸಂಶೋಧನೆಗೆ ಪೂರಕವಾದ ಪುಸ್ತಕಗಳನ್ನು ಒದಗಿಸಿದ ಗ್ರಂಥಾಲಯದ ಸಿಬ್ಬಂದಿಯವರಿಗೂ ಮತ್ತು ನನ್ನ ನಿಬಂಧವನ್ನು ಅಂದವಾಗಿ ಡಿ.ಟಿ.ಪಿ ಮಾಡಿರುವ ಸ್ವಪ್ನ ಕಂಪ್ಯೂಟರ್ಸ್‌ರವರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ಮಾಣಿಕಪ್ಪ. ಬಿ. ಬೇಗಾರ.

# ಪರಿವಿಡಿ

## ತೆಲುಗು ದಿಗಂಬರ ಕಾವ್ಯ : ಒಂದು ಅಧ್ಯಯನ


ಅಧ್ಯಾಯ - ೧ ಪ್ರಸ್ತಾವನೆ ೧

ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಅಧ್ಯಾಯ - ೨ ತೆಲುಗು ಸಾಹಿತ್ಯ ಪರಂಪರೆ ಮತ್ತು ದಿಗಂಬರ ಕಾವ್ಯ ೬

ಅಧ್ಯಾಯ - ೩ ತೆಲುಗು ದಿಗಂಬರ ಕಾವ್ಯ ವಿಶ್ಲೇಷಣೆ ೩೯

ನಗ್ನಮುನಿ

ನಿಖಿಲೇಶ್ವರ

ಜ್ವಾಲಾಮುಖಿ

ಚೆರಬಂಡ ರಾಜು

ಭೈರವಯ್ಯ

ಮಹಾಸ್ವಪ್ನ

ಅಧ್ಯಾಯ - ೪ ದಿಗಂಬರ ಕವಿಗಳ ವೈಚಾರಿಕ ನಿಲುವುಗಳು ೧೦೮

ಅಧ್ಯಾಯ - ೫ ಸಮರೋಪ : ದಿಗಂಬರ ಕವಿಗಳ ಅನನ್ಯತೆ ೧೧೯

ಅನುಬಂಧ : ಆಕರಗ್ರಂಥಗಳು

# ಅಧ್ಯಾಯ - ೧

## ಪ್ರಸ್ತಾವನೆ

ಮಾನವನ ಜೀವನದಲ್ಲಿ ಕಾವ್ಯವು ಅತ್ಯಂತ ಉತ್ಕೃಷ್ಟ ಸ್ಥಾನವನ್ನು ಪಡೆದಿರುತ್ತದೆ. ಕಾವ್ಯವು ಜೀವನದ ಒಂದು ಅಂಶ. ಮಾನವನು ನೋವು-ನಲಿವುಗಳನ್ನು ಹಾಡುವುದರ ಮುಖಾಂತರ ನೀಗಿಸಿಕೊಳ್ಳುತ್ತಾನೆ. ಪ್ರಾಚೀನ ಸಾಹಿತ್ಯವನ್ನು ತೆಗೆದುಕೊಂಡಾಗ ಮೊದಲು ನಮ್ಮ ಕಣ್ಣ ಮುಂದೆ ನಿಲ್ಲುವಂಥದ್ದು ಕಾವ್ಯ ಪ್ರಕಾರ. ಪ್ರಾಚೀನ ಮಹಾಕಾವ್ಯಗಳಾದ ರಾಮಾಯಣ, ಮಹಾಭಾರತ ಮೊದಲಾದವು ಕಾವ್ಯ ಪ್ರಕಾರಗಳೇ. ಪ್ರಾಚೀನ ಯುಗದಲ್ಲಿ ಕಾವ್ಯವು ಮೌಖಿಕವಾಗಿತ್ತು.

ಆಧುನಿಕ ಯುಗದಲ್ಲಿ ಕಾವ್ಯಕ್ಕೆ ತುಂಬ ಪ್ರಾಶಸ್ತ್ಯವಿದೆ. ಕವಿಗಳು ಕನಸುಗಾರರು. ಸಮಾಜದ ಸ್ಥಿತಿ ಬದಲಾಗಿ ಎಲ್ಲರ ಸುಖ, ಏಳಿಗೆಗಳು ನೆಲೆಗೊಳ್ಳಬೇಕು, ಕಷ್ಟಗಳು ಶೋಷಣೆಗಳು, ಭೇದಗಳು ಇಲ್ಲವಾಗಬೇಕು ಎಂಬುದು ಕವಿಗಳ ಮುಖ್ಯ ಆಶಯಗಳು. ಇದು ಕಾವ್ಯ ಹುಟ್ಟಿದಾಗಿನಿಂದಲೂ ಬದಲಾಗುವ ಸಮಾಜದ ಸ್ಥಿತಿಗತಿಗನುಸರಿಸಿ ಕವಿಯ ವಿಚಾರಗಳು ಹೊಸ ಹೊಸ ದಿಗಂತಗಳಿಗೆ ಚಾಚುತ್ತವೆ. ಪ್ರಾಚೀನ ಕಾವ್ಯವು ಧಾರ್ಮಿಕ ಆಶಯಗಳನ್ನು ಅಂದಿನ ವಿದ್ಯೆ-ವಿದ್ಯಮಾನಗಳ ಪರಿಮಿತಿಯಲ್ಲಿ ಸಮಾಜದ ಮುಂದಿಟ್ಟಿದೆ. ಭಾವಕಾವ್ಯ, ಅಭ್ಯುದಯ ಕಾವ್ಯ ಸ್ವಾತಂತ್ರ್ಯೋದಯದ ಜಾತ್ಯಾತೀತರಾಷ್ಟ್ರದ ಕನಸು, ಸಾಮಾಜಿಕ ಸಮಸ್ಯೆಗಳು, ಮುಂತಾದವು ಚಿಂತನೆಗಳಾಗಿದ್ದವು. ಇವೆಲ್ಲಕ್ಕಿಂತ ಮುಂದೆ ಹೋಗಿ ದಿಗಂಬರ ಕವಿಗಳು ಬಂದು ಜಿಡ್ಡುಗಟ್ಟಿ ಹೋಗಿದ್ದ ತೆಲುಗು ಕಾವ್ಯಕ್ಕೆ ಪ್ರತಿಕ್ರಿಯೆಯಾಗಿ ವಾಸ್ತವಿಕತೆಗೆ ಹೆಚ್ಚು ಒತ್ತು ಕೊಟ್ಟರು. ವಾಸ್ತವ ಘಟನೆಗಳ ಚಿತ್ರಣ ಸಾಹಿತ್ಯದಲ್ಲಿ ಆರಂಭವಾಯಿತು. ಸ್ವಚ್ಛ ಸಮಾಜದ ನಿರ್ಮಾಣ ಇವರ ಮುಖ್ಯ ಆಶಯವಾಗಿತ್ತು.

ಪಾಶ್ಚಾತ್ಯ ಸಾಹಿತ್ಯದ ಪ್ರಭಾವವು ಆಧುನಿಕ ಕಾವ್ಯಕ್ಕೆ ನಾಂದಿಯಾಯಿತು. ಪಾಶ್ಚಾತ್ಯ ಸಾಹಿತ್ಯ ಪ್ರಭಾವದಿಂದಲೇ ಅದು ಅನುವಾದ ರೂಪದಲ್ಲಿ ಒಂದು ಹೊಸ ಕಾವ್ಯ ಪರಂಪರೆಯಾಗಿ ರೂಪುಗೊಂಡಿತು. ಭಾರತೀಯ ಸಾಹಿತ್ಯದಲ್ಲಿ ಮೊದಲು ಪ್ರತಿಯೊಂದು ಕಾವ್ಯವು ಸಾಂಪ್ರದಾಯಿಕ ನೆಲೆಯಲ್ಲಿ ರಚನೆಗೊಂಡಂಥವು. ಭಾರತೀಯ ಎಲ್ಲಾ ಭಾಷೆಗಳಲ್ಲೂ ಪಾಶ್ಚಾತ್ಯ ಕಾವ್ಯದ ಪ್ರಭಾವವನ್ನು ಮನಗಾಣಬಹುದು. ಈ ದೃಷ್ಟಿಯಲ್ಲಿ ಭಾರತೀಯ ಕಾವ್ಯಗಳಲ್ಲಿ ಹೊಸ ಕಾವ್ಯ ಪ್ರಕಾರಗಳು ಉದಯಿಸಲು ಕಾರಣವಾದುವು. ಆಧುನಿಕ ಕಾವ್ಯವು ವೈಚಾರಿಕ ನೆಲೆಯಲ್ಲಿ ವಾಸ್ತವಿಕವಾಗಿ ದುಡಿವವರ, ದಲಿತ, ಹಿಂದುಳಿದವರ ನೋವು ನಲಿವುಗಳನ್ನು ಅನುಸರಿಸಿ ರಚನೆಗೊಂಡಿದೆ.

ಮನುಷ್ಯ ಸಂವೇದನೆಯು ವೈವಿಧ್ಯವಾಗಿ ಕಾವ್ಯ ಪ್ರಕಾರಗಳಲ್ಲಿ ಅಭಿವ್ಯಕ್ತಗೊಂಡಿರುವುದನ್ನು ಕಾಣಬಹುದು. ಭಾರತದ ಎಲ್ಲಾ ಭಾಷೆಗಳಲ್ಲಿ ಇವು ಮೌಖಿಕವಾಗಿ ಹಾಗೂ ಅಕ್ಷರ ರೂಪದಲ್ಲಿ ಪ್ರಕಟಿಸಲಾಗಿದೆ. ಮನುಷ್ಯನ ಸಂವೇದನೆಯ ವೈಶಿಷ್ಟ್ಯವೇ ಕಾವ್ಯದ ಅನನ್ಯತೆಯನ್ನು ಉಳಿಸಿಕೊಳ್ಳುವುದು. ಈ ಹಿನ್ನೆಲೆಯಲ್ಲಿ ತೆಲುಗು ಸಾಹಿತ್ಯದಲ್ಲೇ ದಿಗಂಬರ ಕಾವ್ಯ ಒಂದು ವಿಶಿಷ್ಟ ಕಾವ್ಯ ಪ್ರಕಾರ. ಈ ಕಾವ್ಯವು ಮುಖ್ಯವಾಗಿ ರಾಜಕೀಯ, ಸಾಮಾಜಿಕ, ವ್ಯವಸ್ಥೆಗಳ ಮೇಲೆ ತಾತ್ವಿಕ ನೆಲೆಯಿಂದ ಹೊರಬಂದ ಕ್ರಾಂತಿ ಕವಿತೆ. ಈ ಕಾವ್ಯವು ತೆಲುಗು ಸಾಹಿತ್ಯದಲ್ಲಿ ಸ್ವಾತಂತ್ರ್ಯ ನಂತರ ಬಂದ ಮೊದಲ ಆಂದೋಲನ ಕಾವ್ಯವಾಗಿದೆ. ಈ ಕಾವ್ಯದ ಉದಯಕ್ಕೆ ಅಂದಿನ ಸಾಮಾಜಿ ಸ್ಥಿತಿಗತಿಯು ಪ್ರಮುಖ ಕಾರಣ. ಕವಿಯತ್ರಿ ಸಿ. ವಿಜಯಲಕ್ಷ್ಮಿಯವರು ಅವರ ವೈಚಾರಿಕ ವಿಚಾರಗಳಿಂದ ಮುಂದಿನ ದಿಗಂಬರ ಕಾವ್ಯಕ್ಕೆ ಮುನ್ಸೂಚಿಯಂತೆ ಕಂಡುಬಂದರು.

ಪ್ರಾಚೀನ ತೆಲುಗು ಸಾಹಿತ್ಯವನ್ನು ಅವಲೋಕನ ಮಾಡಿದಾಗ ಅದು ಅನೇಕ ಬದಲಾವಣೆಗಳಿಗೆ ಒಳಗಾಗಿರುವುದನ್ನು ಕಾಣಬಹುದು. ತೆಲುಗು ದೇಶವನ್ನಾಳಿದ ರಾಜರು ಅರಸುಮನೆತನಗಳು ರಾಜ್ಯಾಧಿಪತ್ಯವನ್ನು ಸ್ಥಾಪಿಸಿ ಅನೇಕರು ಸ್ವತಃ ಗ್ರಂಥಗಳನ್ನು ರಚಿಸಿ ನಾಡು ನುಡಿಯ ಬೆಳವಣಿಗೆಗೆ ಸಹಾಯ ಮಾಡಿದ್ದಾರೆ. ಬೌದ್ಧರು, ಜೈನರು, ವೈದಿಕರು, ಶೈವ, ವೈಷ್ಣವರು, ತಮ್ಮ ತಮ್ಮ ಪಂಥಗಳನ್ನು ಅಲ್ಲಲ್ಲಿ ಪ್ರಚಾರ ಮಾಡಿ ಅವುಗಳಿಗೆ ಸಹಾಯಕವಾಗಿ ಅನೇಕ ಗ್ರಂಥಗಳನ್ನು ರಚಿಸಿದರು. ಆದರೆ ತೆಲುಗು ಸಾಹಿತ್ಯದ ಪ್ರಾಚೀನತೆ ೧೧ನೇ ಶತಮಾನಕ್ಕಿಂತ ಹಿಂದೆ ಹೋಗಲಾರದು. ನನ್ನಯ ತೆಲುಗಿನ ಆದ್ಯಕವಿ. ನನ್ನಯ ಯುಗವನ್ನು ಭಾಷಾಂತರ ಯುಗವೆಂದು ಕರೆಯುವರು. ಏಕೆಂದರೆ ಇಲ್ಲಿ ಎಲ್ಲಾ ಕಾವ್ಯಗಳು ಸಂಸ್ಕೃತದ ಪ್ರಾಕೃತಗಳಿಂದ ಭಾಷಾಂತರಗೊಂಡವು. ಈ ಯುಗದಲ್ಲಿ ಸಂಸ್ಕೃತದ ಮೂಲ ಕಾವ್ಯಗಳನ್ನು ನೇರವಾಗಿ ತೆಲುಗಿಗೆ ಅನುವಾದ ಮಾಡಲಾಗಿದೆ. ಇಲ್ಲಿ ಮುಖ್ಯವಾಗಿ ಕವಿಗಳು ಯಾವ ವಿಶೇಷವಾದ ಸ್ವಾತಂತ್ರ್ಯವನ್ನೂ ವಹಿಸದೆ, ಮೂಲವನ್ನೂ ಅತಿ ನಿಕಟವಾಗಿ ಅನುಸರಿಸದೆ, ತಮ್ಮ ಪ್ರಚಾರಕಾರ್ಯಕ್ಕೆ ಅನುಕೂಲವಾಗುವಂತೆ ದೇಸಿ ಸಂಸ್ಕೃತಿಯ ಅವಶ್ಯಕತೆಗೆ ಹೊಂದುವ ಹಾಗೆ ಭಾಷಾಂತರಿಸಿದ್ದಾರೆ. ಮುಖ್ಯವಾಗಿ ಮಹಾಭಾರತ, ರಾಮಾಯಣಗಳು ಪ್ರಮುಖ ಸ್ಥಾನವನ್ನು ಪಡೆದಿವೆ.

ತೆಲುಗಿನ ಆದ್ಯಕವಿ ನನ್ನಯನು ಮಹಾಭಾರತದ ಭಾಷಾಂತರವನ್ನು ಚಾಳುಕ್ಯರಾಜನಾದ ರಾಜರಾಜ ನರೇಂದ್ರ ಆಜ್ಞೆಯ ಮೇರೆಗೆ ಪ್ರಾರಂಭಿಸಿ ಆದಿ, ಸಭಾಪರ್ವಗಳು, ಅರಣ್ಯ ಪರ್ವದ ಕೆಲವು ಭಾಗವನ್ನು ರಚಿಸಿದನು. ನನ್ನಯನ ಶೈಲಿ ಸರಳವೂ ಮಧುರವೂ ಆದ ಬಹು ಆಕರ್ಷಕವಾದ ಶೈಲಿ. ಅಂದಿನ ಸಮಾಜದ ಸ್ಥಿತಿಗತಿಗಳಿಗನುಗುಣವಾಗಿ ಕಾವ್ಯ ರಚಿಸಿದ್ದಾನೆ. ಸಂದರ್ಭಕ್ಕೂ ಪಾತ್ರಕ್ಕೂ ಹೊಂದಿಕೊಳ್ಳುವಂತೆ ಬಹು ನಾದಮಯವಾಗಿ ಬರೆದಿದ್ದಾನೆ. ವಿಷಯ ವೈವಿಧ್ಯಕ್ಕೆ ಅನುಸಾರವಾಗಿ ಭಿನ್ನ ಭಿನ್ನ ಛಂದಸ್ಸುಗಳನ್ನು ಉಪಯೋಗಿಸಿಕೊಂಡು ಬರೆದಿದ್ದಾನೆ. ಈತನ ಭಾರತ ಚಂಪೂ ರೂಪದಲ್ಲಿದೆ. ಈ ಗ್ರಂಥ ರಚನೆಗೆ ಕನ್ನಡದ ಪಂಪ ಸ್ಫೂರ್ತಿ, ಪಂಪನ ವಿಕ್ರಮಾರ್ಜುನ ವಿಜಯದ ಅನೇಕ ಸನ್ನಿವೇಶ, ಛಂದಸ್ಸು ಮತ್ತು ಪದಪ್ರಯೋಗಗಳ ಅನುಕರಣವನ್ನು ಇಲ್ಲಿ ಕಾಣಬಹುದು. ತಿಕ್ಕನ ನನ್ನಯನು ಪ್ರಾರಂಭಿಸಿದ ಭಾರತವನ್ನು

ಮುಂದುವರಿಸಿದನು. ದೀರ್ಘಕಾಲದ ನಂತರ ೧೩ನೆಯ ಶತಮಾನದಲ್ಲಿ ತಿಕ್ಕನನು ನನ್ನಯ ಬಿಟ್ಟಂಥ ಭಾರತವನ್ನು ಪೂರ್ಣಗೊಳಿಸಿದನು. ತಿಕ್ಕನನು ಮನಮಸಿದ್ಧಿ ಆಸ್ಥಾನದಲ್ಲಿ ಮಂತ್ರಿಯಾಗಿದ್ದನು. ಈತನು ಮಂತ್ರಿಯಲ್ಲದೆ ಯುದ್ಧ ವಿದ್ಯೆಯಲ್ಲಿ ನುರಿತ ವ್ಯಕ್ತಿತ್ವವುಳ್ಳವನು. ತೆಲುಗಿನ ಅದ್ವಿತೀಯ ಕವಿಯಾದವನು ತನ್ನ ಭಾರತವನ್ನು ಚಂಪೂವಿನಲ್ಲಿ ಬರೆದನು. ಜನರ ಸಂತೋಷಕ್ಕಾಗಿ ಕಾವ್ಯ ರಚಿಸುವುದಾಗಿ ಹೇಳಿದ ಮೊಟ್ಟಮೊದಲ ಕವಿ ತಿಕ್ಕನ. ತನ್ನ ಭಾರತವನ್ನು ಹರಿಹರನಾಥನಿಗೆ ಅರ್ಪಿಸಿದನು. ಈತನ ಕಾವ್ಯದಲ್ಲಿ ಸಜೀವ ಪಾತ್ರಚಿತ್ರಣ, ನಾಟಕೀಯವಾಗಿ, ರಸಭರಿತ, ಅರ್ಥಗರ್ಭಿತ, ರಾಜನೀತಿ ಕಾಣುತ್ತವೆ. ಇಲ್ಲಿನ ಪಾತ್ರಗಳು ನಿತ್ಯ ಜೀವನದ ಹತ್ತಿರ ಇರುವ ಹಾಗೆ ರಚಿಸಿ, ಮನಸ್ಸು ಕಲಕುವಂತೆ, ಪ್ರತಿಯೊಂದು ಪಾತ್ರಗಳ ನೈಜ ಚಿತ್ರಣವನ್ನು ಇಟ್ಟಿದ್ದಾನೆ. ಎರ್ರನನು, ನನ್ನಯ, ತಿಕ್ಕನರು ರಚಿಸಿ ಉಳಿಸಿದ ಭಾರತವನ್ನು ಪೂರ್ಣಗೊಳಿಸಿದನು. ಅಂದರೆ ಈತ ಅರಣ್ಯ ಪರ್ವವನ್ನು ರಚಿಸಿದ್ದಾನೆ. ಈತನ ಶಬ್ದಗತಿಯಲ್ಲಿ ನನ್ನಯನನ್ನು ಹಾಗೂ ಭಾವಗತಿಯಲ್ಲಿ ತಿಕ್ಕನನ್ನು ಅನುಸರಿಸಿ, ತನ್ನದೇ ಆದ ಒಂದು ಶೈಲಿಯನ್ನು ಕಂಡುಕೊಂಡಿದ್ದಾನೆ ಎನ್ನುವುದು ಈತನ ಕಾವ್ಯದ ವೈಶಿಷ್ಟ್ಯ.

ತೆಲುಗು ಸಾಹಿತ್ಯದ ಎರಡನೆಯ ಯುಗ ಪ್ರಬಂಧ ಯುಗ, ಈ ಯುಗ ಸುವರ್ಣ ಯುಗವಾಗಿತ್ತು. ಈ ಕಾಲದ ಕವಿಗಳು ವಿಶೇಷ ಮೇಧಾವಿಗಳಾಗಿ ಸ್ವತಂತ್ರ ಮಾರ್ಗದಲ್ಲಿ ಹೊರಟು ಹೊಸ ವಸ್ತುಗಳನ್ನು ಆಯ್ದುಕೊಂಡು ಸ್ಫೂರ್ತಿದಾಯಕವಾದ ಕೃತಿಗಳನ್ನು ರಚಿಸಿದರು. ೧೭-೧೮ನೇ ಶತಮಾನವು ನೀರಸ ಯುಗವಾಗಿತ್ತು. ೧೯ನೆಯ ಶತಮಾನವು ಆಧುನಿಕ ಸಾಹಿತ್ಯ ಯುಗವು ಪ್ರಾರಂಭವಾಗಿ ಪಾಶ್ಚಾತ್ಯ ಸಾಹಿತ್ಯದ ಸಂಪರ್ಕದಿಂದ ವಿಶೇಷ ಮಾರ್ಪಾಟನ್ನು ಹೊಂದಿ ವಿಶ್ವ ಸಾಹಿತ್ಯದ ಎಲ್ಲಾ ಗುಣಗಳನ್ನು ತನ್ನಲ್ಲಿ ಅಳವಡಿಸಿಕೊಂಡು ಜನಕ್ಕೂ ದೇಶಕ್ಕೂ ಉಪಯೋಗಕರವೂ ಸರ್ವಾದರಣೀಯವೂ ಆದ ಸಜೀವ ಸಾಹಿತ್ಯ ನಿರ್ಮಾಣಕ್ಕೆ ಮಾರ್ಗದರ್ಶಕವಾಯಿತು. ಈ ಆಧುನಿಕ ತೆಲುಗು ಸಾಹಿತ್ಯದ ಪ್ರೇರಕ ಮತ್ತು ಸ್ಥಾಪಕ ರಾವ್‌ಬಹದ್ದೂರ್ , ಕೆ. ವೀರೇಶಲಿಂಗಂ ಪ್ರಾಚೀನ ಸಾಹಿತ್ಯಕ್ಕೆ ತಿಕ್ಕನನಂತೆ. ಆಧುನಿಕ ಸಾಹಿತ್ಯಕ್ಕೆ ವೀರೇಶಲಿಂಗಂ ತಿರುಪತಿ ವೆಂಕಟೇಶ್ವರ ಕವಿಗಳು ಆಧುನಿಕ ಕಾಲದ ಜೋಡಿ ಕವಿಗಳಲ್ಲಿ ಮುಖ್ಯರಾದವರು. ದಿವಾಕರ್ಲ ತಿರುಪತಿಶಾಸ್ತ್ರಿ, ಚೆಳ್ಳಪಿಳ್ಳ ವೆಂಕಟಶಾಸ್ತ್ರಿ ಎಂಬ ಕವಿಗಳು ತೆಲುಗಿನ ವಿಶಿಷ್ಟ ಸಾಹಿತ್ಯಿಕ ಪ್ರದರ್ಶನಗಳಾದ ಅಷ್ಟಾವಧಾನ ಮತ್ತು ಶತಾವಧಾನಗಳನ್ನು ಜನಪ್ರಿಯಗೊಳಿಸಿದರು. ಆಧುನಿಕ ತೆಲುಗು ಕಾವ್ಯದ ಇತಿಹಾಸದಲ್ಲಿ ಸಿ. ಆರ್. ರೆಡ್ಡಿಯವರ ''ಮುಸಲಮ್ಮ ಮರಣಮು'' ಹೆಸರಿಸುವಂಥದ್ದು. ಜನಪದ ಕಥನಗೀತೆ ಈ ಕಾವ್ಯದ ವಸ್ತು. ಗುರುಜಾಡ ಅಪ್ಪರಾವ್ ಆಧುನಿಕ ತೆಲುಗು ಕಾವ್ಯದ ಆದ್ಯ ಪ್ರವರ್ತಕರೆಂದು ಹೆಸರು ಪಡೆದರು. ಇವರ 'ಮುತ್ಯಾಲಸರವು' ಪ್ರಮುಖ ಕೃತಿ, ಅಕ್ಷರ ಛಂದಸ್ಸಿನ ಪದ್ಯಗಳಿಗೆ ಮಾನ್ಯತೆಯಿದ್ದ ಕಾಲದಲ್ಲಿ ಮಾತ್ರ ಛಂದಸ್ಸಿನ ಗೇಯರೂಪಕ್ಕೆ ಕಾವ್ಯಮಾಧ್ಯಮವನ್ನು ತಿರುಗಿಸಿದ್ದು ಅಪ್ಪರಾಯರ ಮಹತ್ವದ ಕೊಡುಗೆಯಾಗಿದೆ. ರಾಯಪ್ರೋಲು ಸುಬ್ಬಾರಾವ್ ಆಧುನಿಕ ತೆಲುಗು ಕಾವ್ಯಕ್ಕೆ ಹೊಸ ಚೇತನವನ್ನು ತುಂಬಿದ ಪ್ರಭಾವಶಾಲಿ ಕವಿಗಳಲ್ಲಿ ಪ್ರಮುಖರು. ಇವರ 'ತೃಣಕಂಕಣಮು' ಭಾವಕಾವ್ಯ (ರೊಮ್ಯಾಂಟಿಕ್) ಕ್ಕೆ ನಾಂದಿಯಾಯಿತು. ಅನೇಕ ವಿಷಯಗಳಲ್ಲಿ

ನವ್ಯತೆಯನ್ನು ತಂದರು. ಸ್ಮೃತಿ ಗೀತೆಗಳಿಗೂ ಮಾರ್ಗದರ್ಶಕರು. ಇವರ ಕಾವ್ಯದಲ್ಲಿ ಛಂದೋ ವೈವಿಧ್ಯ, ವಸ್ತು ವೈವಿಧ್ಯ, ಭಾವ ವೈವಿಧ್ಯ ಹಾಗೂ ಶೈಲಿವೈವಿಧ್ಯವಿದೆ. ಇವರು ಅನೇಕ ಕವಿಗಳ ಮೇಲೆ ಪ್ರಭಾವ ಬೀರಿದರು. ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ ಭಾವಕಾವ್ಯ, ಅಭ್ಯುದಯ ಕಾವ್ಯ ಪ್ರಗತಿಶೀಲ, ಅತಿನವ್ಯ ಹೀಗೆ ಕಾಲಕ್ಕನುಗುಣವಾಗಿ ಕಾವ್ಯವು ಬದಲಾವಣೆ ಹೊಂದುತ್ತಾ ಬಂದಿತು. ಇದಕ್ಕೆಲ್ಲಾ ಕಾರಣ ಹೊಸ ವಿಚಾರಗಳು, ಧೋರಣೆಗಳು ಅವರ ತಾತ್ವಿಕ ವಿಚಾರಗಳು ಮುಖ್ಯವಾಗಿ ಕಾಣುತ್ತವೆ. ಈ ಎಲ್ಲಾ ಕಾವ್ಯದ ವಿರುದ್ಧ ಸಿಡಿದೆದ್ದು ಹೊಸ ಕಾವ್ಯ ಪ್ರಯೋಗವಾಗಿ ದಿಗಂಬರ ಕಾವ್ಯವು ಉದಯಿಸಿತು.

ದಿಗಂಬರ ಕವಿಗಳು ಎಂದರೆ ಹೆಚ್ಚು ಕಡಿಮೆ ಸಮಾನವಾದ ವಯಸ್ಕರಾದ ಆರು ಜನ ತರುಣ ಕವಿಗಳು. ನಗ್ನಮುನಿ (ಕೇಶವರಾವ್), ನಿಖಿಲೇಶ್ವರ (ಯಾದವರೆಡ್ಡಿ) ಜ್ವಾಲಾಮುಖಿ (ರಾಘವಾಚಾರಿ), ಚೆರಬಂಡರಾಜು (ಭಾಸ್ಕರರಾವ್), ಬೈರವಯ್ಯ (ಮನಮೋಹನ್ ಸಹಾಯ್), ಮತ್ತು ಮಹಾಸ್ವಪ್ನ (ಕಮ್ಮಶೆಟ್ಟಿ ವೆಂಕಟೇಶ್ವರರಾವ್), ಈ ಆರು ಜನ ತರುಣ ಕವಿಗಳು ತಮ್ಮದೇ ಆದ ವೈಚಾರಿಕ ನೆಲೆಯಲ್ಲಿ ಕಾವ್ಯವನ್ನು ರಚಿಸಿದರು. ಇವರ ಕಾವ್ಯ ಪ್ರಕಾರವು ತೆಲುಗು ಸಾಹಿತ್ಯದಲ್ಲಿ ದಿಗಂಬರ ಕಾವ್ಯ ಎಂಬ ಹೆಸರನ್ನು ಪಡೆದುಕೊಂಡಿತು. ಈ ಕಾವ್ಯವು ಹೊಸಪದ್ಧತಿ, ಹೊಸ ತಿರುವನ್ನು ಪಡೆಯಿತು. ಈ ಕವಿಗಳಿಗಿಂತ ಹಿಂದೆ ಶ್ರೀರಂಗಂ ಶ್ರೀನಿವಾಸರಾವ್‌ರವರಲ್ಲಿ ಹೊಸ ಕಾವ್ಯದ ಸೂಚನೆ ಕಂಡುಬರುತ್ತದೆ.

ದಿಗಂಬರ ಕಾವ್ಯವು ಯಾವುದೇ ಮತ, ಧರ್ಮ, ಜಾತಿ ಆಧಾರವಾಗಿಟ್ಟುಕೊಂಡು ಹುಟ್ಟಿದ್ದಲ್ಲ.ಸ್ವಾತಂತ್ರ್ಯೋತ್ತರ ಸಮಾಜದ ಹಾಗೂ ಹಳಸಿದ ಸಂಸ್ಕೃತಿಯ ವಿರುದ್ಧ ಪ್ರತಿಭಟನೆಯನ್ನು ಪ್ರಾರಂಭಿಸುತ್ತಾ ಪ್ರಕಟಗೊಂಡ ಆಂದೋಲನವೇ ದಿಗಂಬರ ಕಾವ್ಯ. ದಿಗಂಬರ ಕಾವ್ಯ ಮುಚ್ಚು ಮರೆಯಿಲ್ಲದೆ ಹೊಸ ರೀತಿಯ ಅಭಿವ್ಯಕ್ತಿಯ ಮೂಲಕ ಮುನ್ನಡೆಸಿದ ಸಾಹಿತ್ಯದ ಆಂದೋಲನವಾಗಿದೆ. ದಿಗಂಬರ ಕಾವ್ಯವು ತೆಲುಗು ಸಾಹಿತ್ಯದಲ್ಲಿ ಹೊಸ ಸಾಮಾಜಿಕ, ರಾಜಕೀಯ, ಅರಿವನ್ನು ಮೂಡಿಸುವಲ್ಲಿ ಸಫಲವಾಯಿತು.

ದಿಗಂಬರ ಕಾವ್ಯದಲ್ಲಿ ಸಾಮಾಜಿಕ ಕಳಕಳಿಯನ್ನು ಕಾಣಬಹುದು. ಅವರ ಕಾವ್ಯಗಳ ಕನ್ನಡ ಅನುವಾದವು ಪ್ರಕಟವಾಗಿವೆ. ದಿಗಂಬರ ಕವಿಗಳ ಪರಂಪರೆ, ಅವರ ವೈಚಾರಿಕ ನಿಲುವುಗಳು, ಅವರುಗಳ ಪರಿಚಯವನ್ನು ಕುರಿತಂತೆ ಇಲ್ಲಿ ಗಮನಹರಿಸಬಹುದು. ಕನ್ನಡದಲ್ಲಿ ಈ ಕವಿಗಳ ಪರಿಚಯ ಹಾಗೂ ಅಧ್ಯಯನವು ವ್ಯಾಪಕವಾಗಿ ನಡೆದಿಲ್ಲ. ಈ ಕಾರಣಕ್ಕಾಗಿ ದಿಗಂಬರ ಕಾವ್ಯದ ವೈಚಾರಿಕ ನಿಲುವುಗಳು ಹಾಗೂ ಧೋರಣೆಗಳನ್ನು ಕುರಿತಂತೆ ಅಧ್ಯಯನ ಕೈಗೊಳ್ಳಲು ಉದ್ದೇಶಿಸಿದೆ. ಆ ಮೂಲಕ ಕಾವ್ಯದ ತಾತ್ವಿಕ ನೆಲೆಯನ್ನು ಚರ್ಚಿಸಲು ಉದ್ದೇಶಿಸಲಾಗಿದೆ.

### ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ತೆಲುಗು ದಿಗಂಬರ ಕಾವ್ಯದ ಹುಟ್ಟು ಅದರ ತಾತ್ವಿಕ ನಿಲುವುಗಳು, ಅಂದಿನ ಸಾಮಾಜಿಕ ಸ್ಥಿತಿಗತಿಗಳು, ರಾಜಕೀಯ ಪರಿಸ್ಥಿತಿ ಇತ್ಯಾದಿಗಳನ್ನು ಇಲ್ಲಿ ಚರ್ಚಿಸಲು ಉದ್ದೇಶಿಸಿದೆ. ದಿಗಂಬರ

ಕಾವ್ಯದಲ್ಲಿ ವೈಚಾರಿಕತೆಯು ಹೇಗೆ ಅಭಿವ್ಯಕ್ತಗೊಂಡಿದೆ ಎಂಬುದನ್ನು ಸಮಗ್ರವಾಗಿ ಪರಿಶೀಲನೆಗೊಳಪಡಿಸುವುದು ಅತ್ಯಂತ ಉಪಯುಕ್ತ. ಹಾಗೆ ಮಾಡುವುದರಿಂದ ಸಾಮಾಜಿಕ ವ್ಯವಸ್ಥೆಯಲ್ಲಿ ಒಂದು ಮುಖ್ಯವಾದ ಸಾಂಸ್ಕೃತಿಕ ದಾಖಲೆಯ ಬಗೆಗಿನ ಅರಿವಾಗುತ್ತದೆ. ಅಲ್ಲದೆ ಒಂದು ನಿರ್ದಿಷ್ಟ ಕಾಲದೇಶಬದ್ಧವಾದ ಕಾವ್ಯವು ಅದರಲ್ಲಿ ಅನನ್ಯ ಚಿಂತನೆಗಳು ಗರ್ಭೀಕರಿಸಿಕೊಂಡ ಬಗೆಯನ್ನು ಕಂಡುಕೊಳ್ಳಬಹುದು. ಕಾವ್ಯದ ಅನನ್ಯತೆಯನ್ನು ಅರಿಯಬೇಕಾದರೆ ಕಾವ್ಯದಲ್ಲಿ ಅಳವಡಿಸಿಕೊಂಡಿರುವ ತನ್ನದೇ ಆದ ತಾತ್ವಿಕ ಸಿದ್ಧಾಂತಗಳನ್ನು ಮೊದಲು ತಿಳಿಯಬೇಕಾಗುತ್ತದೆ.

ಸಾಹಿತ್ಯ ಕೇವಲ ಕಲಾತ್ಮಕ ಅಭಿವ್ಯಕ್ತಿಯಲ್ಲ. ಅದು ಕವಿಯ ಅಭಿರುಚಿ, ಆತ ತನ್ನದಾಗಿಸಿಕೊಂಡಿರುವ ಕಾವ್ಯದ ಪರಂಪರೆ, ತನ್ನ ಕಾಲದ ಸಾಹಿತ್ಯಿಕ ಸನ್ನಿವೇಶಕ್ಕೆ ಆತ ಸ್ಪಂದಿಸಿರುವ ಹಿನ್ನೆಲೆ, ಅವನ ಭಾಷೆಯ ವ್ಯುತ್ಪತ್ತಿ ವೈಶಿಷ್ಟ್ಯ ಮುಂತಾದವನ್ನು ಒಳಗೊಂಡಿರುತ್ತದೆ. ಈ ಉದ್ದೇಶವನ್ನು ಲಕ್ಷ್ಯದಲ್ಲಿರಿಸಿಕೊಂಡು ದಿಗಂಬರ ಕವಿಗಳ ನಿಲುವುಗಳನ್ನು ಅಧ್ಯಯನ ಮಾಡಲಾಗಿದೆ. ದಿಗಂಬರ ಕಾವ್ಯದ ಪ್ರೇರಣೆ, ಪ್ರಭಾವಗಳನ್ನೂ ಸಹ ಗಮನದಲ್ಲಿ ಇಟ್ಟುಕೊಂಡು ಅಧ್ಯಯನ ಕೈಗೊಳ್ಳಲಾಗಿದೆ. ಈ ವಿಷಯಕ್ಕೆ ಪೂರಕವಾಗಿ ಪ್ರಸ್ತುತ ಸಮಾಜದ ಚಿಂತನೆಗಳು ಹಾಗೂ ವಾಸ್ತವಿಕ ನೆಲೆಯಲ್ಲಿ ಸಾಹಿತ್ಯ ಚಿಂತನೆಯ ಆಲೋಚನೆಗಳನ್ನು ಗ್ರಹಿಸಲು ಯತ್ನಿಸಲಾಗಿದೆ.

ಪ್ರಸ್ತುತ ನಿಬಂಧವನ್ನು ಅಧ್ಯಯನದ ಸೌಲಭ್ಯಕ್ಕಾಗಿ ಮೂರು ಅಧ್ಯಾಯಗಳಲ್ಲಿ ವಿಂಗಡಿಸಿಕೊಳ್ಳಲಾಗಿದೆ. ಮೊದಲ ಅಧ್ಯಾಯದಲ್ಲಿ ಪ್ರಾಸ್ತಾವಿಕವಾಗಿ ತೆಲುಗು ಸಾಹಿತ್ಯ ಪರಂಪರೆ ಹಾಗೂ ದಿಗಂಬರ ಕಾವ್ಯದ ಬಗೆಗೆ ಸವಿವರವಾಗಿ ವಿವರಿಸಲಾಗಿದೆ. ಈ ಅಧ್ಯಾಯದಲ್ಲಿ ತೆಲುಗಿನ ಪ್ರಾಚೀನ ಸಾಹಿತ್ಯದ ಆದಿಕವಿ ನನ್ನಯನಿಂದ ಆರಂಭಿಸಿ ಎಲ್ಲಾ ಪ್ರಮುಖ ಕವಿಗಳ ಸಾಹಿತ್ಯಿಕ ಅಂಶಗಳನ್ನು, ಅವರ ನಿಲುವುಗಳನ್ನು, ದೃಷ್ಟಿಕೋನಗಳನ್ನು ಹೇಳಲಾಗಿದೆ. ಎರಡನೆಯ ಅಧ್ಯಾಯದಲ್ಲಿ ತೆಲುಗು ದಿಗಂಬರ ಕವಿಗಳ ಹುಟ್ಟು ಬೆಳವಣಿಗೆ ಕಾವ್ಯದ ಹುಟ್ಟು ಅದು ಬೆಳೆದು ಬಂದ ರೀತಿ, ಅವರ ವೈಚಾರಿಕ ನೆಲೆಗಳು, ಅವರ ತಾತ್ವಿಕತೆಗಳನ್ನು ಪ್ರತ್ಯೇಕವಾಗಿ ಗಮನಿಸಲಾಗಿದೆ. ಮೂರನೆಯ ಅಧ್ಯಾಯದಲ್ಲಿ ತೆಲುಗು ದಿಗಂಬರ ಕಾವ್ಯದ ವೈಚಾರಿಕ ನಿಲುವುಗಳು ಮತ್ತು ಅನನ್ಯತೆಯನ್ನು ಕುರಿತು ಹೇಳಲಾಗಿದೆ. ಜೊತೆಗೆ ಕನ್ನಡ ಕಾವ್ಯ ಸಂದರ್ಭಕ್ಕಿಂತ ದಿಗಂಬರ ಕಾವ್ಯ ಹೇಗೆ ಭಿನ್ನವಾಗಿದೆ ಎಂಬುದನ್ನು ಕಂಡುಕೊಳ್ಳಲು ಪ್ರಯತ್ನಿಸಲಾಗಿದೆ. ದಿಗಂಬರ ಕವಿಗಳ ವೈಶಿಷ್ಟ್ಯವನ್ನು ಕುರಿತಂತೆ ಸಮಾರೋಪದಲ್ಲಿ ಕ್ರೋಡೀಕರಿಸಿ ಹೇಳಲಾಗಿದೆ.

**ಅಡಿ ಟಿಪ್ಪಣಿ**

೧. ಮನುಮಸಿದ್ಧಿ ಕಾಕತೀಯರಿಗೆ ಸಾಮಂತನಾಗಿ ನೆಲ್ಲೂರು ಪ್ರದೇಶವನ್ನು ಆಳುತ್ತಿದ್ದ ರಾಜ.

■

## ಅಧ್ಯಾಯ-೨
## ತೆಲುಗು ಸಾಹಿತ್ಯ ಪರಂಪರೆ ಮತ್ತು ದಿಗಂಬರ ಕಾವ್ಯ

ಸಾಮಾನ್ಯವಾಗಿ ಯಾವುದೇ ಭಾಷೆಯ ಹುಟ್ಟಿನೊಂದಿಗೇ ಒಂದು ಬಗೆಯ ಸಾಹಿತ್ಯದ ಉದಯವೂ ಆಗುತ್ತದೆ. ಭಾಷೆಯ ಉದಯವೆಂದರೆ ಸಾಹಿತ್ಯದ ಉದಯವೇ ಆಗಿದೆ. ಸಾಹಿತ್ಯದ ಮೂಲಸತ್ವವು ಅಭಿವ್ಯಕ್ತಿಯ ಸಾಧನವಾದ ಭಾಷೆಯಲ್ಲಿಯೂ ಇರುತ್ತದೆ. ಇಂದಿನ ಭಾಷೆಗಿಂತ ತೀರ ಹಿಂದಿನ ಭಾಷೆ ಕಾವ್ಯಮಯವಾಗಿತ್ತು. ಇಂದಿನ ಕಾಡುಜನ ಎಂದು ಕರೆಸಿಕೊಳ್ಳುವವರ ನುಡಿಯಲ್ಲಿ ಸಾಹಿತ್ಯದ ಸವಿಯಿದೆ. ಈ ಬಗೆಯ ಸಾಹಿತ್ಯಕ್ಕೆ ಬಾಯಿಯೇ ಆಧಾರ. ಇದಕ್ಕೆ ಲಿಪಿಯಿಲ್ಲ. ಆದ್ದರಿಂದ ಜನಪದ ಸಾಹಿತ್ಯಕ್ಕೆ ಉನ್ನತ ಸ್ಥಾನವಿದೆ. ಬಹುಶಃ ಎಲ್ಲಾ ಭಾಷೆಗಳಲ್ಲಿ ಇರುವಂತೆ ತೆಲುಗು ಸಾಹಿತ್ಯದಲ್ಲಿ ಜನಪದ ಸಾಹಿತ್ಯ ವಿಪುಲವಾಗಿದೆ. ಯಾವುದೇ ಬೆಳೆಯುತ್ತಿರುವ ಭಾಷೆಯಲ್ಲಿ ಯಾವುದೋ ಒಂದು ಕಾಲಕ್ಕೆ ಗ್ರಂಥಸ್ಥವಾದ ಸಾಹಿತ್ಯವು ತಲೆದೋರುತ್ತದೆ. ಇದನ್ನೆ ಮುಂದೆ ಪರಂಪರೆಯಾಗಿ ಸ್ವೀಕರಿಸಲಾಗುತ್ತದೆ. ಹಾಗಾಗಿ ಆಯಾ ಕಾಲಕ್ಕೆ ಮಾತ್ರ ಸಾಹಿತ್ಯವು ಉದಯವಾಗಲು ಕಾರಣಗಳೇನು ಎಂಬುದನ್ನು ತಿಳಿಯುವುದು ಎಲ್ಲ ಭಾಷೆಯ ಸಾಹಿತ್ಯದ ಅಧ್ಯಯನದಲ್ಲಿ ಅವಶ್ಯವಿದೆ. ಎಲ್ಲ ಭಾಷೆಯ ಸಾಹಿತ್ಯದ ಉದಯಕ್ಕೆ ಸ್ಪಷ್ಟ ಹಾಗೂ ಸಮಾನವಾದ ಕಾರಣಗಳು ಕೆಲವಿದ್ದರೆ, ವಿಶಿಷ್ಟ ಪರಿಸ್ಥಿತಿಯಲ್ಲಿ ಭಿನ್ನವಾದ ಕೆಲವು ಕಾರಣಗಳೂ ಇರಬಹುದು.

ಸಾಹಿತ್ಯವು ಸಮಾಜದೊಡನೆ ಅವಿನಾಭಾವ ಸಂಬಂಧ ಹೊಂದಿದೆ. ಸಮಾಜದೊಳಗೆ ಸಾಹಿತ್ಯ ಹುಟ್ಟುತ್ತದೆ. ಸಾಹಿತ್ಯ ಸೃಷ್ಟಿ ಮಾಡುವವರೂ ಸಮಾಜದ ಒಬ್ಬ ಸದಸ್ಯ. ಸಾಹಿತ್ಯವು ಸಮಾಜವನ್ನು ಅವಲಂಬಿಸಿದೆ. ಒಂದು ಸಾಹಿತ್ಯ ರಚನೆಗೆ ಅಂದಿನ ಸಾಮಾಜಿಕ ಸ್ಥಿತಿಗತಿಯು ಪ್ರಮುಖ ಪಾತ್ರ ವಹಿಸುತ್ತದೆ. ಪ್ರಾಚೀನ ತೆಲುಗು ಸಾಹಿತ್ಯ ಅಥವಾ ಕವಿಗಳ ಪರಂಪರೆ, ಧೋರಣೆಗಳು, ಆಶಯಗಳು ಕಾವ್ಯ ಸ್ವರೂಪಗಳನ್ನು ಮನಗಾಣಲು ಯತ್ನಿಸುವುದು ಇಲ್ಲಿನ ಉದ್ದೇಶವಾಗಿದೆ. ತೆಲುಗು ಸಾಹಿತ್ಯ ಪರಂಪರೆಯಲ್ಲಿ ಕವಿಗಳ ವಿಚಾರಗಳ ಬಗೆಗೆ ಅವರು ವ್ಯಕ್ತಪಡಿಸಿದ ಉಕ್ತಿಗಳಲ್ಲಿ ಅವರ ನಿಲುವುಗಳನ್ನು ಅರ್ಥಮಾಡಿಕೊಳ್ಳಬಹುದಾಗಿದೆ. ತೆಲುಗು ಸಾಹಿತ್ಯದಲ್ಲಿ ಬರುವ ಕವಿಗಳು ತಮ್ಮದೇ ಆದ ರೂಢಿಗತವಾದ ಪರಿಕಲ್ಪನೆಯಲ್ಲಿ ಕಾವ್ಯದ ಬಗೆಗಿನ ಪಾರಂಪರಿಕ ಭಾವಕೋಶಗಳಿಂದ ಹೊರತಾದವರಲ್ಲ ಎಂಬುದನ್ನು ಕಾಣಬಹುದಾಗಿದೆ. ಹಾಗೆ ಕೆಲವು ಮುಖ್ಯ ಕವಿಗಳ ಗ್ರಹಿಕೆ ಹಾಗೂ ಅವರ ಕಾವ್ಯ ಪ್ರಕ್ರಿಯೆಗಳೇನು ಎಂಬುದನ್ನು ಸ್ಥೂಲವಾಗಿ ಇಲ್ಲಿ ವಿಚಾರ ಮಾಡಬಹುದಾಗಿದೆ.

ಒಂದು ಭಾಷಾ ಸಾಹಿತ್ಯವನ್ನು ಸ್ಥೂಲವಾಗಿ ಚಾರಿತ್ರಿಕವಾಗಿ ಅರ್ಥಮಾಡಿಕೊಳ್ಳಬೇಕಾದರೆ ಆ ಸಾಹಿತ್ಯವನ್ನು ವಿಭಾಗ ಮಾಡಿಕೊಳ್ಳುವುದು ಅವಶ್ಯ. ಇದರಿಂದ ಆಯಾ ಕಾಲದ ವಿಶಿಷ್ಟವಾದ, ಸಮಾನವಾದ, ಅಂಶಗಳು ಗೋಚರಿಸುತ್ತದೆ. ಈ ವಿಭಾಗ ಕ್ರಮವನ್ನು ಕೆಲವು ವಿದ್ವಾಂಸರು ಕವಿಗಳನ್ನು ಗುರಿಯಾಗಿಟ್ಟುಕೊಂಡು ಮಾಡಿದರೆ ಕೆಲವರು ರಾಜವಂಶವನ್ನು ಆಧಾರವಾಗಿಟ್ಟುಕೊಂಡು ವಿಭಜಿಸಿದ್ದಾರೆ. ಆದರೆ ಆಚಾರ್ಯ ಪಿಂಗಳಿ ಲಕ್ಷ್ಮೀಕಾಂತ ಇವರು ಮಾಡಿದ ವಿಭಾಗ ಕ್ರಮವನ್ನು ಎಲ್ಲ ವಿದ್ವಾಂಸರು ಅಂಗೀಕರಿಸಿದ್ದಾರೆ.

ಒಂದು ಕಾಲದ ಸಾಹಿತ್ಯದಲ್ಲಿ ಸಮಾನವಾದ ವಿಶಿಷ್ಟ ಅಂಶಗಳು ಇದ್ದಾಗ ಆ ಕಾಲವನ್ನು ಒಂದು ಯುಗವೆಂದು ಪರಿಗಣಿಸುತ್ತಾರೆ. ತೆಲುಗು ಸಾಹಿತ್ಯ ಚರಿತ್ರೆಗಾರರು ಬೇರೆ ಬೇರೆ ವಿಧದಲ್ಲಿ ಯುಗ ವಿಭಜನೆ ಮಾಡಿದ್ದಾರೆ. ಆಯಾ ಕಾಲದಲ್ಲಿ ಪ್ರತಿಭಾವಂತರಾದ ಕವಿಗಳನ್ನಿಟ್ಟುಕೊಂಡು ನನ್ನಯ ಯುಗ, ತಿಕ್ಕನ ಯುಗ, ಶ್ರೀ ಶ್ರೀ ಯುಗ ಎಂದೂ ವಿಭಜನೆ ಮಾಡಿದ್ದಾರೆ.

''ತೆಲುಗು ಸಾಹಿತ್ಯ ಪರಂಪರೆಯನ್ನು ಅರ್ಥೈಸಿಕೊಳ್ಳಲು ಆಚಾರ್ಯ ಪಿಂಗಳಿ ಲಕ್ಷ್ಮೀಕಾಂತರವರು ವಿಭಾಗ ಕ್ರಮವನ್ನು ಅನುಸರಿಸಿ ಇಲ್ಲಿ ವಿಷಯವನ್ನು ವಿಸ್ತರಿಸಲಾಗಿದೆ.

| | |
|---|---|
| ೧. ಪ್ರಾಚೀನಯುಗ ಕ್ರಿ.ಪೂ. | - ೧೦೦ ರಿಂದ ೧೦೦೦ರವರೆಗೆ |
| ೨. ನನ್ನಯ ಯುಗ | - ೧೧ ನೇ ಶತಮಾನ |
| ೩. ಶಿವಕವಿಯುಗ | - ೧೨ನೇ ಶತಮಾನ |
| ೪. ತಿಕ್ಕನ ಯುಗ | - ೧೩ನೇ ಶತಮಾನ |
| ೫. ಎರ್ರನ ಯುಗ | - ೧೩೦೦-೧೩೫೦ ರವರೆಗೆ |
| ೬. ಶ್ರೀನಾಥಯುಗ | - ೧೩೫೦-೧೫೦೦ ರವರೆಗೆ |
| ೭. ರಾಯಲ ಯುಗ ಅಥವಾ ಪ್ರಬಂಧಯುಗ | - ೧೫೦೦ ರಿಂದ ೧೬೦೦ ರವರೆಗೆ |
| ೮. ದಕ್ಷಿಣಾಂಧ್ರ ಯುಗ | - ೧೬೦೦ ರಿಂದ ೧೭೭೫ ರವರೆಗೆ |
| ೯. ಕ್ಷೀಣಯುಗ | - ೧೭೭೫ ರಿಂದ ೧೮೭೫ ರವರೆಗೆ |
| ೧೦. ಆಧುನಿಕ ಯುಗ | - ೧೮೭೫ ರಿಂದ |

ಲಿಖಿತವಾದ ಸಾಹಿತ್ಯ ಚರಿತ್ರೆಯನ್ನು ಯುಗಗಳಾಗಿ ವಿಭಜಿಸಿ ಎಷ್ಟೋ ವಿಶೇಷ ಸಾಹಿತ್ಯ ಕೃಷಿ ಮಾಡಿ ಅನೇಕ ಅಂಶಗಳನ್ನು ಪ್ರಕಟಿಸಿದವರೆಂದರೆ ಕಂದಕೂರಿ ವೀರೇಶಲಿಂಗಂ ಪಂತುಲು, ವೇಟೂರಿ [illegible] ಚಿಲಕೂರಿ ವೀರಭದ್ರರಾವು, ಗುರುಜಾಡ ಶ್ರೀರಾಮಮೂರ್ತಿ, ದಿವಾಕರ್ಲ ವೆಂಕಟಾವಧಾನಿ, ಕವಿತ್ವವೇದಿ, ಕೋರಾಡ ರಾಮಕೃಷ್ಣಯ್ಯ, ಬಂಡವಲ್ಲಿ ಲಕ್ಷ್ಮೀನಂದನಂ, ಚಾಗಟೆ ಶೇಷಯ್ಯ ಮುಂತಾದವರು''[೧].

## ೧. ಪ್ರಾಚೀನ ಯುಗ (ಕ್ರಿ. ಪೂ. ೨೦೦ ರಿದ ೧೦೦೦ ರವರೆಗೆ)

ನನ್ನಯನಿಗಿಂತ ಮೊದಲ ಕಾಲವನ್ನು ಪ್ರಾಜ್ಞನ ಯುಗ ವೆಂದು ಕರೆಯುವರು. ೧೧ನೇ ಶತಮಾನದ ಆರಂಭ ಕಾಲದ ತೆಲುಗು ಸಾಹಿತ್ಯವನ್ನು ಅರಿಯಬೇಕಾದರೆ ಪ್ರಧಾನವಾಗಿ ಶಾಸನಗಳೇ ಆಧಾರ. ಹಾಗೆ ಇತರ ಬೇರೆ ಭಾಷೆಗಳ ಗ್ರಂಥಗಳಲ್ಲಿ ಮೌಖಿಕವಾದ ಜಾನಪದ ಸಾಹಿತ್ಯದಲ್ಲಿ ಅಂದಿನ ಸಾಹಿತ್ಯದ ಸ್ಥಿತಿಗತಿಗಳನ್ನು ತಿಳಿದುಕೊಳ್ಳಬಹುದು. ಪ್ರಾಕೃತ ಭಾಷೆಯ ಹಾಲನ ಗಾಥಾಸಪ್ತಸತಿಯಲ್ಲಿ ತೆಲುಗು ಪದಗಳನ್ನು ಕಾಣಬಹುದು. ''ಕ್ರಿ.ಶ. ೧ನೇ ಶತಮಾನದಲ್ಲಿ ತೆಲುಗು ವ್ಯವಹಾರಿಕ ಭಾಷೆಯಾಗಿತ್ತೆಂದು ತಿಳಿದು ಬರುತ್ತದೆ. ಅಮರಾವತಿ ಸ್ತೂಪದಲ್ಲಿ 'ನಾಗಬು' ಶಬ್ದವೇ ಮೊದಲ ತೆಲುಗು ಪದ. ಶಾತವಾಹನರು, ಇಕ್ಷಾಂಕ ಮೊದಲಾದವರು ತಮ್ಮ ಶಾಸನಗಳನ್ನು ಸಂಸ್ಕೃತ ಪ್ರಾಕೃತದಲ್ಲಿ ಪ್ರಕಟಿಸಿದರು''[೨].

ಈ ಯುಗವನ್ನು ಕೆಲವರು ಪ್ರಾಚೀನಯುಗ, ಶಾಸನಯುಗ, ಅಂಧಕಾರಯುಗ ಮುಂತಾದ ಹೆಸರುಗಳಿಂದಲೂ ಕರೆಯುವರು. ಈ ಕಾಲದ ಸಾಹಿತ್ಯ ಪ್ರಧಾನವಾಗಿ ವಾಚಿಕ ರೂಪದ್ದು. ಲಿಖಿತರೂಪದ ಸಾಹಿತ್ಯ ಕೆಲವು ಶಾಸನಗಳಲ್ಲಿ ಮಾತ್ರ ಪದ್ಯ ರೂಪದಲ್ಲಿ ಕಾಣಸಿಗುತ್ತದೆ. ''ಕ್ರಿ.ಶ. ೮ನೇ ಶತಮಾನದ ಶಾಸನಗಳಲ್ಲಿ ತೆಲುಗಿನಲ್ಲಿ ಗದ್ಯ ರಚನೆ ಕಾಣಸಿಗುತ್ತದೆ. ಹಾಗೆ ಕೆಲವು ಕಡೆ ಪದ್ಯ ರಚನೆಗಳೂ ಇವೆ. ಪೂರ್ವ ಚಾಳುಕ್ಯರಾಜ ವಿಜಯಾದಿತ್ಯನ ಕಾಲದಲ್ಲಿ ಛಂದಸ್ಸಿನ ರೂಪದಲ್ಲಿ ಶಾಸನಗಳು ಸಿಗುತ್ತದೆ. ಕ್ರಿ.ಶ. ೮೪೮ರ ಪಂಡರಂಗನಿ ಅದ್ದಂಕಿ ಶಾಸನ ಇದು ತೆಲುಗು ಸಾಹಿತ್ಯದ ಮೊದಲ ಪದ್ಯವಾಗಿದೆ. 'ಪಟ್ಟಂಬು ಗಟ್ಟಿನ ಪ್ರಥಮಂಬು ನೆಡು ಬಲರವಂ ಬೊಪ್ಪಗ ಬೈಲೇಜಿಸೆನ ಪಟ್ಟುಬು ಗಟ್ಟಿಂಬೆ.' ಈ ವಿಧವಾದ ಪದ್ಯಗದ್ಯಾತ್ಮವಾದ ಚಂಪೂ ಪದ್ಧತಿ ಆ ಸಮಯದಲ್ಲಿ ಇತ್ತು. ಗುಣಗ ವಿಜಯಾದಿತ್ಯನ ಕಂದಕೂರಿ ಶಾಸನವೂ (೮೪೮) ಸಂಪೂರ್ಣವಾಗಿ ಪದ್ಯದಲ್ಲಿದೆ. ಕ್ರಿ.ಶ. ೮೮೫ರ ಪ್ರಾಂತದ ಯುದ್ಧಮಲ್ಲನ ಬೆಜವಾಡ ಶಾಸನದಲ್ಲಿ ಮಧ್ಯಕ್ಕರ ಛಂದಸ್ಸಿನಲ್ಲಿ ಐದು ಪದ್ಯಗಳು ಇವೆ.''[೩]

ಯಾವುದೇ ಭಾಷೆಯಲ್ಲಿ ಜಾನಪದ ಸಾಹಿತ್ಯವೇ ಮೊದಲ ಸಾಹಿತ್ಯವಾಗಿರುತ್ತದೆ. ಅದು ಮೌಖಿಕ ರೂಪದಲ್ಲಿ ಇರುತ್ತವೆ. ''ನನ್ನಯನಿಗಿಂತ ಮೊದಲು ಜಾನಪದ ಪದ್ಯಗಳು ಇದ್ದುವೆಂದು ತಿಳಿಯುತ್ತದೆ. ಈ ವಿಷಯವನ್ನು ನನ್ನಯ ತನ್ನ ಭಾರತದ ನಾಗಿಗೀತಗಳಲ್ಲಿ ಹೇಳಿಕೊಂಡಿದ್ದಾನೆ. ನನ್ನೆ ಚೋಡನಿ ಕುಮಾರ ಸಂಭವಂನಲ್ಲಿ ಉಯ್ಯಾಲ ಹಾಡುಗಳು, ಗೌಡು ಗೀತೆಗಳು ಕಾಣಸುತ್ತವೆ. ಪಾಲ್ಕುರಿಕೆ ಸೋಮನಾಥನ ತುಮ್ಮಿದ ಪದ್ಯಗಳು, ಗೊಬ್ಬಿ ಪದ್ಯಗಳು, ವೆನ್ನೆಲ ಪದ್ಯಗಳು, ಆನಂದ ಗೀತೆಗಳು, ಶಂಕರ ಗೀತೆಗಳು ಎಂದೆಲ್ಲಾ ಹೇಳಿಕೊಂಡಿದ್ದಾರೆ. ಹಾಡಿನ ರೂಪದ ಈ ದೇಸಿಯ ಕವಿತೆ ನನ್ನಯ ಕಾಲದವು ಎಂದು ತಿಳಿದುಬರುತ್ತದೆ.''[೪]

## ೨. ನನ್ನಯ ಯುಗ

ನನ್ನಯನು ವೆಂಗಿದೇಶದ ರಾಜಮಹೇಂದ್ರಪುರವನ್ನು ರಾಜಧಾನಿಯಾಗಿಟ್ಟುಕೊಂಡು ಆಳುತ್ತಿದ್ದ ಚಾಳುಕ್ಯರಾಜನಾದ ರಾಜರಾಜನರೇಂದ್ರನ ಆಸ್ಥಾನ ಕವಿಯಾಗಿದ್ದನು. ಈತನ ಕಾಲ ಸುಮಾರು ೧೧ನೇ ಶತಮಾನ. ನನ್ನಯನನ್ನು ತೆಲುಗಿನ ಆದಿಕವಿ ಎಂದು ಕರೆಯುವರು. ಕನ್ನಡಕ್ಕೆ ಪಂಪ ಆದಿಕವಿ ಇದ್ದಂತೆ ತೆಲುಗಿಗೆ ನನ್ನಯ ಆದಿಕವಿ. ೧೬ನೇ ಶತಮಾನದ ರಾಮರಾಜಭೂಷಣನೆಂಬ ಕವಿ ತನ್ನ 'ವಸುಚರಿತ್ರ' ದಲ್ಲಿ ತೆಲುಗು ಸಾಹಿತ್ಯವನ್ನು ನನ್ನಯ ಸೃಷ್ಟಿಸಿದ್ದಾನೆಂದು ಹೇಳಿದ್ದಾನೆ.

''ನನ್ನಯ ''ಆಂಧ್ರ ಭಾರತ '' ಅಲ್ಲದೆ ''ಚಾಮುಂಡಿ ವಿಲಾಸಂ'', ''ಇಂದ್ರವಿಜಯಂ'' ಎನ್ನುವ ಕಾವ್ಯಗಳು ಹಾಗೂ ''ಆಂಧ್ರಚಿಂತಾಮಣಿ '' ಎನ್ನುವ ಸಂಸ್ಕೃತ ವ್ಯಾಕರಣ ಗ್ರಂಥವನ್ನು ರಚಿಸಿದ್ದಾನೆ. ಆದರೆ ಈ ವ್ಯಾಕರಣ ಗ್ರಂಥದ ಬಗೆಗೆ ವಿವಾದವಿದೆ.''[೫]

''ತೆಲುಗು ಸಾಹಿತ್ಯಕ್ಕೆ ನನ್ನಯನ ಕೊಡುಗೆ ಅತ್ಯಂತ ವಿಶಿಷ್ಟವಾದುದು. ರಾಜರಾಜ ನರೇಂದ್ರನು ವ್ಯಾಸಭಾರತವನ್ನು ತೆಲುಗಿನಲ್ಲಿ ರಚಿಸಬೇಕೆಂದು ನನ್ನಯನನ್ನು ಕೇಳಿದಾಗ ಅವನು ಹೇಳಿದ ಮಾತಿನಲ್ಲಿ ಭಾರತ ರಚನೆ ಎಷ್ಟು ಕ್ಲಿಷ್ಟವಾಗಿತ್ತೆಂಬುದು ವ್ಯಕ್ತವಾಗುತ್ತದೆ. ''ತಾರೆಗಳನ್ನು ಎಣಿಸುವುದು, ಸರ್ವ ವೇದಶಾಸ್ತ್ರಗಳ ಸಾರವನ್ನರಿಯುವುದು, ಬುದ್ಧಿಬಾಹು ವಿಕ್ರಮದಿಂದ ದುರ್ಗಮಾರ್ಥ ಜಲದಿಂದ ಕೂಡಿದ ಭಾರತ ಭಾರತೀ ಸಮುದ್ರವನ್ನು ಈಜುವುದು ಬ್ರಹ್ಮನಿಗೂ ಸಾಧ್ಯವಿಲ್ಲ" ಈ ಮಾತುಗಳಲ್ಲಿ ಮಹಾಭಾರತದ ರಚನೆ ಒಂದು ಬೃಹದ್ಯೋಜನೆ ಎಂದು ತಿಳಿಯುತ್ತದೆ.''[೬]

ನನ್ನಯನು ಮಹಾಭಾರತವನ್ನು ರಚಿಸುವಾಗ ಅನೇಕ ವಿಷಯಗಳಲ್ಲಿ ಕನ್ನಡ ಸಾಹಿತ್ಯವು ಸ್ಫೂರ್ತಿಯನ್ನು ಕೊಟ್ಟಿರಬಹುದು. ನಾರಾಯಣಭಟ್ಟನು ನನ್ನಯನ ಸಮಕಾಲೀನ ಕವಿ, ಈತನು ಕನ್ನಡ ಸೇರಿದಂತೆ ಹಲವಾರು ಭಾಷೆಗಳಲ್ಲಿ ಪಂಡಿತನಾಗಿದ್ದನು. ಈ ಮಾತನ್ನು ನನ್ನಯನೇ ನಂದಂಪೂಡಿ ಶಾಸನದಲ್ಲಿ ಬರೆದಿದ್ದಾನೆ. ನನ್ನಯನು ತನ್ನ ''ತೆಲುಗು ಭಾರತದ '' ಪೀಠಿಕಾ ಭಾಗದಲ್ಲಿ ನಾರಾಯಣಭಟ್ಟನನ್ನು ಕುರಿತು ಕುರುಕ್ಷೇತ್ರದಲ್ಲಿ ಅರ್ಜುನನಿಗೆ ಶ್ರೀಮನ್ ನಾರಾಯಣನು ಸಹಾಯ ಮಾಡಿದಂತೆ ತನಗೆ ಈ ನಾರಾಯಣಭಟ್ಟನು ಸಹಾಯ ಮಾಡಿದನೆಂದು ಹೇಳಿಕೊಂಡಿರುತ್ತಾನೆ. ಆದ್ದರಿಂದ ನಾರಾಯಣಭಟ್ಟನು ಕನ್ನಡದ ಪಂಪಭಾರತ 'ಚಂಪೂ'ವಿನಲ್ಲಿ ರಚಿಸಿದ್ದನ್ನು ಕಂಡು ನನ್ನಯನು ಸಹ 'ಚಂಪೂ' ಛಂದಸ್ಸಿನಲ್ಲಿ ಕಾವ್ಯವನ್ನು ರಚಿಸಬೇಕೆಂದು ಪಂಪನ ಮಾರ್ಗವನ್ನು ಅನುಸರಿಸಿದನು. ಮುಂದೆ ತೆಲುಗು ಸಾಹಿತ್ಯದಲ್ಲಿ ಬಂದ ಕವಿಗಳು ಈ ಮಾರ್ಗವನ್ನು ಅನುಸರಿಸಲು ಮಾರ್ಗದರ್ಶಕನಾದನು. ಒಟ್ಟಾರೆ ನನ್ನಯನು ಪಂಪಭಾರತವನ್ನು ಅನುಸರಿಸಿದನು.

ನನ್ನಯನು ತೆಲುಗುಭಾರತವನ್ನು ರಚಿಸುವ ಕಾಲಕ್ಕೆ ಮೊದಲೇ ಬೇರೆ ಬೇರೆ ಭಾಷೆಗಳಲ್ಲಿ ವ್ಯಾಸಭಾರತವನ್ನು ಆಧರಿಸಿದ ಕೆಲವು ಕಾವ್ಯಗಳು ರಚಿತವಾಗಿದ್ದವು. ಕನ್ನಡದಲ್ಲಿ ವಿಕ್ರಮಾರ್ಜುನಯ ವಿಜಯ (ಪಂಪಭಾರತ), ರನ್ನನ ಗದಾಯುದ್ಧ, ತಮಿಳಿನ ವೆಣ್ಬಾಗೀತೆಗಳಲ್ಲಿ ಪೆರುಂದೇವನಾರ್ ಬರೆದ ಭಾರತ. ಹಾಗೂ ದೂತವಾಕ್ಯ, ಕರ್ಣಭಾರತ, ಊರುಭಂಗ ಮುಂತಾದ ನಾಟಕಗಳು ಪ್ರಚಲಿತವಾಗಿದ್ದವು. ಕನ್ನಡದಂತೆ, ತೆಲುಗು ಸಾಹಿತ್ಯವು ಕೂಡ ಅನುವಾದದ ಮೂಲಕ ಪ್ರಾರಂಭವಾಗಿದೆ. ನನ್ನಯನು ತೆಲುಗು ಭಾರತವನ್ನು ತನ್ನ ರಾಜನ ಕೋರಿಕೆಯ ಮೇರೆಗೆ ರಚಿಸಿದನು.

ನನ್ನಯನು ತಾನು ಬರೆಯುತ್ತಿರುವ ಭಾರತದಲ್ಲಿ ತನ್ನ ರಾಜನಾದ ರಾಜರಾಜನರೇಂದ್ರನ ಗುಣಗಾನಗಳನ್ನು ಮಾಡಿದ್ದಾನೆ. ''ತೆಲುಗು ಭಾರತ'' ಅನುವಾದವನ್ನು ತನ್ನ ರಾಜನ ಕೋರಿಕೆಯ ಮೇರೆಗೆ ರಚಿಸಿದ. ತನ್ನ ಕಾವ್ಯದ ಪಾತ್ರಗಳನ್ನು ಸಂದರ್ಭಕ್ಕೆ ಹೊಂದಿಕೊಳ್ಳುವಂತೆ ಬಹು ನಾದಮಯವಾಗಿ ಬರೆದಿದ್ದಾನೆ. ರಾಜನಾದ ರಾಜರಾಜನರೇಂದ್ರನು ತನ್ನ ವಂಶದವರ ಚರಿತ್ರೆಯನ್ನು ತಿಳಿಯಲು ತೆಲುಗು ಭಾರತವನ್ನು ರಚಿಸಲು ನನ್ನಯನಿಗೆ ಸೂಚಿಸಿದನು. ಹಾಗಾಗಿ ನನ್ನಯ ತೆಲುಗುಭಾರತದಲ್ಲಿ ಆಗಿನ ಸಂದರ್ಭವನ್ನು ಅನುಸರಿಸಿ ಕಾವ್ಯವನ್ನು ರಚಿಸಿದನು. ಆಗಿನ ಕಾಲವು ಪುರಾಣಕಥೆಗಳ ಕಾಲ. ರಾಜವಂಶಸ್ಥರ ಕಾಲ. ಕವಿಗಳು ರಾಜನ ಆಶ್ರಯದಲ್ಲಿ ಇದ್ದುದ್ದರಿಂದ ರಾಜಧರ್ಮಕ್ಕೆ ತಕ್ಕಂತೆ ರಚಿಸಬೇಕಾಗಿತ್ತು. ಆದರೆ ಪ್ರತಿಭಟನೆ ಮನೋಭಾವವೇ ಇರಲಿಲ್ಲ. ನನ್ನಯನು ಕಾವ್ಯ ರಚಿಸುವಾಗ ಅನವಶ್ಯಕ, ಸಂದರ್ಭ, ವರ್ಣನೆಗಳನ್ನು, ಕಥನಗಳನ್ನು ಕೈಬಿಟ್ಟಿದ್ದಾನೆ. ಸಂದರ್ಭಕ್ಕೆ ತಕ್ಕಂತೆ ಭಿನ್ನ ಭಿನ್ನವಾದ ಸನ್ನಿವೇಶಗಳಿಗೆ, ರಸಭಾವಗಳಿಗೆ ತಕ್ಕಂತೆ ಕಾವ್ಯ ರಚಿಸಿದನು.

**೩. ಶಿವ ಕವಿಯುಗ**

ತೆಲುಗು ಸಾಹಿತ್ಯ ಚರಿತ್ರೆಯಲ್ಲಿ ನನ್ನಯ, ತಿಕ್ಕನ ಮಧ್ಯದ ಕಾಲವನ್ನು (ಕ್ರಿ.ಶ. ೧೧೦೦-೧೨೦೫) ಶಿವಕವಿ ಯುಗವೆಂದು ಕರೆಯುವರು. ಶೈವಮತದ ಧೋರಣೆಗಳಿಗೆ ಅನುಗುಣವಾಗಿ ಕಾವ್ಯವು ಈ ಯುಗದಲ್ಲಿ ಬಂತು. ನನ್ನೆಚೋಡ, ಮಲ್ಲಿಕಾರ್ಜುನ ಪಂಡಿತಾರಾಧ್ಯ, ಪಾಲ್ಕುರಿಕೆ ಸೋಮನಾಥ ಶೈವ ಮತಾನುಸಾರವಾಗಿ ಕಾವ್ಯವನ್ನು ರಚಿಸಿದರು. ಅಲ್ಲದೆ, ಶ್ರೀಪತಿ ಪಂಡಿತ, ಶಿವಲೆಂಕಮಂಚನ, ಯಥಾಹಕ್ಕುಲ ಅನ್ನಮಯ್ಯ ಮೊದಲಾದವರು ಶಿವಕವಿಗಳು. ಈ ಯುಗದ ಕವಿಗಳು ಶೈವಮತಾಭಿಮಾನದಿಂದ ಮತ್ತು ದೇಸಿಯ ಕಾವ್ಯಾಭಿಮಾನದಿಂದ, ಸಾಂಪ್ರದಾಯಕವಾಗಿ ರಚಿಸಿದರು. ತೆಲುಗು ಸಾಹಿತ್ಯದ ಮೊದಲ ಚಳುವಳಿ ಶೈವ ಚಳುವಳಿ. ಜನಸಾಮಾನ್ಯರ ಹತ್ತಿರ ಕೊಂಡೊಯ್ಯಲು ಇವರ ರಚನೆಗಳಿಗೆ ಸಾಧ್ಯವಾಯಿತು.

**ನನ್ನೆಚೋಡ:** ಸಂಸ್ಕೃತ, ತೆಲುಗು ಸಾಹಿತ್ಯದಲ್ಲಿ ಪ್ರಬುದ್ಧತೆ ಪಡೆದ ಮಾನಪಲ್ಲಿ ರಾಮಕೃಷ್ಣ ಕವಿಯು ತಮಿಳು, ಕನ್ನಡ, ಮಲೆಯಾಳಂ, ಪ್ರಾಕೃತ ಭಾಷೆಗಳಲ್ಲೂ ಉತ್ತಮ

ಪ್ರಾವೀಣ್ಯವನ್ನು ಹೊಂದಿದ್ದನು. ನನ್ನೆಚೋಡನ ಕಾಲ ಸು. ೧೧೦೦-೧೧೬೦ ರವರೆಗೆ ಕಾಣಿಸುತ್ತದೆ. ಈತನು ಅನೇಕ ವಿಷಯಗಳಲ್ಲಿ ಆದ್ಯ ಪ್ರವರ್ತಕನು, ಅಚ್ಚತೆಲುಗಿನಲ್ಲಿ ದ್ವಿಪದದಲ್ಲಿ ಬರೆಯುತ್ತೇನೆಂದು ತನ್ನ ಕಾವ್ಯದಲ್ಲಿ ಹೇಳಿಕೊಂಡಿದ್ದಾರೆ. ನನ್ನೆಚೋಡನಿಗೆ ತನ್ನ ಗುರುವಿನ ಬಗ್ಗೆ ತುಂಬ ಭಕ್ತಿ ಭಾವನೆ. ಶ್ರೀಶೈಲ ಮಲ್ಲಿಕಾರ್ಜುನಾಚಾರ್ಯರಲ್ಲಿ ಒಬ್ಬರಾದ ಮಲ್ಲಿಕಾರ್ಜುನಯೋಗಿ ನನ್ನೆಚೋಡನ ಗುರು. ತನ್ನ ಕಾವ್ಯವಾದ ಕುಮಾರಸಂಭವವನ್ನು ತನ್ನ ಗುರುವಿಗೆ ಅರ್ಪಿಸಿದ್ದಾನೆ. ಈತನ ಇಷ್ಟದೈವವು ಶ್ರೀಶೈಲ ಮಲ್ಲಿಕಾರ್ಜುನನ ರೂಪದಲ್ಲಿದ್ದ ಪರಮೇಶ್ವರ. ಈ ಪರಮೇಶ್ವರನೇ ತನ್ನ ಕುಮಾರ ಸಂಭಂವಂ ನ ಕಥಾ ನಾಯಕ.

ಪಾಲ್ಕುರಿಕೆ ಸೋಮನಾಥನು ಶಿವಕವಿಗಳಲ್ಲಿ ಪ್ರಸಿದ್ಧನಾದವನು. ತೆಲುಗುನಲ್ಲಿ ಅಲ್ಲದೆ ಕನ್ನಡದಲ್ಲೂ ಈತನ ಹೆಸರು ಪ್ರಸಿದ್ಧವಾಗಿದೆ. ಈತನು ತೆಲುಗು ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಕೃತಿಗಳನ್ನು ರಚಿಸಿದರು. ಶಿವ ಕವಿಗಳಲ್ಲಿ ನನ್ನೆಚೋಡನು ಶಿವಕವಿಯಾದರೆ ಸೋಮನಾಥನು ವೀರಶೈವಕವಿ. ಸೋಮನಾಥನ ಕಾವ್ಯದಲ್ಲಿ ಶಿವಯುಗದ ಲಕ್ಷಣಗಳು ಕಾಣಿಸುತ್ತವೆ. ಶಿವ ಕವಿಗಳ ಕಾವ್ಯ ಲಕ್ಷಣಗಳು ಶೈವಮತಾಭಿಮಾನದಿಂದ ಕೂಡಿವೆ.

ಶಿವಕವಿಗಳು ಮುಖ್ಯವಾಗಿ ರಾಜರ ಆಶ್ರಯವನ್ನು ಬಯಸದೆ, ಅವರ ಪೋಷಣೆಯಿಲ್ಲದೆ ಸ್ವಂತತ್ರವಾಗಿ ಕಾವ್ಯ ರಚನೆ ಮಾಡಿದರು. ಪ್ರಜೆಗಳ ಭಾಷೆಯಲ್ಲಿ ಪ್ರಜೆಗಳಿಗೋಸ್ಕರ, ಶೈವ ಮತಕ್ಕೋಸ್ಕರ ಸಾಹಿತ್ಯವನ್ನು ಸೃಷ್ಟಿಸಿದರು. ಅದಕ್ಕಾಗಿ ಅವರ ಕಾವ್ಯದಲ್ಲಿ ಭಕ್ತಿಯ ಆವೇಶ ಅನುಭೂತಿಗಳು ಕಾಣಿಸುತ್ತವೆ. ದೇಸಿಯ ಸಾಹಿತ್ಯದಲ್ಲಿ ಕಾವ್ಯ ಚಳುವಳಿಯನ್ನು ನಡೆಸಿದರು. ಸಂಸ್ಕೃತ ಛಂದಸ್ಸಿನ ಪ್ರಭಾವವನ್ನು ತಪ್ಪಿಸಿ ದೇಸಿಯ ಛಂದಸ್ಸಿನಲ್ಲಿ ಈ ಕವಿಗಳು ಕಾವ್ಯ ರಚಿಸಿದರು.

ಶಿವಕವಿಗಳು ಸಂಸ್ಕೃತದ ಪುರಾಣ ಇತಿಹಾಸಗಳಿಂದ ವಸ್ತುಗಳನ್ನು ತೆಗೆದುಕೊಳ್ಳಲಿಲ್ಲ. ಅವರು ದೇಸಿಯ, ಪ್ರಾಂತೀಯ ನೆಲಗಳಲ್ಲಿ ಹುಟ್ಟಿದ ಮಹಾಪುರುಷರ ಚರಿತ್ರೆಗಳನ್ನು ತೆಗೆದುಕೊಂಡು ಕಾವ್ಯಗಳನ್ನು ರಚಿಸಿದರು. ಬಸವಪುರಾಣ, ಕುಮಾರ ಗುಂಡಯ್ಯ, ಮಡಿವಾಳ ಮಾಚಯ್ಯ, ಕನ್ನಪ್ಪ, ಸಂಗಯ್ಯ, ದುಗ್ಗಯ್ಯ ಮುಂತಾದವರ ಚರಿತ್ರೆಗಳನ್ನು ಇಟ್ಟುಕೊಂಡು ಕಾವ್ಯ ರಚಿಸಿದರು. ಶಿವಕವಿಗಳು ಅಚ್ಚತೆಲುಗಿನಲ್ಲಿ ಸಾಹಿತ್ಯವನ್ನು ಬರೆದರು. ಹಾಗಾಗಿ ತೆಲುಗು ಸಾಹಿತ್ಯ ಪರಂಪರೆಗೆ ದೇಸಿ ನೆಲೆಯ ಹೊಸ ತಿರುವನ್ನು ಶಿವಯುಗದ ಕವಿಗಳು ನೀಡಿದರು. ಕೆಲವೊಂದು ವಿಚಾರಗಳಲ್ಲಿ ದಿಗಂಬರ ಕವಿಗಳ ವೈಚಾರಿಕ ನಿಲುವುಗಳನ್ನು ಶಿವಕವಿಗಳ ಧೋರಣೆಗಳಲ್ಲಿಯೂ ಕಾಣಬಹುದು.

**೪. ತಿಕ್ಕನ ಯುಗ**

೧೩ನೇ ಶತಮಾನದಲ್ಲಿ ಆಂಧ್ರದೇಶವನ್ನು ಕಾಕತೀಯರು ಆಳುತ್ತಿದ್ದರು. ಕಾಕತೀಯರಿಗೆ ಸಾಮಂತನಾಗಿದ್ದ ನೆಲ್ಲೂರಿನ ಚೋಡ ತಿಕ್ಕರಾಜನ ಮಗನಾದ ಮನುಮಸಿದ್ಧಿಯ ಆಸ್ಥಾನದಲ್ಲಿ

ತಿಕ್ಕನು ಮಂತ್ರಿಯಾಗಿದ್ದನು. ತಿಕ್ಕನನು ಮಂತ್ರಿಯಲ್ಲದೆ ಯುದ್ಧ ವಿದ್ಯೆಯಲ್ಲಿ ನುರಿತಶೂರನು, ಕವಿ, ತತ್ವ ಪ್ರಚಾರಕರಾದ ನಿರ್ದೇಶಕನು. ಈ ಎಲ್ಲಾ ಗುಣಗಳನ್ನು ತಿಕ್ಕನ ಪಡೆದಿದ್ದನು. ಇಂಥಾ ಗುಣಗಳು ಇರುವ ಮಹನೀಯರು ಇರುವುದು ಅಪರೂಪ. ''ಕವಿಬ್ರಹ್ಮ'', ''ಉಭಯಕವಿಮಿತ್ರ'' ಎಂಬ ಬಿರುದುಗಳು ಸಹ ಇವನಿಗೆ ಇವೆ. ತಿಕ್ಕನನು ಕ್ರಿ.ಶ. ೧೨೧೦ - ೧೨೮೦ರ ಮಧ್ಯಕಾಲದಲ್ಲಿ ಜೀವಿಸಿದ್ದ. ತಿಕ್ಕನನ ತಾತ ಭಾಸ್ಕರ, ತಿಕ್ಕನನ ಶಿಷ್ಯ ಕೇತನ, ತಿಕ್ಕನನು ಬ್ರಾಹ್ಮಣ, ಗೌತಮ ಗೋತ್ರ ಸೋಮಯಾಜಿ ವಂಶ. ತಿಕ್ಕನ ವ್ಯಾಸರಚಿತ ಮಹಾಭಾರತವನ್ನು ತೆಲುಗಿನಲ್ಲಿ ರಚಿಸಿದನು. ನನ್ನಯನ ನಂತರ ಭಾರತ ರಚಿಸಿದವರಲ್ಲಿ ದ್ವಿತೀಯನಾದರೂ ಕಾವ್ಯಶಿಲ್ಪದಲ್ಲಿ ಅದ್ವಿತೀಯನೆಂದು ಹೆಸರು ಪಡೆದಿದ್ದಾನೆ. ತನ್ನ ಕಾವ್ಯವನ್ನು ನನ್ನಯನು ಸ್ವೀಕರಿಸಿದ 'ಚಂಪೂ' ಪದ್ಧತಿಯಲ್ಲಿ ರಚಿಸಿದನು. ತಿಕ್ಕನ ತನ್ನ ಮೊದಲನೆಯ ಕಾವ್ಯವಾದ ನಿರ್ವಚನೋತ್ತರ ರಾಮಾಯಣವನ್ನು ಪದ್ಯ ಕಾವ್ಯವಾಗಿ ರಚಿಸಿದನು. ತಿಕ್ಕನನ ಪದ್ಯ ಕಾವ್ಯವಾದ ಉತ್ತರ ರಾಮಾಯಣ, ನಿರ್ವಚನೋತ್ತರ ರಾಮಾಯಣವೆಂದು ಪ್ರಸಿದ್ಧವಾಗಿದೆ. ಉತ್ತರ ರಾಮಾಯಣ ಸ್ವತಂತ್ರ ರೀತಿಯಲ್ಲಿ ರಚಿಸಿದ್ದಾನೆ. ತಿಕ್ಕನನ ಪ್ರತಿಭಾಸಾಮರ್ಥ್ಯಗಳು ಅವನ ಕಾವ್ಯಗಳಿಂದ ತಿಳಿಯುತ್ತದೆ. ತಿಕ್ಕನ ರಾಮಾಯಣ ಕಾವ್ಯವನ್ನು ಸ್ವತಂತ್ರವಾಗಿ ರಚಿಸಿ ಸೀತಾ ಪರಿತ್ಯಾಗ , ರಂಭಾರಾವಣ ಸಂವಾದ, ವೇದವತಿಯ ಉಪಖ್ಯಾನ ಮುಂತಾಂದವು ನಿರ್ವಚನೋತ್ತರ ರಾಮಾಯಣದ ಘಟ್ಟಗಳು ಇದರಲ್ಲಿ ತಿಕ್ಕನು ಮಾಡಿರುವ ಕೆಲವು ವರ್ಣನೆಗಳು ತಿಕ್ಕನನ ವ್ಯಕ್ತಿತ್ವವನ್ನು ಎತ್ತಿ ತೋರಿಸುತ್ತದೆ.

ತಿಕ್ಕನನ್ನು ತೆಲುಗಿನ ಅದ್ವಿತೀಯ ಕವಿಯನ್ನಾಗಿ ಮಾಡಿದ್ದು, ಆತನು ರಚಿಸಿದ ''ತೆಲುಗುಭಾರತ''. ನನ್ನಯ ತನ್ನ ಭಾರತವನ್ನು ಆದಿಪರ್ವ, ಸಭಾಪರ್ವ ಹಾಗೂ ಅರಣ್ಯಪರ್ವದ ಅರ್ಧಭಾಗವನ್ನು ಬರೆದು ಅಂಸಪೂರ್ಣ ವಾಗಿಸಿ ಬಿಟ್ಟಿದ್ದಾನೆ. ತಿಕ್ಕನ ಅರಣ್ಯ ಪರ್ವ ಶೇಷವನ್ನು ಬಿಟ್ಟು ವಿರಾಟಪರ್ವದಿಂದ ಸ್ವರ್ಗಾರೋಹಣದವರೆಗಿನ ೧೫ ಪರ್ವಗಳನ್ನು ಆಂಧ್ರೀಕರಿಸಿದ್ದಾನೆ. ಕಾವ್ಯ ಪ್ರಾರಂಭದಲ್ಲಿ ತಿಕ್ಕನನು ಹೇಳಿದ ಮಾತುಗಳು ಅರ್ಥಪೂರ್ಣವಾದವು. ''ಭಾರತಾಮೃತವನ್ನು ಕರ್ಣ ಪುಟಗಳಿಂದ ಆಸ್ವಾದಿಸಿ ಆಂಧ್ರಾವಳಿ ಮೋದವನ್ನು ಪಡೆಯುವಂತೆ ಸಾತ್ಯವತೇಯ ಸಂಸ್ಕೃತಿ ಶ್ರೀ, ವಿಭವಾಸ್ಪದವಾದ ಚಿತ್ತದಿಂದ ಮಹಾಕವಿತ್ವ ದೀಕ್ಷಾವಿಧಿಯನ್ನು ಹೊಂದಿ ಪದ್ಯ ಗದ್ಯಗಳನ್ನು ರಚಿಸುತ್ತೇನೆ.''[2] ಜನರ ಸಂತೋಷಕ್ಕಾಗಿ ಕಾವ್ಯ ರಚಿಸುವುದಾಗಿ ಹೇಳಿದ ಮೊಟ್ಟಮೊದಲನೆಯ ಕವಿ ತಿಕ್ಕನ.

ತಿಕ್ಕನನು 'ಭಾರತದಲ್ಲಿ' ಪ್ರತಿಯೊಂದು ಪಾತ್ರಗಳ ಅಂತರಂಗದೊಳಗಿನ ಆಲೋಚನೆಗಳನ್ನು ಸೂಕ್ಷ್ಮವಾಗಿ ವರ್ಣಿಸಿದ್ದಾನೆ. ಕಾವ್ಯದ ಪಾತ್ರಗಳು ನಿತ್ಯಜೀವನಕ್ಕೆ ಹತ್ತಿರವಿರುವಂತವು. ಪ್ರತಿಯೊಂದು ಪಾತ್ರದಲ್ಲಿ ನೈಜ ಚಿತ್ರಣವನ್ನು ಇಟ್ಟಿದ್ದಾನೆ. ಮೂಲದಲ್ಲಿ ಇಲ್ಲದ ಪಾತ್ರಗಳನ್ನೂ ತಿಕ್ಕನ ತನ್ನ ಲೇಖನಿಯ ಮೂಲಕ ಜೀವ ಕೊಟ್ಟಿದ್ದಾರೆ.

ತಿಕ್ಕನನು ಮೂಲ ಕಥೆಯನ್ನು ತೆಗೆದುಕೊಂಡು ಅಗತ್ಯವಾದೆಡೆಗಳಲ್ಲಿ ಬೆಳೆಸಿ ಸಂಗ್ರಹಿಸಿ, ಮಾರ್ಪಡಿಸಿ ಪ್ರತಿಯೊಬ್ಬರು ಒಪ್ಪುವ ಹಾಗೆ, ಆಸ್ವಾದಿಸುವಂತೆ ಅನುವಾದಿಸಿದ್ದಾನೆ. ತಿಕ್ಕನನ ವರ್ಣನೆಗಳು ಕತೆಯ ನಡೆಗೆ ಎಲ್ಲೂ ತಡೆಯೊಡ್ಡುವುದಿಲ್ಲ. ತಿಕ್ಕನನಲ್ಲಿ ದೇಸಿ ನುಡಿಗಟ್ಟುಗಳು ಕಾಣಿಸುತ್ತವೆ. ತಿಕ್ಕನ ತನ್ನ ಭಾರತವನ್ನು ಗದ್ಯ ಪದ್ಯದಲ್ಲಿ ರಚಿಸಿದನು. ತಿಕ್ಕನನ ಭಾರತದಲ್ಲಿ ರಾಜಕೀಯ ಚಾತುರ್ಯತೆ, ಯುದ್ಧತಂತ್ರಗಳು, ಮುಂತಾದವು ಒಳಗೊಂಡಿವೆ.

ತಿಕ್ಕನನ ಕಾಲದ ಇತರ ಕವಿಗಳು ಕೇತನ, ಮಾರನ, ಮಂಚನ. ಕೇತನನ 'ದಶಕುಮಾರ ಚರಿತ್ರೆ' ಕಥಾಕಾವ್ಯವು ತೆಲುಗಿನ ಮೊದಲ ಕಥಾಕಾವ್ಯ. ಆಂಧ್ರಭೂಷಣ, ವಿಜ್ಞಾನೇಶ್ವರಿಯಂ, ಹಾಗೂ ೧೦೪೨ರ ನಾಗವರ್ಮನ 'ಕರ್ನಾಟಕಭಾಷಾಭೂಷಣದ' ಮಾರ್ಗದಲ್ಲಿ 'ಆಂಧ್ರಭಾಷಾಭೂಷಣ' ರಚಿಸಿದ್ದಾನೆ. 'ವಿಜ್ಞಾನೇಶ್ವರಿಯಂ' ಧರ್ಮಶಾಸ್ತ್ರಗ್ರಂಥ. ಮಾರನ ಕವಿಯು ತಿಕ್ಕನನ ಶಿಷ್ಯ. 'ಮಾರ್ಕಾಂಡೆಯ ಪುರಾಣ' ರಚಿಸಿದನು. ಮಂಚನ ಕವಿಯು ಸಂಸ್ಕೃತದ ರಾಜಶೇಖರನ 'ಭಂಜಕ'ಎನ್ನುವ ನಾಟಕವನ್ನು ಆದರಿಸಿ ಇನ್ನು ಕೆಲವು ಕಥೆಗಳನ್ನು ತೆಗೆದುಕೊಂಡು 'ಕೆಯೂರಬಾಹು ಚರಿತ್ರೆ' ಎನ್ನುವ ಕಥಾನಾಟಕವನ್ನು ಈತ ರಚಿಸಿದನು.

**೫. ಎರ್ರನ ಯುಗ (೧೩೦೦-೧೩೫೦)**

ಸುಮಾರು ಕ್ರಿ.ಶ. ೧೨೦೦-೧೩೬೪ ಎರ್ರಪ್ರೆಗ್ಗಡ ಕಾಲ. ಗುಡ್ಡೂರು ನಿವಾಸಿಯಾಗಿದ್ದು ಈತನು ಒಬ್ಬ ಶಿವಭಕ್ತ. ತೆಲುಗು ಸಾಹಿತ್ಯದಲ್ಲಿ ಎರ್ರನ, ನನ್ನಯ, ತಿಕ್ಕನನಿಗೆ ಸಮಾನನಾದ ಮಹಾಕವಿ. ಅರಣ್ಯಪರ್ವಶೇಷವನ್ನು ಎರ್ರನ ರಚಿಸಿದನು. ಹೀಗಾಗಿ ಈತನನ್ನು ಕವಿತ್ರಯ ಕವಿಗಳಲ್ಲಿ ಒಬ್ಬನೆಂದು ಹೇಳುವುದು. ಈತನು ಶಬ್ದಗತಿಯಲ್ಲಿ ನನ್ನಯನನ್ನು,ಭಾವಗತಿಯಲ್ಲಿ ತಿಕ್ಕನನ್ನು, ಕಂಡುಕೊಂಡು ಎರ್ರನನು ತನ್ನದೇ ಆದ ಒಂದು ಶೈಲಿಯನ್ನು ಕಂಡುಕೊಂಡಿದ್ದಾನೆ. ಹಾಗಾಗಿ ಅನೇಕ ವಿಷಯಗಳಲ್ಲಿ ಮುಂದಿನ ಕವಿಗಳಿಗೆ ಎರ್ರನ ಮಾರ್ಗದರ್ಶಕನಾಗಿದ್ದಾನೆ. ಈತನ ಕೃತಿಗಳು ರಾಮಾಯಣ, ಹರಿವಂಶ, 'ಭಾರತಾರಣ್ಯಪರ್ವಶೇಷ', 'ನೃಸಿಂಹಪುರಾಣ'.ಎರ್ರನನು ರೆಡ್ಡಿರಾಜ್ಯದ ಸಂಸ್ಥಾಪಕನಾದ ರೆಡ್ಡಿ ಮನೆತನದ ಪ್ರೋಲಯವೇಮಾರೆಡ್ಡಿಯ ಆಸ್ಥಾನ ಕವಿ. ಎರ್ರನನು ರಚನ ರೀತಿಯಲ್ಲಿ ನನ್ನಯನನ್ನು ಅನುಸರಿಸಿ ಬರೆಯುತ್ತೇನೆಂದು ಹೇಳಿದ್ದಾನೆ. ಹಾಗಾಗಿ ನನ್ನಯ ಶೈಲಿ, ಎರ್ರನ ಶೈಲಿ ಬಹಳಷ್ಟು ಸಾಮ್ಯತೆ ಕಂಡುಬರುತ್ತದೆ.

ಎರ್ರನನು ನನ್ನಯನು ಅರ್ಧದಲ್ಲೇ ಬಿಟ್ಟ 'ಭಾರತ'ದ ಅರಣ್ಯಪರ್ವಶೇಷವನ್ನು ಪೂರ್ಣಗೊಳಿಸಿದನು. ಸಮಗ್ರ ಭಾರತಕ್ಕೆ ಎರ್ರನನು ಕಾರಣನಾದರೂ ನನ್ನಯನ ಮೇಲಿನ ಭಕ್ತಿಯಿಂದಾಗಿ ನನ್ನಯನ ಹೆಸರಿನಲ್ಲಿಯೇ ಬರೆದಿದ್ದಾನೆ. ಅರಣ್ಯಪರ್ವದ ಶೈಲಿ ನನ್ನಯ ಹಾಗೂ ತಿಕ್ಕನರ ಶೈಲಿಗಳ ಮಧುರಮಿಲನದಂತೆ ಕಂಡುಬರುತ್ತದೆ.

## ೬. ಶ್ರೀನಾಥ ಯುಗ (೧೩೫೦-೧೫೦೦)

ಕಾವ್ಯಯುಗವನ್ನು ಶೀನಾಥಯುಗವೆಂದು, ಸಂಧಿಯುಗವೆಂದು ಕರೆಯುವರು. ಎರ್ರನನ ಕಾಲದ ನಂತರ ಪುರಾಣಗಳ ಅನುವಾದವು ಕಡಿಮೆಯಾಯಿತು. ಈ ಯುಗದಲ್ಲಿ ಕವಿಗಳು ಸ್ವತಂತ್ರ ಕಾವ್ಯ ನಾಟಕಗಳನ್ನು ಚಂಪೂಕಾವ್ಯದಲ್ಲಿ ರಚಿಸಿದರು. ಕೆಲವರು ಸ್ವತಂತ್ರವಾಗಿ ಕಾವ್ಯ ರಚನೆ ಮಾಡಿದರು. ಈ ಕಾಲದ ಪ್ರಭಾವಶಾಲಿ ಕವಿಯೆಂದರೆ ಶ್ರೀನಾಥ.

ತೆಲುಗಿನ ಕವಿತ್ರಯರಾದ ನನ್ನಯ, ತಿಕ್ಕನ, ಎರ್ರನ ನಂತರ ಅತ್ಯಂತ ಪ್ರತಿಭಾವಂತ ಕವಿಯೇ ಶ್ರೀನಾಥ. ಶ್ರೀನಾಥ ಯುಗವನ್ನು ರೆಡ್ಡಿರಾಜಯುಗವೆಂದು ಸಹ ಕರೆಯುವರು. ತೆಲುಗು ಸಾಹಿತ್ಯಕ್ಕೆ ರೆಡ್ಡಿರಾಜರ ಕೊಡುಗೆ ಅತ್ಯಮೂಲ್ಯವಾದುದು. ರೆಡ್ಡಿರಾಜನಾದ ಪೆದಕೋಮಟಿವೇ ಮಾರೆಡ್ಡಿಯ ಆಸ್ಥಾನ ಕವಿಯೇ ಶ್ರೀನಾಥ. ಈತನ **ಕೃತಿಗಳು, ಮರುತ್ತರಾಟ್ಚಂತ್ರ, ಶಾಲಿವಾಹನಸಪ್ತಶತಿ ಪಂಡಿತಾರಾಧ್ಯಚರಿತ್ರೆ, ಶೃಂಗಾರನೈಷದ, ಹರವಿಲಾಸಮು, ಭೀಮೇಶ್ವರ ಪುರಾಣ, ಕ್ರೀಡಾಭಿರಾಮು, ಕಾಶಿಖಂಡ, ಶಿವರಾತ್ರಿ ಮಹಾತ್ಮ್ಯ ಪಲನಾಟಿವೀರ ಚರಿತ್ರೆ.**

ಶ್ರೀನಾಥನ ಪಾಂಡಿತ್ಯ ಸಾಮಾನ್ಯವಲ್ಲ. ಸಂಸ್ಕೃತ ಪ್ರಾಕೃತ ಮೊದಲಾದ ಭಾಷೆಗಳಲ್ಲಿ ಪ್ರಾವೀಣ್ಯ ಪಡೆದಿದ್ದನು. "ಬಹುಳಾಂಧ್ರೋಕ್ತಿಮಯ ಪ್ರಪಂಚವನ್ನು ರಕ್ಷಿಸಿದವನೆಂದು ರಾಮರಾಜಭೂಷಣನೆಂಬ ಕವಿಯೆಂದು ಪ್ರಶಂಸೆ ಪಡೆದಿದ್ದಾನೆ. ಶ್ರೀನಾಥ ಸಮಕಾಲೀನ ಕವಿಗಳ ಮೇಲೆ ಮಾತ್ರವಲ್ಲದೆ ಅನಂತರ ಕಾಲದ ಕವಿಗಳ ಮೇಲೂ ಪ್ರಭಾವವನ್ನು ಬೀರಿದ ವಿದ್ವತ್ ಕವಿ. ಶ್ರೀನಾಥನು ಚಿಕ್ಕ ವಯಸ್ಸಿನಲ್ಲೇ ವೇದಾಂಗಾದಿ ಪಾಂಡಿತ್ಯವನ್ನು ಸಂಪಾದಿಸಿ, ಸಂಖ್ಯಾದಿ ಸಿದ್ಧಾಂತಗಳನ್ನು ಶೈವ-ವೈಷ್ಣವಾದಿ ಆಗಮಗಳನ್ನು ಪಾತಂಜಲಾದಿ ಯೋಗಗಳನ್ನು ತಿಳಿದ ಮಹಾ ವಿದ್ವಾಂಸನೆಂದು ದುಗ್ಗನನೆಂಬ ಕವಿ 'ನಾಚಿಕೇತೋಪಾಖ್ಯಾನ' ದಲ್ಲಿ ಹೇಳಿದ ಮಾತುಗಳು ಶ್ರೀನಾಥನ ವ್ಯಕ್ತಿತ್ವವನ್ನು ಎತ್ತಿ ಹಿಡಿಯುತ್ತವೆ. ಸಂಸ್ಕೃತ, ಪ್ರಾಕೃತ, ಶೌರಸೇನೀ ಮುಖ್ಯ ಭಾಷಾಪರಿಜ್ಞಾನಪಾಟವ, ಪನ್ನಗಪತಿ ಸಾರ್ವಭೌಮಭಾಷಿತ ಮಹಾಭಾಷ್ಯ ವಿದ್ಯಾಸಮಭ್ಯಾಸಬಲ, ಅಕ್ಷಪಾದಕಣಾ ಪಕ್ಷಿಲೋದಿರೀತ ನಾಯಕಲಾಕೌಶಲಾತಿಶಯ, ಶೃತಿ ಪುರಾಣಾಗಮ ಸ್ಮೃತಿಸಂಖ್ಯ ಸಿದ್ಧಾಂತ ಕಬಳನ ವ್ಯತ್ಪತ್ತಿಗೌರವ, ಪೂರ್ವಕವಿ ಮುಖ್ಯವಿರಚಿತಾಪೂರ್ವ ಕಾಮ್ಯಭಾವರಸ ಸುಧಾಚರ್ವಣ ಪ್ರೌಢತೆ ಇವು ಶ್ರೀನಾಥನ ಗುಣಗಳು."[೮]

ಭೀಮೇಶ್ವರ ಪುರಾಣ ಕಾವ್ಯಕ್ಕೆ ಮೂಲ ಆಧಾರ ಸ್ಕಂದಪುರಾಣ. ಶ್ರೀನಾಥನ ಗ್ರಂಥವು ಅನುವಾದವೇ ಆದರೂ ಈ ಕಾವ್ಯದಲ್ಲಿ ಬಹುಪಾಲು ಸ್ವತಂತ್ರ ರಚನೆಯಿದೆ. ಈ ಕಾವ್ಯವು ದ್ರಾಕ್ಷಾರಾಮದ ಭೀಮೇಶ್ವರನನ್ನು ಕುರಿತದ್ದು ಇದೊಂದು ಕ್ಷೇತ್ರಮಹಾತ್ಮೆಯಾಗಿದೆ. ವಸ್ತು ದೃಷ್ಟಿಯಿಂದ ಇದು ದೇಸಿಯ ಕಾವ್ಯ. ಕಾವ್ಯದಲ್ಲಿ ಹೆಚ್ಚಿನ ಭಾಗವು ದ್ರಾಕ್ಷಾರಾಮ ತತ್ಪಾಂತ ಪ್ರದೇಶದ ವರ್ಣನೆ ಇದೆ. ತೆಂಗಿನ ತೋಟದ ಫಲಗಳು, ಅಲ್ಲಿನ ಪ್ರಾದೇಶಿಕ ಪ್ರಾಕೃತಿಕ

ರಮಣೀಯತೆಯನ್ನು ಶ್ರೀನಾಥನು ತನ್ಮಯತೆಯಿಂದ ವರ್ಣಿಸಿದ್ದಾನೆ. ಆಂಧ್ರಪ್ರದೇಶವನ್ನು ವರ್ಣಿಸುವ ಈತನ ಕಾವ್ಯದಲ್ಲಿ ತನ್ನ ದೇಶದ ಅಭಿಮಾನವನ್ನು ಕಾಣಬಹುದು.

''ವಲ್ಲಭರಾಯನೆಂಬುವನ ಹೆಸರಿನಲ್ಲಿ ಕ್ರೀಡಾಭಿರಾಮ ಎಂಬ ಕೃತಿ ಕಂಡುಬರುತ್ತದೆ. ಇದು ದಶರೂಪಕಗಳಲ್ಲಿ ವೀಥಿ ಎಂಬುದಕ್ಕೆ ಸೇರಿದುದು. ಮಂಚನಶರ್ಮ ಎಂಬ ಬ್ರಾಹ್ಮಣಯುವಕ, ಟಿಟ್ಟಿಭಶೆಟ್ಟಿ ಎಂಬ ಸ್ನೇಹಿತನೊಡನೆ ಕಾಕತೀಯ ರಾಜಧಾನಿಯಾದ ಏಕಶಿಲಾನಗರದಲ್ಲಿ ತಿರುಗಾಡುತ್ತಾ ಆ ಪುರದ ವಿಶೇಷಗಳನ್ನು ವರ್ಣಿಸುವುದೇ ಈ ಕೃತಿಯ ವಸ್ತು.''[೯] ಅದೇ ರೀತಿಯಾಗಿ ಪಾಲ್ನಾಟಿ ವೀರಚರಿತ್ರೆ ದ್ವಿಪದ ಕಾವ್ಯವನ್ನು ಈತ ರಚಿಸಿದನು. ೧೨ನೆಯ ಶತಮಾನದ ಅಂತ್ಯಭಾಗದಲ್ಲಿ ಪಲನಾಡು ಸೀಮೆಯಲ್ಲಿ ನಡೆದ ಯುದ್ಧಕ್ಕೆ ಸಂಬಂಧಿಸಿದ ಜನಪದ ಮಹಾಕಾವ್ಯವಿದು.

'ಕಾಶಿಖಂಡ' ಶ್ರೀನಾಥನ ಗ್ರಂಥಗಳಲ್ಲಿ ಇದೂ ಒಂದು. ಭರತಖಂಡದ ಪ್ರಸಿದ್ಧ ಪುಣ್ಯಕ್ಷೇತ್ರದ ಕಾಶಿಯ ಮಹಾತ್ಮೆಯ ಇದು ವರ್ಣಿಸುತ್ತದೆ. ಈ ಕಥೆಯ ಮುಖ್ಯ ಪಾತ್ರ ಅಗಸ್ತ್ಯ. ರಸವತ್ತಾದ ಪ್ರೌಢಶೈಲಿಯಲ್ಲಿ ಕಾವ್ಯ ಬರೆದಿದ್ದಾನೆ. ವರ್ಣನೆ, ಪಾತ್ರ ಚಿತ್ರಣ, ಸಂಭಾಷಣೆಯನ್ನು ರಮ್ಯವಾಗಿ ರಚಿಸಿದ್ದಾನೆ. 'ಶಿವರಾತ್ರಿ ಮಹಾತ್ಮ್ಯ ' ಈ ಕೃತಿಯು ಗುಣಮಟ್ಟದ ದೃಷ್ಟಿಯಿಂದ ಅಷ್ಟೇನೂ ಪ್ರಾಶಸ್ತ್ಯವಿಲ್ಲ. ಈ ಕೃತಿಯನ್ನು ಮುಮ್ಮಡಿ ಶಾಂತಯ್ಯ ಎಂಬುವನಿಗೆ ಅರ್ಪಿಸಿದ್ದಾನೆ. ಶಿವರಾತ್ರಿ ಮಹಾತ್ಮ್ಯದ ಕಥಾನಾಯಕ ಸುಕುಮಾರ. ತೆಲುಗು ಸಾಹಿತ್ಯದಲ್ಲಿ ಕವಿತ್ರಯರಾದ ಮೇಲೆ ಶ್ರೀನಾಥನದು ಗುರುಸ್ಥಾನ. ಅನಂತರ ಕಾಲದ ಪ್ರಬಂಧ ಕವಿಗಳಿಗೆ ಶ್ರೀನಾಥನೇ ಸ್ಫೂರ್ತಿ. ತಿಕ್ಕನ ಕಂದಪದ್ಯಕ್ಕೆ ಹೆಸರಾದರೆ ಶ್ರೀನಾಥನು ಸೀಸ ಪದ್ಯವನ್ನು ರೂಪಿಸುವಲ್ಲಿ ಸಿದ್ಧಿಯನ್ನು ಪಡೆದಿರುವನು.

ಪೋತನಪ್ರಾಚೀನ ತೆಲುಗು ಕವಿಗಳಲ್ಲಿ ಪೋತನನಷ್ಟು ಜನಪ್ರಿಯವಾದ ಕವಿ ಮತ್ತೊಬ್ಬರಿಲ್ಲ. ಈತನ ಕಾಲ ಕ್ರಿ.ಶ. ೧೪೨೦-೧೪೮೦. ಶ್ರೀನಾಥನ ಸಮಕಾಲೀನ ಕವಿಯಾದ ಈತನು **ಭೋಗಿನೀದಂಡಕಮು, ವೀರಭದ್ರವಿಜಯಮು** ಹಾಗೂ **ಆಂಧ್ರಮಹಾಭಾಗವತಮು** ಎಂಬ ಕೃತಿಗಳನ್ನು ರಚಿಸಿದನು. ಪೋತನನ ಭೋಗಿದಂಡಕಮು ಕೃತಿಯ ವಸ್ತು ಒಬ್ಬಳು ವೇಶ್ಯಾಸ್ತ್ರೀ ಸರ್ವಜ್ಞಸಿಂಗ ಭೂಪಾಲನನ್ನು ಪ್ರೀತಿಸಿ ಅವನನ್ನು ಕೈಹಿಡಿದ ವೃತ್ತಾಂತವನ್ನು ತಿಳಿಸುವುದು. ಇದನ್ನು ದಂಡಕರೂಪ ಎಂಬ ದೇಸಿಯ ಕಾವ್ಯ ಪ್ರಕಾರದಲ್ಲಿ ರಚಿಸಿದನು. ಇದು ಒಂದು ಶೃಂಗಾರ ಕಾವ್ಯವಾಗಿದೆ.

''ಪೋತನನಿಗೆ ಆಂಧ್ರದಾದ್ಯಂತ ಖ್ಯಾತಿ ತಂದುಕೊಟ್ಟ ಕೃತಿ ಎಂದರೆ **ಆಂಧ್ರಮಹಾಭಾಗವತ,** ಲಲಿತಸ್ಕಂದವು, ಕೃಷ್ಣಮೂಲವೂ, ಶುಕಾಲಾಸಂಭಿರಾಮವೂ, ಮಂಜುಲತಾಶೋಭಿತವೂ, ಸುವರ್ಣ ಸುಮವಸ್ತುಗೇಯವೂ, ಸುಂದರೋಜ್ವಲ ವೃತ್ತವೂ,

ಮಹಾಫಲವೂ, ವಿಮಲವ್ಯಾಸಾಲವಾಲವೂ ಆದ ಭಾಗವತವೆಂಬ ಕಲ್ಪವೃಕ್ಷವನ್ನು ಪೋತನ ತೆಲುಗರಿಗೆ ನೀಡಿದ್ದಾನೆ.''[೧೦] ಪೋತನನ ಭಾಗವತ ವ್ಯಾಸ ರಚಿತವಾದ ಭಾಗವತದ ಅನುವಾದ. ಆದರೆ ತೆಲುಗಿನಲ್ಲಿ ಈ ಭಾಗವತ ತುಂಬ ಜನಪ್ರಿಯವಾದ ಗ್ರಂಥ.

**ಇತರ ಕವಿಗಳು** ಜಕ್ಕನ ವಿಜಯನಗರ ಪ್ರೌಢದೇವರಾಯನ ಕಾಲದಲ್ಲಿ ವಿಕ್ರಮಾರ್ಕ ಚರಿತ್ರೆ ಎಂಬ ಕಾವ್ಯ ರಚಿಸಿದನು. ಇದರ ವಸ್ತು ಉಜ್ಜಯಿನಿಯನ್ನಾಳಿದ ವಿಕ್ರಮಾರ್ಕ ಚಕ್ರವರ್ತಿ. ಅನಂತಮಾತ್ಯ **ಭೋಜರಾಜೀಯಯಂಬ** ಕಥಾಕಾವ್ಯವನ್ನು ಛಂದೋದರ್ಪಣ ವೆಂಬ ವಂಧೋಗ್ರಂಥವನ್ನು **ರಸಾಭರಣವೆಂಬ** ಅಲಂಕಾರ ಗ್ರಂಥವನ್ನು ಬರೆದನು. ಭೋಜರಾಜನ ಲಾಟದೇಶದ ರಾಜಕೀಯ ಚರಿತ್ರೆಯನ್ನು ಒಳಗೊಂಡಿದೆ. ಗೌರನ, ದುಗ್ಗನ, ಪಿನವೀರನ, ನಂದಿಮಲ್ಲಯ, ಘಂಟಸಿಂಗಯ, ತುಕ್ಕಪಾಕ ಅನ್ನಮಾಚಾರ್ಯ, ತಿಮ್ಮಕ್ಕ, ಈ ಕಾಲದ ಪ್ರಮುಖ ರಚನೆಕಾರರು. ಇವರು ತೆಲುಗು ಸಾಹಿತ್ಯಕ್ಕೆ ತಮ್ಮದೇ ಆದ ಕೊಡುಗೆಯನ್ನು ಕೊಟ್ಟಿರುತ್ತಾರೆ.

### ೭. ಪ್ರಬಂಧ ಯುಗ (೧೬೦೦-೧೭೦೦)

ತೆಲುಗು ಸಾಹಿತ್ಯ ಚರಿತ್ರೆಯಲ್ಲಿ ೧೬ನೆಯ ಶತಮಾನದ ಆರಂಭಕಾಲವು ಸುವರ್ಣಯುಗವೆಂದು ಪ್ರಸಿದ್ಧವಾಯಿತು. ಈ ಕಾಲದ ಸಾಹಿತ್ಯಕ್ಕೆ ಸ್ಫೂರ್ತಿ ನೀಡಿದವನು ಸಾಹಿತಿ, ಸಮರಾಂಗಣ ಸಾರ್ವಭೌಮನಾದ ವಿಜಯನಗರದ ಶ್ರೀಕೃಷ್ಣದೇವರಾಯ. ಈ ಕಾಲದ ಸಾಹಿತ್ಯದ ಕೊಡುಗೆಯನ್ನು ಗುರುತಿಸಿ ಕೆಲವರು ಶ್ರೀಕೃಷ್ಣದೇವರಾಯರ ಯುಗವೆಂದು ಕರೆದರು. ಶ್ರೀಕೃಷ್ಣದೇವರಾಯನ ಆಸ್ಥಾನದಲ್ಲಿ ಅಷ್ಟದಿಗ್ಗಜಗಳೆಂಬ ಹೆಸರಿನ ಮಹಾಕವಿಗಳಿದ್ದರು. ರಾಯರ ಕಾಲವನ್ನು ಪ್ರಬಂಧಯುಗವೆಂದು ಕರೆಯುವರು. ಪ್ರಬಂಧ ಕವಿಗಳು ಪುರಾಣಗಳಿಂದ ಚಿಕ್ಕ ಕಥೆಯನ್ನು ತೆಗೆದುಕೊಂಡು ತಮ್ಮ ಕಲ್ಪನಾ ಸಾಮರ್ಥ್ಯದಿಂದ ಸ್ವತಂತ್ರ ಕಾವ್ಯವನ್ನು ರಚಿಸಿದರು. ಕೆಲವರು ಪ್ರಧಾನ ಕಥೆಯನ್ನು ತಾವೇ ಕಲ್ಪಿಸಿದರು. ಅಷ್ಟಾದಶ ವರ್ಣನೆಗಳ ನೆರವಿನಿಂದ ಪ್ರಬಂಧ ಕವಿಗಳು ತಮ್ಮ ಕಾವ್ಯ ವಸ್ತುವನ್ನು ಬೆಳೆಸಿದರು. ಇಲ್ಲಿ ಶೃಂಗಾರಕ್ಕೆ ಮುಖ್ಯಸ್ಥಾನ, ಅಲಂಕಾರಪ್ರಿಯರು. ಉತ್ಪ್ರೇಕ್ಷೆ, ಅತಿಶಯೋಕ್ತಿ ಮುಂತಾದ ವಿವಿಧ ಅಲಂಕಾರಗಳು ಪ್ರಬಂಧಗಳಲ್ಲಿ ಹೇರಳವಾಗಿ ಕಾಣಿಸುತ್ತವೆ.

ಅಮುಕ್ತಮೌಲ್ಯವು ತೆಲುಗಿನ ಪಂಚ ಕಾವ್ಯಗಳಲ್ಲಿ ಒಂದು. ''ಅಮುಕ್ತಮಾಲ್ಯದ''ಕ್ಕೆ ಇನ್ನೊಂದು ಹೆಸರು **ವಿಷ್ಣುಚಿತ್ತೀಯಂ** ಎಂದು. ವಿಷ್ಣುಭಕ್ತಿಯನ್ನು ಹೇಳುವ ಈ ಪ್ರಬಂಧವನ್ನು ಶ್ರೀವೆಂಕಟೇಶ್ವರ ಸ್ವಾಮಿಗೆ ಅರ್ಪಿಸಿದ್ದಾನೆ. ''ಅಮುಕ್ತ ಎಂದರೆ ಧರಿಸಿಬಿಟ್ಟರು, ಮಾಲ-ಹೂವಿನದಂಡೆ, ದ-ಕೊಟ್ಟಿದ್ದು. ಈ ಪ್ರಬಂಧದಲ್ಲಿ ವೈಷ್ಣವ ಭಕ್ತರಾದ ಆಳ್ವರರಲ್ಲಿ ಆಂಡಾಳು ಒಬ್ಬಳು. ಈಕೆಗೆ ಗೋದಾದೇವಿ ಎಂಬುದು ಹೆಸರು. ಗೋದಾದೇವಿ ತಾನು ಧರಿಸಿದ ಹೂಮಾಲೆಯನ್ನು ಶ್ರೀರಂಗನಾಥನಿಗೆ ಸಮರ್ಪಿಸುತ್ತಿದ್ದಳು. ಈ ಕಾರಣದಿಂದ 'ಅಮುಕ್ತಮಾಲ್ಯದ'

ಎಂಬ ಹೆಸರು ಬಂದಿತು. ಶ್ರೀರಂಗನಾಥ ಗೋದಾದೇವಿಯನ್ನು ಮದುವೆಯಾದ ಕಥೆ ಈ ಕಾವ್ಯದ ಪ್ರಧಾನ ವಸ್ತು''.[೧೧]

**ಆಮುಕ್ತಮಾಲ್ಯದಲ್ಲಿ** ಪ್ರಧಾನರಸ ಶೃಂಗಾರ. ಇದರಲ್ಲಿ ದಿವ್ಯನಾಯಕ ನಾಯಕರುಗಳ ಶೃಂಗಾರದ ಜೊತೆಗೆ ಅಲೌಕಿಕವೂ ಇದೆ. ಶ್ರೀರಂಗನಾಥ ನಾಯಕ, ನಾಯಕಿಯಾದ ಗೋದಾದೇವಿ ಪೂರ್ವಜನ್ಮದ ಭೂದೇವಿ. ಸಾಮಾನ್ಯ ಪ್ರಬಂಧದಲ್ಲಿ ಕಾಣಿಸುವ ಶೃಂಗಾರ ಇದರಲ್ಲಿ ಇಲ್ಲ. ಆಮುಕ್ತಮಾಲ್ಯದಲ್ಲಿ ಶಾಂತರಸವು ಕೂಡಾ ಇದೆ. ಉಪಖ್ಯಾನದಲ್ಲಿ ಭಕ್ತಿ ರಸವೂ ಅಂತರ್‌ಗಾಮಿಯಾಗಿ ಇದೆ.

ಶ್ರೀಕೃಷ್ಣದೇವರಾಯ ಚಕ್ರವರ್ತಿಯಾಗಿದ್ದರಿಂದ ಆತನ ಕಾವ್ಯದಲ್ಲಿ ರಾಜನೀತಿಯನ್ನು ಕಾಣಬಹುದು. ಈತನು ಸಕಲ ಶಾಸ್ತ್ರಗಳನ್ನು ಓದಿದವನು. ಮೊದಲಿನಿಂದಲೂ ತಂದೆಯಿಂದ ರಾಜನೀತಿಯ ರಹಸ್ಯಗಳನ್ನು ತಿಳಿದುಕೊಂಡಿದ್ದನು. ಅದಕ್ಕಾಗಿ ಆಮುಕ್ತಮಾಲ್ಯದಲ್ಲಿ ರಾಜನೀತಿಯು ವ್ಯಕ್ತವಾಗಿದೆ. ಮುಖ್ಯವಾಗಿ ನಾಲ್ಕನೇ ಆಶ್ವಾಸದಲ್ಲಿ ರಾಜನೀತಿಜ್ಞಶಾಸ್ತ್ರ ವಿಷಯಗಳನ್ನು ವಿವರಿಸಿದ್ದಾರೆ.

''**ಅಲ್ಲಸಾನಿ ಪೆದ್ದನ್ನ** ಶ್ರೀಕೃಷ್ಣದೇವರಾಯನ ಆಸ್ಥಾನ ಕವಿಗಳಲ್ಲಿ ಮೊದಲನೇ ಕವಿ. ಶ್ರೀಕೃಷ್ಣದೇವರಾಯರ ಅನನ್ಯ ಗೌರವವನ್ನು ಪಡೆದು ಆಂಧ್ರಕವಿತಾ ಪಿತಾಮಹನೆಂದು ಬಿರುದಿಗೆ ಪಾತ್ರನಾಗಿದ್ದಾರೆ. ಈತನ **ಮನುಚರಿತ್ರ** ವೆಂಬ ಪ್ರಬಂಧವನ್ನು ಶ್ರೀಕೃಷ್ಣದೇವರಾಯನಿಗೆ ಅರ್ಪಿಸಿದನು. ಪ್ರಬಂಧಕಾಲದ ಗ್ರಂಥಗಳಲ್ಲಿ ಮನುಚರಿತ್ರಕ್ಕಿರುವ ಖ್ಯಾತಿ ಇನ್ನಾವ ಗ್ರಂಥಕ್ಕೂ ಇಲ್ಲ. ಈ ಮನುಚರಿತ್ರೆ ಒಂದು ಮಧುರ ಕಾವ್ಯ. ಈ ಕಾವ್ಯದ ಪೂರ್ಣ ಹೆಸರು **ಸ್ವಾರೋಚಿಷಮನುಸಂಭವ.** ನನ್ನಯನ ಕಾವ್ಯ ತಂತ್ರ, ತಿಕ್ಕನನ ಪಾತ್ರ ಚಿತ್ರಣಾಸಾಮರ್ಥ್ಯ, ಎರ್ರನನ ಔಚಿತ್ಯ, ನಾಚನನ ನವೀನ ಗುಣಗಳು, ಶ್ರೀನಾಥನ ಶಯ್ಯಾ ಸೌಭಾಗ್ಯವನ್ನೊಳಗೊಂಡದ ಚತುರ ರಚನೆ ಪೆದ್ದನದು.''[೧೨]

**ನಂದಿತಿಮ್ಮನ** ಶ್ರೀಕೃಷ್ಣದೇವರಾಯನ ಆಸ್ಥಾನದಲ್ಲಿ ಇದ್ದ ಅಷ್ಟದಿಗ್ಗಜ ಕವಿಗಳಲ್ಲಿ ಪೆದ್ದನ ನಂತರ ಹೆಚ್ಚು ಮಾನ್ಯತೆಯನ್ನು ಪಡೆದ ಕವಿಯೇ ನಂದಿತಿಮ್ಮನ. ನಂದಿತಿಮ್ಮನಿಗೆ ಮುಕ್ಕುತಿಮ್ಮನ ಎಂಬ ಹೆಸರೂ ಇದೆ. ಸಕಲವಿದ್ಯಾವಿವೇಕ ಚತುರನಾದ ಕವಿಯಾದ ತಿಮ್ಮನ ಕಾವ್ಯ ಪಾರಿಜಾತಾಪಹರಣ. ಈ ಕಥೆಯನ್ನು ಸಂಸ್ಕೃತದ ಹರಿವಂಶದಿಂದ ಆರಿಸಿಕೊಂಡಿದ್ದಾರೆ. ರಸ, ಭಾವ, ಪಾತ್ರಗಳಿಗನುಗುಣವಾಗಿ ಮೂಲ ಕಥೆಗೆ ಅನೇಕ ಮಾರ್ಪಾಡುಗಳನ್ನು ಮಾಡಿದ್ದಾರೆ.

**ಧೂರ್ಜಟಿ** ಶ್ರೀಕೃಷ್ಣದೇವರಾಯನ ಆಸ್ಥಾನದಲ್ಲಿದ್ದ ಅಷ್ಟದಿಗ್ಗಜಗಳಲ್ಲಿ ಒಬ್ಬನು. ಶ್ರೀ ಕಾಳಹಸ್ತೀಶ್ವರ ಶತಕ, ಶ್ರೀ ಕಾಳಹಸ್ತಿ ಮಹಾತ್ಮ್ಯ ಎಂಬ ಗ್ರಂಥಗಳನ್ನು ರಚಿಸಿದನು. 'ಮಲ್ಲನ'

ಶ್ರೀಕೃಷ್ಣದೇವರಾಯನ ಆಸ್ಥಾನದಲ್ಲಿದ್ದ ಕವಿಗಳಲ್ಲಿ ಒಬ್ಬರು. ಈತ ರಾಜಶೇಖರ ಚರಿತ್ರವೆಂಬ ಪ್ರಬಂಧವನ್ನು ಬರೆದನು. ತಿಮ್ಮರಸನ ಅಳಿಯನಾದ ಅಪ್ಪಾಮಾತ್ಯನಿಗೆ ತನ್ನ ಕೃತಿ ಅರ್ಪಿಸಿದನು. ಅಯ್ಯಲರಾಜು ರಾಮಭದ್ರಕವಿ ರಾಮಾಭ್ಯುದಯ ಎಂಬ ಪ್ರಬಂಧವನ್ನು ಬರೆದರು. ಇದನ್ನು ರಾಮರಾಯನ ಅಳಿಯನಾದ ನರಸರಾಜನಿಗೆ ಅರ್ಪಿಸಿದ್ದಾನೆ. **ರಾಮಾಭ್ಯುದಯ** ರಾಮಾಯಣವು ಪ್ರಬಂಧ ಪ್ರಕಾರದಲ್ಲಿದೆ. ಪಿಂಗಳಿಸೂರನು ಸಹ ಅಷ್ಟದಿಗ್ಗಜಗಳಲ್ಲಿ ಒಬ್ಬನು. ತಿಕ್ಕನನ ನಂತರ ಅಷ್ಟೇ ಪ್ರತಿಭಾವಂತ ಕವಿ ಇವನೊಬ್ಬನೇ ಎಂದು ಸಿ. ಆರ್. ರೆಡ್ಡಿ ಮೊದಲಾದ ವಿಮರ್ಶಕರ ಅಭಿಪ್ರಾಯ.''[೧೩] ಈತನ ಕೃತಿಗಳು **ಗರುಡ ಪುರಾಣಂ, ರಾಘವ ಪಾಂಡವೀಯಂ,** ಇದರಲ್ಲಿ ರಾಮಾಯಣ ಹಾಗೂ ಭಾರತ ಕಥೆಗಳೆರಡನ್ನೂ ಹೆಣೆಯಲಾಗಿದೆ. ಈ ಕಾವ್ಯದಲ್ಲಿ ನಾಟಕೀಯತೆಯನ್ನು ಹೆಚ್ಚು ಕಾಣಬಹುದು.

**ರಾಮರಾಜಭೂಷಣ** (೧೫೪೨-೧೫೬೪) ಶ್ರೀಕೃಷ್ಣದೇವರಾಯನ ಆಸ್ಥಾನ ಕವಿಗಳಲ್ಲಿ ಇವನೂ ಒಬ್ಬನು. ಈತನು **ವಸುಚರಿತ್ರ**ವನ್ನು ಬರೆದು ರಾಮರಾಜನಿಗೆ ಅರ್ಪಿಸಿದ್ದಾನೆ. **ಹರಿಶ್ಚಂದ್ರನ ಲೋಪಾಖ್ಯಾನ** ಈ ಕೃತಿ ಒಂದು ಕಾವ್ಯ ಇದರಲ್ಲಿ ಹರಿಶ್ಚಂದ್ರನ ಕಥೆಯನ್ನು ನಳಮಹಾರಾಜ ಕಥೆಯನ್ನು ಸೇರಿಸಿ ಕಾವ್ಯ ರಚಿಸಿದರು. ಹಾಗೆ **ನರಸಭೂಪಾಲೀಯ** ಕಾವ್ಯಾಲಂಕಾರ ಬರೆದಿದ್ದಾರೆ. ಇದು ಲಕ್ಷಣಗ್ರಂಥವಾಗಿದೆ. ಧ್ವನಿ ರಸ ಅಲಂಕಾರ ವಿಷಯಗಳ ಬಗೆಗೆ ಇದರಲ್ಲಿ ವಿವರಿಸಲಾಗಿದೆ.

''**ತೆನಾಲಿರಾಮ ಕೃಷ್ಣ** (೧೪೮೫-೧೫೭೫). ಶ್ರೀಕೃಷ್ಣದೇವರಾಯನ ಅಷ್ಟದಿಗ್ಗಜ ಕವಿಗಳಲ್ಲಿ ಒಬ್ಬನೆಂದು ಪ್ರತೀತಿ ಇದೆ. ಈ ಕವಿ ಮೊದಲು ರಾಮಲಿಂಗನೆಂಬ ಹೆಸರಿನಲ್ಲಿ ಶೈವನಾಗಿದ್ದನು. ನಂತರ ವೈಷ್ಣವ ಧರ್ಮವನ್ನು ಸ್ವೀಕರಿಸಿ **ರಾಮಕೃಷ್ಣ** ಆದನೆಂದು ಪ್ರತೀತಿ. ಶೈವನಾಗಿದ್ದಾಗ ಉದ್ಭಟಾರಾಧ್ಯ ಚರಿತ್ರೆ ಬರೆದಿದ್ದನೆಂಬುದು ವಿದ್ವಾಂಸರ ಅಭಿಪ್ರಾಯ. ಈ ಕವಿಯ ಪ್ರಸಿದ್ಧ ಪ್ರಬಂಧ **ಪಾಂಡುರಂಗ ಮಹಾತ್ಮ್ಯ** ಹಾಗೂ **ಘಟಿಕಾಚಲಮಹಾತ್ಮ್ಯಂ** ರಚಿಸಿದನು.''[೧೪]

ಕವಯತ್ರಿ **ಮೊಲ್ಲ** ಈಕೆಗೆ ತೆಲುಗು ಸಾಹಿತ್ಯದ ಲೇಖಕಿಯರ ಸಾಲಿನಲ್ಲಿ ಪ್ರತ್ಯೇಕ ಸ್ಥಾನವಿದೆ. ಈಕೆ ೮೭೧ ಗದ್ಯ ಪದ್ಯಗಳಲ್ಲಿ ಮೊಲ್ಲ ರಾಮಾಯಣವನ್ನು ರಚಿಸಿದ್ದಾಳೆ. ಈಕೆಯು ಸಂಸ್ಕೃತ ರಾಮಾಯಣಗಳನ್ನು ಅನುಸರಿಸಿದ್ದು ಮಾತ್ರವಲ್ಲದೆ ತನ್ನ ಕಾಲಕ್ಕೆ ಪೂರ್ವದಲ್ಲಿ ರಚಿತವಾಗಿದ್ದ ತೆಲುಗು ರಾಮಾಯಣವನ್ನು ಅನುಸರಿಸಿದ್ದಾಳೆ.

**ವೇಮನ** ಸುಮಾರು ೧೫ನೇ ಶತಮಾನದಲ್ಲಿದ್ದು ಈತನು ಸಾಮಾಜಿಕ ಪ್ರಜ್ಞೆಯಿಂದ ಜನಜೀವನದ ವಾಸ್ತವದ ಚಿತ್ರಣವನ್ನು ಪದ್ಯಗಳಲ್ಲಿ ಕೊಟ್ಟಿರುವ ಮಹತ್ವದ ಕವಿಯಾಗಿದ್ದಾನೆ. ವೇಮನನು ರೆಡ್ಡಿರಾಜರ ಮನೆತನಕ್ಕೆ ಸೇರಿದವನು. ತಾರುಣ್ಯದಲ್ಲಿ ಹೆಣ್ಣಿನಲ್ಲಿ ಅನುರಕ್ತವಾಗಿ ಕೇವಲ ಅವಳ ನಗ್ನಚಿತ್ರವನ್ನು ನೋಡಿ ವೈರಾಗ್ಯವುಂಟಾಗಿ, ತಾನು ನಗ್ನನಾಗಿ ದೇಶವೆಲ್ಲಾ

ಸಂಚರಿಸಿದನೆಂದು ಅನೇಕ ಐತಿಹ್ಯಗಳು ಹೇಳುತ್ತವೆ. ''ಅಟಲವೇದಿ''ಯಲ್ಲಿ ಪದ್ಯಗಳನ್ನು ರಚಿಸಿದನು. ಈತನ ಪದ್ಯಗಳು ೩೦೦೦ ಮಾತ್ರ ಸಿಗುತ್ತವೆ. ದಿಗಂಬರ ಕಾವ್ಯದಲ್ಲಿ ಕಾಣುವ ಸಾಮಾಜಿಕ ಚಿತ್ರವನ್ನು, ಡಾಂಭಿಕತನ, ದುರಾಚಾರ, ದುರಾಡಳಿತವನ್ನು ಅಂದು ವೇಮನನು ತನ್ನ ಪದ್ಯದಲ್ಲಿ ಚಿತ್ರಿಸಿದ್ದಾನೆ. ವೇಮನನಿಗೆ ಸಾಮಾಜಿಕ ಕಲಾಕಳಿ ಇತ್ತು. ದಿಗಂಬರ ಕಾವ್ಯದ ವಿಚಾರಗಳನ್ನು ವೇಮನನಲ್ಲಿಯೂ ಕಾಣಬಹುದು.

**೮. ದಕ್ಷಿಣಾಂಧ್ರ ಯುಗ (೧೬೦೦-೧೭೭೫)**

ವಿಜಯನಗರ ಸಾಮ್ರಾಜ್ಯ ಪತನವಾದ ಮೇಲೆ ಆಂಧ್ರ ಸಾಹಿತ್ಯದ ಪೋಷಣೆಯ ಭಾರವು ದಕ್ಷಿಣದೇಶ ರಾಜ್ಯಗಳ ಮೇಲೆ ಬಿದ್ದಿತು. ದಕ್ಷಿಣದ ಮಧುರೈ, ತಂಜಾವೂರು, ಪುದುಕೋಟ್ಟೈ, ಚಿಂಜಿ ಮತ್ತು ಮೈಸೂರುಗಳಲ್ಲಿ ತೆಲುಗು ವಿಕಾಸ ಹೊಂದಿದ್ದರಿಂದ ಈ ಕಾಲಕ್ಕೆ ದಕ್ಷಿಣಾಂದ್ರಯುಗವೆಂದು ಹೆಸರು ಕೊಟ್ಟಿದ್ದ. ಆಂಧ್ರ ಸಾಹಿತ್ಯದಲ್ಲಿ ದಕ್ಷಿಣಾಂಧ್ರಸಾಹಿತ್ಯವೂ ಒಂದು ಅಮೂಲ್ಯರತ್ನ. ವೈವಿಧ್ಯದಿಂದ ಕೂಡಿದ ಕಾವ್ಯ ಪ್ರಕ್ರಿಯಾ ನಿರ್ಮಾಣವೂ ಈ ಯುಗದ ಸಾಹಿತ್ಯದ ಪ್ರಧಾನಲಕ್ಷಣ. ಪ್ರಬಂಧಗಳು, ಯಕ್ಷಗಾನಗಳು, ಗೇಯಗಳುನ್ನು ರಚಿಸಿದ ಆಗಿನ ಕವಿಗಳು ತಮ್ಮ ರಚನೆಗಳಲ್ಲಿ ಸರಳಸುಂದರ ಭಾಷೆಗೆ, ರಮಣೀಯವಾದ ಕಲ್ಪನೆಗಳಿಗೆ, ರಸಬಂಧುರವಾದ ಇತಿಹಾಸಕ್ಕೆ, ಭಾವಬಂಧುರವಾದ ಸುಂದರ ವರ್ಣನೆಗಳಿಗೆ ಪ್ರಾಧಾನ್ಯ ಕೊಟ್ಟು ಒಂದು ವಿಧವಾದ ವೈಶಿಷ್ಟ್ಯವನ್ನು ಪ್ರದರ್ಶಿಸಿದರು. ಯಕ್ಷಗಾನವು ಅಂದಿನ ಪ್ರಮುಖ ಕಾವ್ಯಪ್ರಕಾರವಾಗಿತ್ತು.

**ತಂಜಾವೂರು ಕವಿಗಳು,** ರಘುನಾಥ ನಾಯಕ (೧೬೧೫-೩೮)ನು, ನಾಯಕರುಗಳಲ್ಲೇ ಅತ್ಯಂತ ಪ್ರಮುಖನು. ಇವನು ಸ್ವತಃ ಕವಿಯಾಗಿ ಅನೇಕ ಕೃತಿಗಳನ್ನು ರಚಿಸಿದ. ರಾಮಾಯಣ, ವಾಲ್ಮೀಕಿ-ಚರಿತ್ರ, ಮೊದಲಾದ ಕಾವ್ಯಗಳು ಪ್ರಮುಖವಾದವು. ವಾಲ್ಮಿಕಿಚರಿತ್ರೆಯಲ್ಲಿ ವಾಲ್ಮೀಕಿಯ ಪೂರ್ವಜೀವನದ ವಿಚಾರಗಳು, ಆತನು ಮಹಾಕವಿ ಹೇಗೆ ಆದನು ಮೊದಲಾದ ವಿಚಾರಗಳನ್ನು ರಸವತ್ತಾಗಿ ಚಿತ್ರಿಸಿದ್ದಾನೆ. ಹಾಗೆ ರಘುನಾಥನು ಅಚ್ಯುತಾಭ್ಯುದಯದಲ್ಲಿ ತನ್ನ ತಂದೆಯಾದ ಅಚ್ಯುತನ ಜೀವನ ಚರಿತ್ರೆಯನ್ನು ವರ್ಣಿಸಿದ್ದಾನೆ. ನಳಚರಿತ್ರೆಯಲ್ಲಿ ನಳದಮಯಂತಿಯ ಕಥೆಗಳನ್ನು ವಿವರಿಸಿದ್ದಾನೆ.

ಚೇಮಕೂರ ವೆಂಕಟಕವಿ (೧೫೯೦-೧೬೫೦)ಯ, ರಘುನಾಥನ ಆಸ್ಥಾನವನ್ನಲಂಕರಿಸಿದ್ದ ಕವಿಗಳ ಪೈಕಿ ಪ್ರಮುಖ. ದಕ್ಷಿಣಾಂಧ್ರಯುಗದ ಕವಿಗಳಿಗೇ ತಿಲಕಪ್ರಾಯನಾದ ಕವಿ. **ಸಾರಂಗಧರ ಚರಿತ್ರ** ಮತ್ತು **ವಿಜಯವಿಲಾಸಮು** ಎಂಬ ಪ್ರಬಂಧಗಳ ಕರ್ತೃ. ಇವೆರಡನ್ನು ರಘುನಾಥನಿಗೆ ಅರ್ಪಿಸಿದ್ದಾನೆ. ಸಾರಂಗಧರ ಚರಿತ್ರೆಯ ವಸ್ತು ರಾಜರಾಜನ ಮಡದಿ ಚಿತ್ರಾಂಗಿ ತನ್ನ ಮಲಮಗನಲ್ಲಿ ಪ್ರೀತಿ ಬೆಳೆಸಿಕೊಂಡ ಬಗೆ, ಅವನು ಅದನ್ನು ತಿರಸ್ಕರಿಸಿದ ಪರಿಣಾಮ ಅನ್ಯಾಯವಾಗಿ ಶಿಕ್ಷೆ ಪಡೆದುದನ್ನು ತಿಳಿಸುತ್ತದೆ. **ವಿಜಯವಿಲಾಸಮು** ಈ ಕೃತಿ ಉತ್ಕೃಷ್ಟ

ಪ್ರಬಂಧಗಳಲ್ಲಿ ಒಂದಾಗಿದೆ. ಇದರ ವಸ್ತು ಪಾಂಡವರಾಜಕುಮಾರನಾದ ಅರ್ಜುನ, ಉಲೂಚಿ, ಚಿತ್ರಾಂಗದೆ ಮತ್ತು ಸುಭದ್ರೆಯರನ್ನು ವಿವಾಹವಾದ ವಿಷಯವನ್ನು ತಿಳಿಸುತ್ತದೆ.

ರಘುನಾಥನಾಯಕನ ಆಸ್ಥಾನದಲ್ಲಿದ್ದ ಮತ್ತೊಬ್ಬ ಕವಿ **ಕೃಷ್ಣಾಧ್ವರಿ** (೧೫೯೦-೧೬೬೦). **ನೈಷದ ಪಾರಿಜಾತ** ಎಂಬ ಕಾವ್ಯ ರಚಿಸಿದನು. ಈ ಕೃತಿಯಲ್ಲಿ ವಸ್ತು ನಳನ ಮತ್ತು ಪಾರಿಜಾತಪಹರಣರ ವಿಭಿನ್ನ ಕಥೆಗಳನ್ನು ಏಕಕಾಲದಲ್ಲಿ ಹೇಳಲಾಗಿದೆ. **ರಘುನಾಥಭೂಪಾಲಿಯಂ** ಕೃತಿಯು ರಘುನಾಥನ ಗುಣಗಳನ್ನು ವಿವರಿಸುವ ಕೃತಿ. ಹಾಗೆಯೇ ಕಾಳಯಕವಿಯು ರಾಜಗೋಪಾಲವಿಲಾಸ ಎಂಬ ಪ್ರಬಂಧ ಕಾವ್ಯವನ್ನು ಬರೆದನು.

**ವಿಜಯರಾಘವ** (೧೬೨೦-೯೫). ಕವಿಯು ಸುಮಾರು ೫೦ ಕೃತಿಗಳನ್ನು ರಚಿಸಿದನು. ಅವುಗಳಲ್ಲಿ **ಪಾದುಕಾ ಸಹಸ್ರ** ಮತ್ತು **ರಘುನಾಥಾಭ್ಯುದಯ** ಕಾವ್ಯಗಳು ಮುಖ್ಯವಾದವು. ಉಳಿದವು ಯಕ್ಷಗಾನಗಳು. ಇದರ ಲಘುಕೃತಿಗಳಲ್ಲಿ ಮುಖ್ಯವಾದವು **ಗೋಪಿಕಾ ಭ್ರಮರ ಗೀತಮುಲು. ರಂಗಾಜಮ್ಮ** ಅಷ್ಟಭಾಷಾ ಕವಯಿತ್ರಿ, ಈಕೆ ವಿಜಯರಾಘವನ ಆಸ್ಥಾನ ಕವಿಯಿತ್ರಿ. **ಸಂಗ್ರಹಭಾಗವತ, ಸಂಗ್ರಹಭಾರತ, ಸಂಗ್ರಹರಾಮಾಯಣ, ಉಷಾಪರಿಣಯ,** ಮತ್ತು **ಮುನ್ನಾರುದಾಸವಿಲಾಸ** ಎಂಬ ಕೃತಿಗಳನ್ನು ರಚಿಸಿದ್ದಾಳೆ. ಸವರಮು ಚಿನ್ನನಾರಾಯಣ (೧೬೦೦-೬೦) ಚೆಂಜಿ ರಾಜಮನೆತನಕ್ಕೆ ಸೇರಿದವನು. ಈತನ ಕೃತಿ **ಕುವಲಯಶ್ವ ಚರಿತ್ರ** .ರಾಜಋತುಧ್ವಜ ಮತ್ತು ಗಂಧರ್ವಕನೆ ಇವರ ವಿವಾಹವೇ ಇದರ ವಸ್ತು. ಇದರಲ್ಲಿ ಅನೇಕ ಉಪಕಥೆಗಳಿವೆ.

**ಮಧುರೆಯ ಕವಿಗಳು** ಲಿಂಗನಮುಖಿ ಕಾಮೇಶ್ವರ ಕವಿ ಮುದ್ದಳಗಿರಿಯ ಆಸ್ಥಾನದಲ್ಲಿದ್ದು ಸತ್ಯಭಾಮ ಸಾಂತ್ವನ ಎಂಬ ಪ್ರಬಂಧ ರಚಿಸಿದ. ಗಣಪವರಪು ವೆಂಕಟಕವಿ ಅನೇಕ ಶಾಸ್ತ್ರಗಳಲ್ಲಿ ಪಾರಂಗತನಾದವನು. ಈತ **ರಾಜಾವೆಂಕಟೇಶ್ವರ ವಿಜಯವಿಲಾಸ , ಸರ್ವಲಕ್ಷಣ ಶಿರೋಮಣಿ** ಮುಂತಾದ ಕೃತಿಗಳನ್ನು ರಚಿಸಿದ. ಇನ್ನಿತರ ಪ್ರಸಿದ್ಧ ಕವಿಗಳೆಂದರೆ ಸಮುಖಂ ವೆಂಕಟಕೃಷ್ಣಪ್ಪ ನಾಯಕ, ಮುದ್ದುಪಳನಿಯು ಶೇಷವೆಂಕಟಪತಿ, ವೆಲಗಪೂಡಿ ಕೃಷ್ಣಯ್ಯ ಮತ್ತು ಕುಂದುತೇ ವೆಂಕಟಾಚಲಪತಿ ಇತರ ಪ್ರಮುಖ ಕವಿಗಳು.

**ಪುದುಕೋಟ್ಟೆ**ಯ ದೊರೆಗಳಲ್ಲಿ ವಿಜಯರಘುನಾಥ (೧೭೩೦-೬೯) ಎಂಬುವನು ನುದುರುಪಾಟಿ ಕುಟುಂಬದ ಕವಿಗಳ ಪೋಷಕನಾಗಿದ್ದ. ಈತನ ಮಗ ರಾಯರರಘುನಾಥ (೧೭೬೯-೮೦) **ಪಾರ್ವತಿ ಪರಿಣಯ** ಎಂಬ ಒಳ್ಳೆಯ ಪ್ರಬಂಧವನ್ನು ರಚಿಸಿದನು. ಇದು ಆ ಕಾಲದ ಪ್ರಬಂಧಗಳಲ್ಲಿ ಅತ್ಯುತ್ತಮವಾದುದು.

**ಮೈಸೂರು** ರಾಜ್ಯದಲ್ಲಿ ಅನೇಕ ತೆಲುಗು ಕಾವ್ಯ ಮತ್ತು ಗದ್ಯ ಕೃತಿಗಳು ಬಂದುವು. ಪಾಲವೇಕರಿ ಕದಿರೀಪತಿಯ **ಶುಕಸಪ್ತತಿ** ಉತ್ಕೃಷ್ಟ ಕೃತಿ. ಈ ಕೃತಿಯ ವಸ್ತು ಸಮಕಾಲಿನ ಜೀವನ ವಿಧಾನ. ಗಿಳಿಯ ಕಥೆಗಳನ್ನು ಹೇಳುವುದು. ಹಾಗೆ ಯೇ ಶೃಂಗಾರ ಕಥೆಗಳು ಮತ್ತು ಅಶ್ಲೀಲ ಕಥೆಗಳನ್ನೂ ಈ ಕೃತಿ ಒಳಗೊಂಡಿದೆ.

ದಕ್ಷಿಣಾಂಧ್ರಯುಗದಲ್ಲಿ ಆಂಧ್ರ, ತೆಲಂಗಾಣ ಪ್ರಾಂತ್ಯದಲ್ಲಿ ಅನೇಕ ಪ್ರಸಿದ್ಧ ಕವಿಗಳು ಆಗಿಹೋಗಿದ್ದಾರೆ. ತೆಲುಗು ಸಾಹಿತ್ಯಕ್ಕೆ ವಿಫುಲವಾಗಿ ಕೃತಿಗಳನ್ನು ಕೊಟ್ಟು ಸಾಹಿತ್ಯ ಬೆಳವಣಿಗೆಗೆ ಪ್ರಮುಖ ಕೊಡುಗೆಳನ್ನು ನೀಡಿದ್ದಾರೆ.

**೯. ಕ್ಷೀಣಯುಗ**

೧೭೫೦ ರಿಂದ ೧೮೦೦ರ ತನಕದ ಕಾಲವನ್ನು ಸಾಮಾನ್ಯವಾಗಿ ತೆಲುಗು ಸಾಹಿತ್ಯದ ಅವನತಿಯ ಕಾಲ ಅಥವಾ ಕ್ಷೀಣಕಾಲ ಎನ್ನಲಾಗಿದೆ. ''ಏಕೆಂದರೆ ಈ ಕಾಲದ ಬಹುಪಾಲು ಕವಿಗಳು ಶ್ಲೇಷೆ, ಯಮಕ, ಅನುಪ್ರಾಸ ಮುಂತಾದ ಶಬ್ದಾಲಂಕಾರಗಳಲ್ಲಿ ಹೆಚ್ಚಿನ ಆಸಕ್ತಿ ತೋರಿಸಿ ಕಾವ್ಯಾತ್ಮಕವಾದ ರಸವನ್ನು ಕಡೆಗಣಿಸಿದರು. ಇದರಿಂದ ಕಾವ್ಯ ತನ್ನ ಸಹಜ ಸೌಂದರ್ಯವನ್ನು ಕಳೆದುಕೊಂಡು ಕೃತಕವಾಯಿತು. ಆ ಕಾಲದ ತೆಲುಗು ಕಾವ್ಯದ ಕೃತಕತೆಯನ್ನು ಕಂದಕೂರಿ ವೀರೇಶಲಿಂಗಂ ಪಂತುಲು ಅವರ 'ಸರಸ್ವತಿ ನಾರದ ಸಂವಾದ' ಚೆನ್ನಾಗಿ ತಿಳಿಸುತ್ತದೆ. ಆಗ ಅಂಧಾನುಕರಣೆಗೆ ಹೆಚ್ಚಿನ ಪ್ರಾಧಾನ್ಯ ಇದ್ದುದರಿಂದ, ಇಂಗ್ಲೀಷ್ ಕಲಿತ ತರುಣ ವಿದ್ವಾಂಸರು ಈ ತಪ್ಪನ್ನು ತಿಳಿದುಕೊಂಡು ಹೊಸ ಪ್ರಕಾರಗಳಿಗಾಗಿ ಶೋಧನೆ ನಡೆಸಲು ಯತ್ನಿಸಿದರು.''[೯]

**೧೦. ಆಧುನಿಕ ಯುಗ (೧೮೭೫)**

೧೮೫೭ರ ಭಾರತದ ಪ್ರಥಮ ಸ್ವಾತಂತ್ರ್ಯ ಚಳುವಳಿಯು ಜನರನ್ನು ಎಚ್ಚರಗೊಳ್ಳುವಂತೆ ಮಾಡಿತು. ಈ ಚಳುವಳಿಯಿಂದ ಜನರಿಗೆ ಭಾಷೆ, ಸಾಹಿತ್ಯ, ಸಂಸ್ಕೃತಿಗಳ ಮೇಲೂ ಅಭಿಮಾನವುಂಟಾಯಿತು. ಈ ಕಾಲದಲ್ಲಿ ಆಧುನಿಕ ತೆಲುಗು ಸಾಹಿತ್ಯವು ಉದಯವಾಯಿತು. ಭಾಷೆ, ಭಾವ ಹಾಗೂ ಪ್ರಕಾರಗಳಲ್ಲಿ ಹೊಸತನದ ವಿಕಾಸವುಂಟಾಯಿತು. ಈ ಆಧುನಿಕ ಸಾಹಿತ್ಯದ ಉದಯಕ್ಕೆ ಪಾಶ್ಚಾತ್ಯರ ಕೊಡುಗೆ ಅತ್ಯಮೂಲ್ಯವಾದುದು. ಪಾಶ್ಚಾತ್ಯರಲ್ಲಿ ಮುಖ್ಯವಾಗಿ ತೆಲುಗು ಭಾಷೆಗೆ ಸಿ.ಪಿ. ಬ್ರೌನ್ ಅವರ ಸೇವೆ ಮಹತ್ತರವಾದುದು. ಇವರು ಪ್ರಾಚೀನ ತೆಲುಗು ಸಾಹಿತ್ಯದ ಕಾವ್ಯ ಹಾಗೂ ಗ್ರಂಥ ಮುದ್ರಣಗಳಲ್ಲಿ ಅನೇಕ ಸುಧಾರಣೆಗಳನ್ನು ಮಾಡಿದರು. ವೇಮನವೆಂದರೆ ಬ್ರೌನ್‌ಗೆ ಪ್ರತ್ಯೇಕ ಅಭಿಮಾನ. ಅವರು ವೇಮನ ಪದ್ಯಗಳನ್ನು ಅನುವಾದಿಸಿ ಪಾಶ್ಚಾತ್ಯರಿಗೆ ಪರಿಚಯ ಮಾಡಿಕೊಟ್ಟಿದ್ದಾರೆ.

ಆಧುನಿಕ ತೆಲುಗು ಕಾವ್ಯಕ್ಕೆ ೧೯ನೆಯ ಶತಮಾನದ ಕೊನೆಯ ಕಾಲದಲ್ಲಿ ಕೆಲವರು ಬುನಾದಿ ಹಾಕಿದರು. ತೆಲುಗು ಸಾಹಿತ್ಯ ಪರಂಪರೆಯಲ್ಲಿ ಕಾಲಕಾಲಕ್ಕೆ ತಕ್ಕಂತೆ ಹೊಸ ಕಾವ್ಯವನ್ನು

ಹುಟ್ಟು ಹಾಕಿದರು. ಈ ಕವಿಗಳು ತಮ್ಮದೇ ಆದ ಧೋರಣೆಗಳನ್ನು ತಮ್ಮ ಕಾವ್ಯದ ಮುಖಾಂತರ ತೋರ್ಪಡಿಸಿದರು. ಪಾಶ್ಚಾತ್ಯ ಸಾಹಿತ್ಯದ ಪ್ರತಿಭಟನಾ ಚಳುವಳಿಗಳು, ಅವರ ಅನೇಕ ಧೋರಣೆಗಳು ತೆಲುಗು ಸಾಹಿತ್ಯದ ಮೇಲೆ ಪರಿಣಾಮ ಬೀರಿತು. ಈ ಸಂವತ್ಸರದಲ್ಲಿ ವಿದ್ಯಾವಂತರು ಇಂಗ್ಲೀಷನ್ನು ಕಲಿತರು. ಹಾಗಾಗಿ ಹೊರಗಿನ ಪ್ರಪಂಚದ ವಿಚಾರಗಳನ್ನು ಅರಿತುಕೊಂಡರು. ಇಂಗ್ಲೀಷ್ ಭಾಷೆಯು ವಿದ್ಯಾವಂತರ ಕಣ್ಣುಗಳನ್ನು ತೆರೆಯಿಸಿತು. ನನ್ನದೇಶ, ನನ್ನ ಭಾಷೆ, ನನ್ನ ಜಾತಿ ಎನ್ನುವ ಭಾವನೆಗಳು ಆಗಿನ ಪ್ರಜೆಗಳ ಹೃದಯವನ್ನು ಸೂರೆಗೊಂಡವು. ನೂತನವಾದ ಈ ಚೈತನ್ಯವು ಕ್ರಮವಾಗಿ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ತರಂಗಗಳಲ್ಲಿ ವ್ಯಕ್ತವಾಗಹತ್ತಿತ್ತು.

ಭಾರತ ದೇಶದ ಈಸ್ಟ್ ಇಂಡಿಯಾ ಕಂಪನಿ ಆಳ್ವಿಕೆ ರದ್ದಾಗಿ ವಿಕ್ಟೋರಿ ಮಹಾರಾಣಿಯ ಆಳ್ವಿಕೆ ಬಂತು. ೧೮೩೫ರಲ್ಲಿ ಆಂಗ್ಲಭಾಷೆಯನ್ನು ಭಾರತೀಯರಿಗೆ ಕಲಿಸಬೇಕೆಂಬ ನಿರ್ಣಯವನ್ನು ತೆಗೆದುಕೊಂಡಿದ್ದರು. ಅವರು ಮಿಷನರಿಗಳನ್ನು ಪಾಠಶಾಲೆಗಳನ್ನು, ಕಲಾಶಾಲೆಗಳನ್ನು ಸ್ಥಾಪಿಸಿದರು. ೧೮೫೭ರಲ್ಲಿ ಕೊಲ್ಕೊತ್ತಾ, ಮದ್ರಾಸು, ಮುಂಬಯಿ ನಗರಗಳಲ್ಲಿ ವಿಶ್ವವಿದ್ಯಾಲಯಗಳನ್ನು ಸ್ಥಾಪಿಸಿದರು. ೧೮೨೭ರಲ್ಲಿ ಅಚ್ಚುಯಂತ್ರಗಳು ಬಂದುವು. ಶಬ್ದಮಂಜರಿ ಪ್ರಥಮ ಗ್ರಂಥವು ತೆಲುಗಿನಲ್ಲಿ ಅಚ್ಚಾಯಿತು. ೧೮೩೪ರಲ್ಲಿ ತೆಲುಗಿನಲ್ಲಿ ಗ್ರಂಥಗಳು ಹೆಚ್ಚಾಗಿ ಅಚ್ಚಾದವು. ೧೮೫೮ರಲ್ಲಿ ಚಿನ್ನಸೂರಿಯು ನೀತಿಚಂದ್ರಿಕ ಬರೆದು, ೧೮೬೦ರಲ್ಲಿ ಬಾಲ ವ್ಯಾಕರಣವನ್ನು ಬರೆದನು. ೧೮೫೭ರಲ್ಲಿ ಪ್ರಥಮ ಸ್ವಾತಂತ್ರ್ಯ ಹೋರಾಟವು ದೇಶದಲ್ಲಿ ದೇಶಭಿಮಾನವನ್ನು, ಭಾಷಾಭಿಮಾನವನ್ನು ಪ್ರಚೋದಿಸಿತು.

ಈ ಯುಗದಲ್ಲಿ ಅನೇಕ ಬದಲಾವಣೆಗಳು, ಹೊಸಹೊಸ ವಿಚಾರಗಳು ಉದ್ಭವಿಸಿದವು. ೧೮೭೯ರಲ್ಲಿ ವಿಶ್ವಮಾನವ ಭ್ರಾತೃತ್ವನ್ನು ಬೋಧಿಸುವ ಹಿಂದೂಧರ್ಮ ಸೂತ್ರಗಳನ್ನು ಅನುಸರಿಸುವ ದಿವ್ಯಜ್ಞಾನ ಸಮಾಜವನ್ನು ಮುಂಬಯಿಯಲ್ಲಿ ಸ್ಥಾಪಿಸಲಾಯಿತು. ಮದ್ರಾಸಿನಲ್ಲಿ ೧೮೮೨ರಲ್ಲಿ ಈ ಸಂಸ್ಥೆ ಹುಟ್ಟಿತು. ೧೮೮೯ರಲ್ಲಿ ಅನ್ನಿಬೆಸೆಂಟ್ ಸೇರ್ಪಡೆಗೊಂಡು, ೧೯೦೦ರಲ್ಲಿ ರಾಜಮಂಡ್ರಿ, ಕಾಕಿನಾಡದಲ್ಲಿ ಉಪನ್ಯಾಸ ನೀಡಿದರು. ೧೮೨೮ರಲ್ಲಿ ರಾಜರಾಮಮೋಹನರಾಯ್ **ಬ್ರಹ್ಮಸಮಾಜ** ಸ್ಥಾಪಿಸಿದರು, ನಂತರ ಕೇಶವ ಚಂದ್ರಸೇನ ಪ್ರಚಾರ ಮಾಡಿದರು. ೧೮೬೪ರಲ್ಲಿ ಕೇಶವಚಂದ್ರಸೇನರು ಮದ್ರಾಸಿನಲ್ಲಿ ಉಪನ್ಯಾಸ ಮಾಡಿದರು, ಇದರಿಂದ ಯುವಕರ ಮೇಲೆ ಪ್ರಭಾವ ಬೀರಿತು. ೧೮೭೦-೮೦ರ ಮಧ್ಯ ಆಂಧ್ರ ಪ್ರದೇಶದ ಮುಖ್ಯ ಪಟ್ಟಣಗಳಲ್ಲಿ ಬ್ರಹ್ಮಸಮಾಜವನ್ನು ಸ್ಥಾಪಿಸಲಾಯಿತು. **ರಘುಪತಿ ವೆಂಕಟರತ್ನಂ ನಾಯುಡು** ಬ್ರಹ್ಮಧರ್ಮ ದೀಕ್ಷೆವಹಿಸಿದನು. ೧೮೯೫ರಲ್ಲಿ ವೀರೇಶಲಿಂಗಂ ಪಂತುಲು ಬ್ರಹ್ಮ ಸಮಾಜದ ವಿಚಾರಗಳಿಂದ ಪ್ರಭಾವಿತರಾಗಿ ಸಂಘಸಂಸ್ಥೆಗಳ ಉದ್ಯಮಕ್ಕೆ ಸೇರಿಕೊಂಡರು.

ಬಂಗಾಳದಲ್ಲಿ ಸತಿಸಹಗಮನ ಪದ್ಧತಿಯ ನಿರ್ಮೂಲನೆ ಹಾಗೂ ಸ್ತ್ರೀಜನರೋದ್ಧಾರಕ್ಕೆ ರಾಜರಾಮಮೋಹನರಾಯ್‌ರ ಸೇವೆ ಅತ್ಯಮೂಲವಾದುದು. ಇವರ ಮರಣದ ೧೫ ವರ್ಷಗಳಲ್ಲಿ

ವೀರೇಶಲಿಂಗಂ ಜನಿಸಿದರು. ಅಂತಹ ಸಂದರ್ಭದಲ್ಲಿ ಆಂಧ್ರಪ್ರದೇಶದಲ್ಲಿ ಮೂಢನಂಬಿಕೆಗಳು ವ್ಯಾಪಕವಾಗಿ ಬೆಳೆದಿದ್ದವು. ಹಾಗೆ ಸ್ತ್ರೀಯರ ಪರಿಸ್ಥಿತಿ ದಯನೀಯವಾಗಿತ್ತು. ರಾಜರಾಮಮೋಹನರಾಯ್‌ರ ನಂತರ ವೀರೇಶಲಿಂಗಂ ಸ್ತ್ರೀಯರ ಉದ್ಧಾರಕ್ಕೆ ತಮ್ಮನ್ನು ಅರ್ಪಿಸಿಕೊಂಡರು. ಆಂಧ್ರದೇಶದ ಜನರ ಏಳಿಗೆಗಾಗಿ ಸಾಂಸ್ಕೃತಿಕ ಪುನರುಜ್ಜೀವನವನ್ನು ನಡೆಸಿದರು. ಬೆಂಗಾಲದಲ್ಲಿ ರಾಜರಾಮಮೋಹನರಾಯ, ಈಶ್ವರಚಂದ್ರ ವಿದ್ಯಾಸಾಗರ, ಮಹಾರಾಷ್ಟ್ರದಲ್ಲಿ ಗೋವಿಂದರಾನಡೆ ಮೊದಲಾದವರಿಂದ ಸ್ತ್ರೀಯರ ಉದ್ಧಾರದ ಕಾರ್ಯಕ್ರಮಗಳು ಜರುಗಿದವು. ಆದರೆ ಆಂಧ್ರದೇಶದಲ್ಲಿ ಒಬ್ಬನೇ ವೀರೇಶಲಿಂಗಂ ಆ ಕಾರ್ಯಗಳನ್ನು ಮಾಡಿದರು.

ವೀರೇಶಲಿಂಗಂ ತೆಲುಗು ಸಾಹಿತ್ಯದಲ್ಲಿ ಉನ್ನತ ಕ್ರಾಂತಿಯನ್ನು ತಂದರು. ಸಾಮಾಜಿಕ ಅಭ್ಯುದಯದಲ್ಲಿ ಸಾಹಿತ್ಯಭ್ಯುದಯವನ್ನು ತಂದರು. ಅದಕ್ಕಾಗಿ ಪ್ರಬಂಧಕಾಲದ ನಂತರ ಭಾವಕವಿತ್ವ ಕಾಲದ ಮಧ್ಯ ಇದ್ದ ಈ ಸಾಹಿತ್ಯಯುಗಕ್ಕೆ ವೀರೇಶಲಿಂಗಂ ಯುಗವೆಂದು ಕರೆದರು. ರಾಯಪ್ರೋಲು, ಕಟ್ಟಮಂಚಿ, ನಾರ್ಲವೆಂಕಟೇಶ್ವರರಾವ್ ಮುಂತಾದವರು ವೀರೇಶಲಿಂಗಂರನ್ನು ಆಧುನಿಕ ವ್ಯಕ್ತಿಯಾಗಿ, ಯುಗಪುರುಷನಾಗಿ ಅಂಗೀಕರಿಸಿದ್ದಾರೆ. ಒಟ್ಟಾರೆ ವೀರೇಶಲಿಂಗಂ ವರ್ತಮಾನಾಂಧ್ರ ಭಾಷಾ ಪ್ರವರ್ತಕ ಸಮಾಜವನ್ನು ಸ್ಥಾಪಿಸಿ ಭಾಷಾ ಪ್ರಚಾರವನ್ನು ಮಾಡಿದನು.

**ಆಧುನಿಕ ಸಾಹಿತ್ಯ ನಿರ್ಮಾತೃ ವೀರೇಶಲಿಂಗಂ ಪಂತುಲು**

ಕಂದಕೂರಿ ವೀರೇಶಲಿಂಗಂ (೧೮೪೮-೧೯೧೯) ಆಧುನಿಕಾಂಧ್ರ ಸಾಹಿತ್ಯಕ್ಕೆ ವೀರೇಶಲಿಂಗಂ ಕೊಡುಗೆಯನ್ನು ಗಮನಿಸಿ ಆಧುನಿಕ ಕಾಲವನ್ನು ವೀರೇಶಲಿಂಗಂ ಯುಗವೆಂದು ಕರೆದರು. ಕಂದುಕೂರಿ ವೀರೇಶಲಿಂಗಂ ಪಂತುಲುರವರ ತೆಲುಗು ಸಾಹಿತ್ಯಕ್ಕೆ ಮತ್ತು ಸಮಾಜಕ್ಕೆ ಮಾಡಿದ ಸೇವೆ ಅತ್ಯಮೂಲ್ಯವಾದುದು. ತಿಕ್ಕನನಂತೆ ನಿರ್ವಚನ ಕಾವ್ಯವನ್ನು ಬರೆದು ಅಭಿನವ ತಿಕ್ಕನ ಎಂಬ ಬಿರುದನ್ನು ಧರಿಸಿದನು. ೩೦ನೇ ವಯಸ್ಸಿನಲ್ಲಿ ಪದ್ಯಗಳನ್ನು ಬರೆಯಲು ಪ್ರಾರಂಭಿಸಿ ಐದೇ ವರ್ಷಗಳಲ್ಲಿ ಉತ್ತಮಕವಿಯೆಂದು ಹೆಸರು ಪಡೆದನು. ಮೊದಮೊದಲು ವೀರೇಶಲಿಂಗಂ ಬರೆದ ಕಾವ್ಯಗಳು ಪಾಂಡಿತ್ಯವನ್ನು ಪ್ರದರ್ಶಿಸುವಂತಹವು. ಜನರ ಮನೋಭಾವವನ್ನು ಅರಿತ ವೀರೇಶಲಿಂಗಂ ತನ್ನ ಕಾವ್ಯ ಶೈಲಿಯನ್ನು ಬದಲಿಸಿದರು. ವೀರೇಶಲಿಂಗಂ ದಕ್ಷಿಣದ ಈಶ್ವರಚಂದ್ರಸಾಗರವೆಂಬ ಬಿರುದಿದೆ. ಇವರ ಸಮಾಜಸೇವೆ ಹಾಗೂ ಸಾಹಿತ್ಯಸೇವೆಗಳನ್ನು ಸಮಾನದೃಷ್ಟಿಯಿಂದ ಕೈಗೊಂಡವರು. ಸ್ತ್ರೀವಿದ್ಯೆ, ವಿಧವಾವಿವಾಹ ಮುಂತಾದ ಸಮಾಜ ಸೇವೆಗಾಗಿ ಶ್ರಮಿಸಿದರು. ಮುಖ್ಯವಾಗಿ ಸಮಾಜಸೇವೆಗೆ ಸಾಹಿತ್ಯವನ್ನು ಒಂದು ಸಾಧನವಾಗಿ ಬಳಸಿಕೊಂಡರು.

**ಕಂದುಕೂರಿ ವೀರೇಶಲಿಂಗಂ ರಚನೆಗಳು** ತೆಲುಗಿನಲ್ಲಿ ಆಧುನಿಕ ಸಾಹಿತ್ಯ ಪ್ರಕಾರಗಳಲ್ಲಿ ಹೆಚ್ಚಿನವುಗಳನ್ನು ನಾನೇ ಮೊದಲು ರಚಿಸಿದೆ ಎಂದು ತನ್ನ ಆತ್ಮ ಚರಿತ್ರೆಯಲ್ಲಿ ಹೇಳಿಕೊಂಡಿದ್ದಾರೆ. ಮೊದಲ ಆತ್ಮ ಚರಿತ್ರ, ಮೊದಲ ನಾಟಕ, ಮೊದಲ ಪ್ರಹಸನಂ, ಮೊದಲ ವಚನ ಪ್ರಬಂಧಂ,

ಮೊದಲ ಕವಿಗಳ ಚರಿತ್ರ, ಮೊದಲ ಶಾಸ್ತ್ರೀಯ ಗ್ರಂಥಗಳ ನಿಬಂಧನ ಹೀಗೆ ವೀರೇಶಲಿಂಗಂ ಮೊದಲಿಗರಾಗಿ ಬರೆದರೆಂದು ತಿಳಿಯುತ್ತದೆ.

ವೀರೇಶಲಿಂಗಂ ಮೊದಲ ರಚನೆ ಕಾವ್ಯವಾದರೂ ಸಹ ಕವಿಯಾಗಿ ಪ್ರಖ್ಯಾತವಾಗಲಿಲ್ಲ. 'ಬ್ರಾಹ್ಮವಿವಾಹ' ಎಂಬ ಹೆಸರಿನ ನಾಟಕವನ್ನು ಜನರೆಲ್ಲರೂ ಗುಂಪುಗುಂಪಾಗಿ ಓದುತ್ತಿದ್ದರಂತೆ. ಈ ನಾಟಕವು (೧೮೭೬)ತೆಲುಗಿನ ಮೊದಲ ಸಾಮಾಜಿಕ ನಾಟಕ. ಹೆಣ್ಣು ಮಕ್ಕಳಿಗಾಗಿ, ಸತ್ಯವತಿ ಚರಿತ್ರಮು, ಚಂದ್ರಮತಿ ಚರಿತ್ರಮು, ಸತ್ಯಸಂಜೀವಿನಿ ಎಂಬ ಗದ್ಯ ಗ್ರಂಥಗಳನ್ನು ರಚಿಸಿದರು. ಸತ್ಯವತಿ ಓದಿದ ಮೇಲೆ ಅನೇಕ ಸ್ತ್ರೀಯರು ತಮ್ಮ ತಮ್ಮ ಮಕ್ಕಳಿಗೆ ಸತ್ಯವತಿಯೆಂದು ಹೆಸರಿಟ್ಟಿದ್ದರಂತೆ. ಹಾಗೆ ವೀರೇಶಲಿಂಗಂ ಪಂತುಲು ಅನೇಕ ಶಾಸ್ತ್ರ ಗ್ರಂಥಗಳನ್ನು ರಚಿಸಿದ್ದಾನೆ. ಶರೀರಶಾಸ್ತ್ರ ಸಂಗ್ರಹ, ಪ್ರಾಣಶಾಸ್ತ್ರ, ಜ್ಯೋತಿಶ್ಶಾಸ್ತ್ರ ಸಂಗ್ರಹ, ಪ್ರಾಣಿ ಸ್ವಭಾವ ಚರಿತ್ರ ಹಾಗೂ ಗರ್ಭಿಣಿ ಸ್ತ್ರೀಯರ ಉಪಯೋಗಕ್ಕಾಗಿ ಪತ್ನಿಹಿತ ಸೂಚನಿ ಎಂಬ ಗ್ರಂಥಗಳನ್ನು ರಚಿಸಿದರು. ತೆಲುಗಿನ ಕಾದಂಬರಿ ಕ್ಷೇತ್ರದಲ್ಲಿ ವೀರೇಶಲಿಂಗಂ ಅವರ ರಾಜಶೇಖರಚರಿತ್ರ ತುಂಬ ಪ್ರಭಾವ ಬೀರಿ ಹಾಗೆಯೇ **ಸತ್ಯರಾಜಾ ಪೂರ್ವದೇಶಯಾತ್ರೆ** ಇವೆರಡೂ ಪುರುಷರಿಗಾಗಿ ಬರೆದ ಕಾದಂಬರಿಗಳು. ಇನ್ನೊಂದು ಕವಿಚರಿತ್ರೆ ತೆಲುಗು ಸಾಹಿತ್ಯ ಚರಿತ್ರೆಯನ್ನು ಅಭ್ಯಸಿಸುವವರಿಗೆ ತುಂಬ ಉಪಯುಕ್ತ ಗ್ರಂಥ. ಮೂಢನಂಬಿಕೆಗಳನ್ನು ಟೀಕಿಸುವ ಉದ್ದೇಶದಿಂದ ವೀರೇಶಲಿಂಗಂ ಬರೆದ ಅಸಂಖ್ಯಾತ ಪ್ರಹಸನಗಳು ತೆಲುಗು ಸಾಹಿತ್ಯಕ್ಕೆ ಅವರ ಗಣನೀಯವಾದ ಕೊಡುಗೆ ಎಂದು ಹೇಳಬಹುದು. ವೀರೇಶಲಿಂಗಂ ಅನೇಕ ಆಂಗ್ಲ ನಾಟಕಗಳನ್ನು ತೆಲುಗಿಗೆ ಅನುವಾದಿಸಿದರು.

ವೀರೇಶಲಿಂಗಂ ಮುಖ್ಯವಾಗಿ ಸ್ತ್ರೀಯರ ಅಭ್ಯುದಯಕ್ಕಾಗಿ ವಿಶೇಷವಾಗಿ ಅವರ ಕಲ್ಯಾಣಕ್ಕಾಗಿ ರಚಿಸಿದ್ದಾನೆ. ಸ್ತ್ರೀಯರ ವಿದ್ಯೆಯನ್ನು ಪ್ರೋತ್ಸಾಹಿಸಲು, ಸಾಮಾಜಿಕ ದುರಾಚಾರಗಳು ತಿಳಿದುಕೊಳ್ಳಲು ನೀತಿಕಥೆಗಳನ್ನು ರಚಿಸಿದ್ದು ತಿಳಿಯುತ್ತದೆ. ಸ್ತ್ರೀಯರಿಗಾಗಿ ಸತಿಹಿತಬೋಧಿನಿ ಎಂಬ ಪತ್ರಿಕೆ ಹೊರಡಿಸಿದರು. ಷೇಕ್ಸ್‌ಪಿಯರ್, ಚಾರ್ಲ್ಸ್‌ಲ್ಯಾಂಬ್ ರಚಿಸಿದ ನಾಟಕ ಕಥೆಗಳನ್ನು ನಮ್ಮ ದೇಶಕ್ಕೆ ಅನುಗುಣವಾಗಿ ಕಥೆಗಳನ್ನು ರಚಿಸಿದರು. ಸ್ತ್ರೀಯರಿಗಾಗಿ, ಚಿಕ್ಕ ಬಾಲಕ ಬಾಲಕಿಯರ ಸಲುವಾಗಿ ನೀತಿಬೋಧ ಪ್ರಧಾನವಾಗಿ ನೀತಿ ಕಥಾಮಂಜರಿ ಎಂಬ ಚಿತ್ರಪಟಗಳ ಜೊತೆಗೆ ಎರಡು ಭಾಗಗಳಲ್ಲಿ ರಚಿಸಿದನು. ಮುಖ್ಯವಾಗಿ ೧೫೮ ಕಥೆಗಳಲ್ಲಿ ಪ್ರತಿ ಕಥೆ ವಿವರದಲ್ಲಿ ಒಂದು ನೀತಿ ಪದ್ಯದಲ್ಲಿ ಮನೋಹರವಾಗಿ ರಚಿಸಿದ್ದಾನೆ.

ಆಧುನಿಕ ತೆಲುಗು ಕಾವ್ಯೋದಯಕ್ಕೆ ೧೯ನೆಯ ಶತಮಾನದ ಕೊನೆಯ ಕಾಲದಲ್ಲಿ ಕೆಲವರು ಬುನಾದಿ ಹಾಕಿದರು. ಕಂದಕೂರಿ ವೀರೇಶಲಿಂಗಂ ಮೊದಮೊದಲು ಸಂಪ್ರದಾಯ ರೀತಿಯಲ್ಲಿ ಕಾವ್ಯಗಳು ಬರೆದು ನಂತರ ಹೊಸ ಪ್ರಯೋಗಗಳನ್ನು ತಂದರು. ಆಧುನಿಕ ತೆಲುಗು ಕಾವ್ಯದ ಇತಿಹಾಸದಲ್ಲಿ ಸಿ. ಆರ್. ರೆಡ್ಡಿಯವರ **ಮುಲಸಲಮ್ಮ ಮರಣಮು** ಹೆಸರಿಸತಕ್ಕದ್ದು. ಇದರ ವಸ್ತು

ಆಂಧ್ರದ ರಾಯಲ ಸೀಮೆಯಲ್ಲಿ ಪ್ರಚಾರದಲ್ಲಿರುವ ಒಂದು ಜನಪದ ಕಥನಗೀತೆ. ಈ ಕಾವ್ಯವು ೧೯೦೦ರಲ್ಲಿ ಪ್ರಕಟವಾಯಿತು.

ಸಂಪ್ರದಾಯದ ಪದ್ಧತಿಗೆ ಸೇರಿದ ವಿದ್ವಾಂಸರು ಪೂರ್ವ ಮಾರ್ಗವನ್ನು ಅನುಸರಿಸಿ ಕಾವ್ಯ ರಚಿಸುತ್ತಿರುವಾಗ ಆಂಗ್ಲ ಭಾಷೆಯಲ್ಲಿ ನಿಷ್ಠೆಯನ್ನು ಹೊಂದಿದವರಲ್ಲಿ ಕೀಲ್ಸ್, ಚೆಲ್ಲಿ, ಟೆನ್ನಿಸನ್, ವರ್ಡ್‌ವರ್ತ್ ಮುಂದಾದವರ ಕವಿಗಳ ಕೃತಿಗಳಿಂದ ಪ್ರಭಾವವನ್ನು ಪಡೆದು ಹೊಸರೀತಿಯ ಕಾವ್ಯವನ್ನು ಬರೆಯಲು ಪ್ರಾರಂಭಿಸಿದರು. ಇವರ ನೂತನ ಕಾವ್ಯಕ್ಕೆ ಭಾವಕಾವ್ಯವೆಂಬ ಹೆಸರು ಪ್ರಸಿದ್ಧವಾಯಿತು. ಈ ಕವಿತಾ ಚಳುವಳಿಯಲ್ಲಿ ಲಘುಕಾವ್ಯ, ಖಂಡಕಾವ್ಯ, ಆತ್ಮಶ್ರಯ ಕಾವ್ಯ, ಪ್ರಕೃತಿ ಕವಿತೆ, ಮರ್ಮಕವಿತೆ ಎಂಬ ಐದು ರೂಪಗಳಾಗಿ ವ್ಯಕ್ತವಾಗಿವೆ.

ಲಘುಕಾವ್ಯವು ಸಣ್ಣಕಥೆಯಿಂದ ಹಿಡಿದು ಅತ್ಯಂತ ದೀರ್ಘವಾದ ವರ್ಣನೆಗಳಿಗೆ. ಪ್ರಾಧಾನ್ಯ ಕೊಡುವ ಕಾವ್ಯವೇ ಲಘುಕಾವ್ಯ. ಇಲ್ಲಿ ಕಾಲ್ಪನಿಕ ಅಥವಾ ಸಾಮಾಜಿಕವಾಗಿ ಇರಬಹುದು. ಖಂಡಕಾವ್ಯವು ಸಂಪೂರ್ಣ ಕಥೆಯಿಂದ ಕೂಡಿರದೆ ಒಂದೇ ದೃಶ್ಯವನ್ನಾಗಲಿ, ಸನ್ನಿವೇಶವನ್ನಾಗಲಿ, ಭಾವವನ್ನಾಗಲಿ ವರ್ಣಿಸುತ್ತಾ ಪದ್ಯಗಳಿಂದ ಕೂಡಿದುದು. ಆತ್ಮಪ್ರಣಯ, ಆತ್ಮಭಾವವನ್ನು ವರ್ಣಿಸುವ ಕವಿತೆಯೇ ಆತ್ಮಶ್ರಯ ಕವಿತೆ. ಪ್ರಕೃತಿ ಕಾವ್ಯವು ಪ್ರಕೃತಿಯನ್ನು ಗ್ರಾಮಾದಿಗಳಲ್ಲಿರುವ ಪರಿಸ್ಥಿತಿಯನ್ನು ವರ್ಣಿಸುವ ಕಾವ್ಯವಾಗಿದೆ. ಮರ್ಮಕವಿತೆಯು ಭಕ್ತಿತತ್ತ್ವಮಯವಾದ ಕಾವ್ಯವಾಗಿದೆ. ಗುರುಜಾಡ ಅಪ್ಪರಾವ್‌ರವರ ದೇಶಭಕ್ತಿಗಳು, ಮುತ್ಯಾಲಸರಮು ಖಂಡಕಾವ್ಯಕ್ಕೆ ಪ್ರಸಿದ್ಧವಾಗಿವೆ.

೧೯೧೪ರಲ್ಲಿ ಶ್ರೀ ಅಬ್ಬೂರಿ ರಾಮಕೃಷ್ಣರಾವು ಕೆಲವು ಖಂಡ ಕಾವ್ಯಗಳನ್ನು ರಚಿಸಿದರು. ಆಚಾರ್ಯ ಶ್ರೀರಾಯಪೋಲು ಸುಬ್ಬರಾವು ಲಲಿತ, ತೃಣಕಂಕಣ ಎನ್ನುವ ಲಘುಕಾವ್ಯವನ್ನು ರಚಿಸಿದರು. ನಂತರ ಟಾಗೋರರ ಪ್ರಭಾವವನ್ನು ಪಡೆದು ಹೆಚ್ಚಿನ ಕಾವ್ಯಗಳನ್ನು ಬರೆದರು. ಶೃಂಗಾರಕ್ಕೂ ದೇಶಭಕ್ತಿಗೂ ಇವರ ಕವನಗಳು ಪ್ರಸಿದ್ಧವಾಗಿವೆ. ಜಾಷುವಾ ಕವಿ ರಚಿಸಿದ ಕೆಲವು ಲಘು ಕಾವ್ಯಗಳು ಯುವಕರನ್ನು ಆಕರ್ಷಿಸಿ ಕಾವ್ಯರಚನೆಗೆ ಪ್ರೇರೇಪಿಸಿದವು. ಹಾಗೆ ಹಲವಾರು ಕವಿಗಳು ಲಘುಕಾವ್ಯಗಳನ್ನು ರಚಿಸಿದ್ದಾರೆ.

**ತಿರುಪತಿ ವೆಂಕಟ ಕವಿಗಳ** ಕೊಡುಗೆಯು ತೆಲುಗು ಸಾಹಿತ್ಯಕ್ಕೆ ಅಗ್ರಗಣ್ಯವಾಗಿದೆ. ಇವರ ಕಾವ್ಯಗಳು ಸಂಪ್ರದಾಯದ ರೀತಿಯಲ್ಲಿದ್ದರೂ ಸಹ ಹಲವು ಹೊಸ ಪ್ರಯೋಗಗಳು ಗಮನಾರ್ಹವಾಗಿವೆ. ಇವರ ಬುದ್ಧ ಚರಿತ್ರೆ, ಅರ್ನಲ್ಡ್ ಬರೆದ ಲೈಟ್ ಆಫ್ ಏಷಿಯಾ, ಅನುವಾದ. ಈ ಕವಿಗಳ ಶ್ರವಣಾ ನಂದಮು, ಪಾಣಿಗೃಹೀತ. ವೀರೇಶಲಿಂಗಂ ಪ್ರಾರಂಭಿಸಿದ ಸ್ತ್ರೀ ಚಳುವಳಿ ವೇಶ್ಯಾವಾಟಿಕೆ ವಿರುದ್ಧ ನಡೆದ ಚಳುವಳಿಯ ಪ್ರಭಾವದಿಂದ ಬರೆದಂಥವು. ಇವು ಗೀತಮು, ವ್ಯಂಗ್ಯ

ಕಾವ್ಯ. ಇವೆಲ್ಲ ೧೯ನೆಯ ಶತಮಾನದಿಂದ ೨೦ನೇ ಶತಮಾನದ ಮಧ್ಯಭಾಗದವರೆಗೆ ಆಂಧ್ರ ಸಾಹಿತ್ಯದಲ್ಲಿ ಸಂಚಲನವುಂಟು ಮಾಡಿದುವು.

೧೯೧೦ರಲ್ಲಿ ತೆಲುಗು ಕಾವ್ಯರಂಗದಲ್ಲಿ ನವ್ಯಕಾವ್ಯ ರಚನೆಯಾಯಿತು. ಈ ಕಾವ್ಯ ಹುಟ್ಟಲು ಹಲವು ಕಾರಣಗಳಿವೆ. ವೀರೇಶಲಿಂಗಂ, ರಘುಪತಿ ವೆಂಕಟರತ್ನಂ ಮುಂತಾದವರು ಪ್ರಾರಂಭಿಸಿದ ಸಮಾಜಸುಧಾರಣೆ ಇವುಗಳಲ್ಲಿ ಪ್ರಮುಖವಾದವು. ಹಾಗೆ ಇಂಗ್ಲಿಷ್ ವಿದ್ಯಾಭ್ಯಾಸ, ವಿವಿಧ ಪತ್ರಿಕೆಗಳ ಜನನ, ಆಡು ಮಾತಿನಲ್ಲಿ ಬರೆಯಬೇಕೆಂಬ, ಹಂಬಲವು ಆಧುನಿಕ ಸಾಹಿತ್ಯದ ಮೇಲೆ ಪ್ರಭಾವ ಬೀರಿದವು. ರಾಷ್ಟ್ರೀಯ ಚಳುವಳಿ, ಸ್ವಭಾಷಾಭಿಮಾನ ಹಾಗೂ ದೇಶಾಭಿಮಾನಗಳು ಜನರಲ್ಲಿ ಬೆಳೆದು ಕಾವ್ಯದ ಮೇಲೂ ತನ್ನ ಪ್ರಭಾವವನ್ನು ಬೀರಿತು. ೨೦ನೇ ಶತಮಾನದಲ್ಲಿ ತೆಲುಗು ಸಾಹಿತ್ಯದಲ್ಲಿ ಅದರ ವಸ್ತುವಿನಲ್ಲಿ ನವ್ಯತೆ, ಭಾವನವ್ಯತೆ, ಶೈಲಿಯ ನವ್ಯತೆಯನ್ನು ಕಾಣಬಹುದು.

**ಗುರುಜಾಡ ಅಪ್ಪರಾವ್** (೧೮೬೨-೧೯೧೫) ಗುರುಜಾಡ ಅಪ್ಪರಾವ್ ಇವರು ಆಧುನಿಕ ಕಾವ್ಯದ ಆದ್ಯ ಪ್ರವರ್ತಕರೆಂದು ಹೆಸರು ಪಡೆದವರು. ಮೊದಮೊದಲು ಸಂಪ್ರದಾಯಿಕ ಕಾವ್ಯ ರಚನೆಯಲ್ಲಿ ತೊಡಗಿದ್ದ ಗುರುಜಾಡರು ನಂತರ ನವ್ಯಕಾವ್ಯಕ್ಕೆ ವಾಲಿದರು. "ಕನ್ಯಾಶುಲ್ಕಂ, The Minute of Dissent to the Telugu composition subcommittee Report, ಸಾರಂಗಧರ (ಆಂಗ್ಲಪದ್ಯಕಾವ್ಯ), ದಿಕ್ಕುಬಾಟು, ಬಿಲ್ಹಣಿಯಂ(ನಾಟಕ),ಕಾಸುಲು(ಗೇಯ), ಡಾಮನು(ಗೇಯ), ಪಿತಿಯಸು(ಗೇಯ),, ಲವಣರಾಜುಕಲ, ಕನ್ಯಕ, ದಿಂಚುಲಂಗರು(ಗೇಯ), ಮುತ್ಯಾಲಸರಾಲು, ಸುಭದ್ರ(ಕಾವ್ಯ), ಡೈರೀಲು, ಮಾಟ-ಮಂತಿ, ಕೊಂಡುಭಟ್ಟೀಯಮು, ವ್ಯಾಸಚಂದ್ರಿಕ, ಪೂರ್ಣಮ್ಮ, ಮುಂತಾದವು ಗುರುಜಾಡರ ಕೃತಿಗಳು."[೭]

ಗುರುಜಾಡ ಅಪ್ಪಾರಾವ್ ಮೊದಲಿಗೆ ಸಾಂಪ್ರದಾಯಕ ರೀತಿಯಲ್ಲಿ ಪದ್ಯಗಳನ್ನು ರಚಿಸಿದರು. ಮಾಟಲುಮಟ್ಟುಲು, ಮೆರುಪುಲು, ಸುಭದ್ರ, ಋತಶತಕಂ ರಚಿಸಿದನು. ೧೯೦೯ರಲ್ಲಿ ನೀಲಗಿರಿಪಾಟಲು ಹೊರಬಂದವು. ಕನ್ಯಾಶುಲ್ಕ ನಾಟಕರಂಗದಲ್ಲಿ ವಿಶೇಷ ಪ್ರಯೋಗ ಮಾಡಿದರು. ನಂತರ ನಾಟಕರಂಗದಿಂದ ಕಾವ್ಯದ ಕಡೆಗೆ ಗಮನ ಹರಿಸಿದರು. ಅವರ ಕಾವ್ಯದಲ್ಲಿ ಅನೇಕ ವಿಧಗಳಿಂದ ಹೊಸತನ ಕಾಣುತ್ತದೆ. ಇವರ ಶೈಲಿಗೆ ತಿಕ್ಕನ ಮತ್ತು ವೇಮನ ಮಾರ್ಗದರ್ಶಕರು. ಮುತ್ಯಾಲಸರಮು, ಗುರುಜಾಡರ ಮಹತ್ವದ ಪ್ರಯೋಗ. ಅಕ್ಷರ ಛಂದಸ್ಸಿನ ಪದ್ಯಗಳಿಗೆ ಮಾನ್ಯತೆಯಿದ್ದ ಕಾಲದಲ್ಲಿ ಮಾತ್ರ ಛಂದಸ್ಸಿನ ಗೇಯರೂಪಕ್ಕೆ ಕಾವ್ಯ ಮಾಧ್ಯಮವನ್ನು ತಿರುಗಿಸಿದ್ದು ಗುರುಜಾಡರ ಮಹತ್ವದ ಕೊಡುಗೆಯಾಗಿದೆ. ಇವರ ವಿಶಿಷ್ಟವಾದ ವಡಿ ಹಾಗೂ ಪ್ರಾಸಗಳನ್ನು ಬಿಟ್ಟು ಆಡು ಮಾತಿನಲ್ಲಿ ಕಾವ್ಯ ಬಳಸಿದ ಅವರ ನವ್ಯ ಪ್ರಿಯತೆಯನ್ನು ಎತ್ತಿ ತೋರಿಸುತ್ತದೆ. ೧೮೧೦ರಿಂದ ಅವರ ಲೇಖನಿಯಿಂದ ಹೊರಬಂದ ರಚನೆಗಳು ಆಧುನಿಕ ತೆಲುಗು ಕಾವ್ಯದಲ್ಲಿ ಒಂದು ಮೈಲಿಗಲ್ಲಾಗಿದೆ. ಅಪ್ಪರಾಯರ ಗೀತೆಗಳಲ್ಲಿ ಮಾನವೀಯತೆ ಪ್ರಧಾನವಾಗಿ ಕಾಣುತ್ತದೆ. ಹಾಗೆ ಸಮಾಜ ಸುಧಾರಣೆಯು ಇವರ ರಚನೆಗಳಲ್ಲಿ ಇರುವ ಮತ್ತೊಂದು ಗುಣ. ಮುತ್ಯಾಲಸರಮು

ಎಂಬ ಕಾವ್ಯದಲ್ಲಿ ಮೂಢನಂಬಿಕೆಗಳನ್ನು ಖಂಡಿಸುವ ಗೀತೆಗಳಿವೆ. ಕನ್ಯಾಶುಲ್ಕದಲ್ಲಿ ಸಮಾಜದಲ್ಲಿ ನಡೆಯುವ ವಾಸ್ತವಿಕವಾದ ನೆಲೆಯಲ್ಲಿ ಅಲ್ಲಿನ ದುರಾಚಾರಗಳನ್ನು ಅದರಲ್ಲಿ ಕಟುವಾಗಿ ಟೀಕಿಸುತ್ತಾರೆ. ಅವರ ಲವಣರಾಜ ಕನಸು ಕೃತಿಯಲ್ಲಿ ಸಮಾಜ ಸುಧಾರಣೆಯ ಚಿತ್ರಣವನ್ನು ಕಾಣಬಹುದು.

ಗುರುಜಾಡ ಅಪ್ಪರಾವ್ ಇವರ ರಚನೆಗಳಲ್ಲಿ ಮಾನವೀಯ ಮೌಲ್ಯಗಳು ಮುಖ್ಯವಾಗಿ ಕಾಣುತ್ತವೆ. ಸಾಮಾಜಿಕ ಕಳಕಳಿ, ವಾಸ್ತವಿಕ ನೆಲೆಯಲ್ಲಿ ಕಾವ್ಯ ರಚಿಸಿದ್ದಾರೆ. ಸಮಾಜದಲ್ಲಿ ಸ್ತ್ರೀಯರ ದುಸ್ಥಿತಿಯನ್ನು ಅದ್ಭುತವಾಗಿ ವರ್ಣಿಸಿದ್ದಾನೆ. ಗುರುಜಾಡ ಪ್ರತಿಪಾದಿಸಿದ ಪ್ರೇಮತತ್ವವು ಪವಿತ್ರದಾಂಪತ್ಯ ಹಾಗೂ ವಿಶ್ವಮಾನವ ಪ್ರೇಮವೆಂಬ ಎರಡು ಮುಖಗಳಲ್ಲಿ ವ್ಯಕ್ತವಾಗಿವೆ. ಗುರುಜಾಡರಲ್ಲಿ ದೇಶಭಕ್ತಿ ಹಾಗೂ ವಿಶ್ವಮಾನವ ಪ್ರೇಮವಿದೆ. ಅವರ ದೇಶಭಕ್ತಿ ಎಂಬ ಹೆಸರಿನ ವಿಶ್ವಮಾನವ ರಾಷ್ಟ್ರೀಯ ಗೀತೆಯಲ್ಲಿ ದೇಶವನ್ನು ಪ್ರೀತಿಸು, ಪ್ರೀತಿಯನ್ನು ಬೆಳೆಸು ಎಂಬ ದೇಶ ಪ್ರೇಮವನ್ನು ಕಾಣಬಹುದು.

ಆಧುನಿಕ ತೆಲುಗು ಸಾಹಿತ್ಯ ಕಾವ್ಯಕ್ಕೆ ಹೊಸ ಚೇತನವನ್ನು ಕೊಟ್ಟಂತ ಪ್ರಭಾವಶಾಲಿ ಕವಿಗಳಲ್ಲಿ ರಾಯಪ್ರೋಲು ಸುಬ್ಬರಾವು ಒಬ್ಬರು. ೧೯೦೯ರಲ್ಲಿ ಇವರು ಬರೆದ ರಚನೆಗಳು ಅಂದಿನ ಯುವಕವಿಗಳನ್ನು ಕಾವ್ಯ ರಚನೆಗೆ ಪ್ರೇರೇಪಿಸಿದವು. ಗೋಲ್ಡ್‌ಸ್ಮಿತ್ ಬರೆದ **ಹೆರ್ಮಿಟ್**‌ನ್ನು ಲಲಿತ ಎಂಬ ಹೆಸರಲ್ಲಿ ಅನುವಾದಿಸಿ (೧೯೦೯)ದರು. ಇವರ **ತೃಣಕಂಕಣಮು** (೧೯೧೨) ಕೃತಿಯಿಂದ ತೆಲುಗಿನ ಭಾವಕಾವ್ಯಕ್ಕೆ (ರೊಮ್ಯಾಂಟಿಕ್) ನಾಂದಿಹಾಡಿತು. ತೃಣಕಂಕಣದ ವಸ್ತು ತಾರುಣ್ಯದಲ್ಲಿ ಪರಸ್ಪರ ಪ್ರೀತಿಸಿ ಅನಂತರ ಬೇರೆಯಾದ ಪ್ರಣಯಿಗಳ ಕಥೆ. ಇವರು ಹೊಸರೀತಿಯ ಪ್ರಣಯತತ್ವ, ಶೃಂಗಾರವೆಂಬ ಹೆಸರಿನಲ್ಲಿ ಆಧುನಿಕ ಕವಿಗಳಿಗೆ ಮಾರ್ಗದರ್ಶಕರಾದರು. ಇವರ ಕೃತಿಗಳಲ್ಲಿ ಹೊಸತನವನ್ನು ಕಾಣಬಹುದು. ತೆಲುಗಿನಲ್ಲಿ ಸ್ಮೃತಿಗೀತೆಗಳಿಗೂ ಇವರೇ ಮಾರ್ಗದರ್ಶಕರು. ರಾಯಪ್ರೋಲು ಕಾವ್ಯದಲ್ಲಿ ಛಂದೋವೈವಿಧ್ಯ, ವಸ್ತುವೈವಿಧ್ಯ, ಭಾವವೈವಿಧ್ಯ ಹಾಗೂ ಶೈಲಿವೈವಿಧ್ಯವಿದೆ. ಹಾಗೆ ದೇಶಾಭಿಮಾನವು ಇವರ ಗೀತೆಗಳಲ್ಲಿ ಹಾಸುಹೊಕ್ಕಾಗಿವೆ. ಇವರ ಗೀತೆಗಳು ಆಂಧ್ರಾದಾದ್ಯಂತ ತುಂಬಾ ಪ್ರಚಾರ ಪಡೆದಿವೆ. ಪ್ರಕೃತಿ ಕಾವ್ಯದಲ್ಲಿ **ನವ್ಯತೆ**ಯನ್ನು ತಂದರು. ಸಮಾಜದ ದುರ್ನಡತೆಗಳನ್ನು ಖಂಡಿಸಿದರು. ರಾಯಪ್ರೋಲು ಇವರು ೨೦ನೇ ಶತಮಾನದ ಮೊದಲಲ್ಲಿ ಅನೇಕ ಕವಿಗಳ ಮೇಲೆ ತಮ್ಮ ಪ್ರಭಾವವನ್ನು ಬೀರಿದರು.

ಆಧುನಿಕಾಂಧ್ರ ಸಾಹಿತ್ಯ ಜಗತ್ತಿನಲ್ಲಿ ವಿಶ್ವನಾಥ ಸತ್ಯನಾರಾಯಣನು ಒಬ್ಬ ಮಹಾನ್‌ವ್ಯಕ್ತಿ. ಕಾವ್ಯ ರಚನೆಯಲ್ಲಿ ತನ್ನದೇ ವ್ಯಕ್ತಿತ್ವವನ್ನು ಪ್ರತಿನಿಧಿಸುತ್ತಾರೆ. ವಚನದಲ್ಲಿ, ವಾಕ್ಯದಲ್ಲಿ, ಶಬ್ದದಲ್ಲಿ, ಸಮಾಸದಲ್ಲಿ, ಭಾವದಲ್ಲಿ ದರ್ಶನದಲ್ಲಿ, ವಿಮರ್ಶೆಯಲ್ಲಿ, ಭಾಷಣದಲ್ಲಿ, ತನ್ನದೇ ವೈಲಕ್ಷಣಗಳು ಕಾಣಿಸುತ್ತವೆ.

ಆಂಧ್ರಪೌರುಷಂ, ಆಂಧ್ರಪ್ರಶಸ್ತಿ, ಗಿರಿಕುಮಾರುನಿ ಪ್ರೇಮ ಗೀತಾಲು, ಶೃಂಗಾರವೀಣ, ಶಶಿದೂತಂ, ಋತುಸಂಹಾರಂ, ಕಿನ್ನೆರಸಾನಿ, ಕೋಕಿಲಮ್ಮ ಪೆಳ್ಳಿ, ಮಾಸ್ವಾಮಿ, ವರಲಕ್ಷ್ಮಿ ತ್ರಿಶತಿ, ಝಾನ್ಸಿರಾಣಿ, ಶಿವಾರ್ಪಣಂ ಭ್ರಮರಗೀತಾಲು ಮುಂತಾದವು. ಕಾವ್ಯಾತೀಹಾಸಂ, ಶ್ರೀಮದ್ರಾಮಾಯಣ, ಕಲ್ಪವೃಕ್ಷಂ, ಮೊದಲಾದುವು ಕಾವ್ಯಗಳು. ವೆಯಪಡಗಲು, ಏಕವೀರ, ಮಾಬಾಬು, ಚೆಲಿಯಲಿ ಕಟ್ಟ, ತೆರಚಿರಾಜು, ಹಹಹೌಹೌ, ಸ್ವರ್ಗಾನಿಕಿ ನಿಚ್ಚೆನಲು, ವಿಷ್ಣುಶರ್ಮ ಇಂಗ್ಲಿಷ್ ಚದುವು, ಬದ್ದನ್ನ ಸೇನಾನಿ, ಸಮುದ್ರಪು ದಿಬ್ಬ, ವೀರವಲ್ಲಡು, ಕಡಿಮಿಚೆಟ್ಟು, ಪುಲಿಮ್ರುಗ್ಗು ನಂದೋರಾಜಾ ಭವಿಷ್ಯತಿ, ದಿಂಡುಕ್ರಿಂದ ಪೋಕ ಚಕ್ಕ, ಮೀರಪೂಜ, ಧರ್ಮಚಕ್ರಮು, ಬಾಣಾವತಿ ಮೊದಲಾದ ೬೦ಕ್ಕೂ ಹೆಚ್ಚು ಕಾದಂಬರಿಗಳು ರಚಿಸಿದನು. ಅವತಾರ ಪರಿವರ್ತನಂ, ಸಾಪ್ತಿಕ ಪ್ರಳಯಂ, ನರ್ತನಶಾಲ, ಅನಾರ್ಕಲಿ, ವೇನರಾಜು, ತಲ್ಲಿಕಾನಿಪಿಲ್ಲ, ತ್ರಿಶೂಲಂ ಮೊದಲಾದ ನಾಟಕಗಳನ್ನು ರಚಿಸಿದ್ದಾರೆ. ವಿವರ್ಶಗ್ರಂಥಗಳು ನನ್ನಯಗಾರಿ ಪ್ರಸನ್ನ ಕಥಾ ಕವಿತಾರ್ಥಯುಕ್ತಿ, ಅಲ್ಲಸಾನಿವಾನಿ ಅಲ್ಲಿಕ ಜಿಗಿಬಿಗಿ, ಕಾಳಿದಾಸುನಿ ಮುಕ್ಕ ಅಭಿಜ್ಞತ, ಒಕಡು ನಾಚನಸೋಮನ್ನ, ನಾರಾಮುಡು, ಮುಂತಾದುವು. ಯೋರ್ರಿಷಿಭೆಯ್, ಮಾಕ್ಲೀದ್ಮಲೋ ಕುಕ್ಕ, ಪರಿಪೂರ್ತಿ, ಕಪರ್ದಿ, ಮೊದಲಾದ ೨೨ ಸಣ್ಣ ಕಥೆಗಳನಲ್ಲದೆ What is Ramayana to me ಇಂಗ್ಲೀಷ್ ಪುಸ್ತಕ ಹಾಗೂ ಕಾವ್ಯನಾದಂ ಎಂಬ **ಲಕ್ಷಣಗ್ರಂಥವನ್ನು** ರಚಿಸಿದ್ದಾರೆ.

ಜ್ಞಾನಪೀಠ ಪ್ರಶಸ್ತಿ ಪಡೆದ ವಿಶ್ವನಾಥರ ಕಾವ್ಯದ ಋತುವರ್ಣನೆಯಲ್ಲಿ ಪ್ರತಿಭೆಯು ಬಹುಮುಖವನ್ನು ಕಾಣಬಹುದು. ವಿಶ್ವನಾಥನ ಕಿನ್ನರಸಾನಿ ಹಾಡುಗಳಿಗೆ ಆಧುನಿಕಾಂಧ್ರ ಗೇಯ ವಾಙ್ಮಯದಲ್ಲಿ ವಿಶಿಷ್ಟವಾದ ಸ್ಥಾನವಿದೆ. ಆಧುನಿಕ ಕಾವ್ಯ ಪರಂಪರೆಯಲ್ಲಿ ವಿಶ್ವನಾಥನಿಗೆ ಪ್ರಮುಖ ಸ್ಥಾನವಿದೆ. ವಾಸ್ತವದ ನೆಲೆಯಲ್ಲಿ ಕಾವ್ಯವನ್ನು ರಚಿಸಿದ್ದಾನೆ. ೧೯೩೩ರಲ್ಲಿ ತನ್ನ ಹೆಂಡತಿ ತೀರಿಕೊಂಡ ಸಂದರ್ಭದಲ್ಲಿ ವಿಯೋಗ ಕಾವ್ಯ ರಚಿಸಿದ್ದಾರೆ. ಸ್ಮೃತಿ ಕಾವ್ಯವಾಗಿ ಇದಕ್ಕೆ ಪ್ರಖ್ಯಾತಿ ಲಭಿಸಿದೆ. ವಿಶ್ವನಾಥನ ಜೀವಿತದ ದರ್ಶನವು ಸಾಮಾಜಿಕ ನೆಲೆಯಿಂದ ರೂಪುಗೊಂಡುದು. ಸಮಕಾಲೀನ ಸಾಮಾಜಿಕ, ಆರ್ಥಿಕ, ರಾಜಕೀಯ ಸ್ಥಿತಿಗತಿಗಳು, ಚೈತನ್ಯಗಳು, ಸಾಂಪ್ರದಾಯಕ ಸಾಮಾಜಿಕ ಚೈತನ್ಯ ರೂಪವಾದ ಪ್ರಾಚೀನ ವಾಙ್ಮಯವು ಬುನಾದಿಯಲ್ಲಿ ರೂಪು ಪಡೆದಿದೆ.

**ಆಧುನಿಕ ಕಾವ್ಯ ಚಳುವಳಿ**

ಸಮಾಜವು ಪರಿವರ್ತನಶೀಲವಾದದ್ದು, ಅದು ಬದಲಾವಣೆಗೆ ಆಹ್ವಾನಿಸುತ್ತ ಇರುತ್ತದೆ. ಸಾಮಾಜಿಕ, ರಾಜಕೀಯ, ಮತೋದ್ಯಮಗಳು ಆವಿರ್ಭವಿಸಿದ್ದು ತಿಳಿದ ವಿಷಯ. ಪಾಲ್ಕುರಿಕೆ ಸೋಮನಾಥನ ವೀರಶೈವ ಚಳುವಳಿ, ತಿಕ್ಕನ ಸಮನ್ವಯ ಚಳುವಳಿ, ಅನ್ನಮಯ್ಯ ಜಾನಪದ ಚಳುವಳಿ ಮೊದಲಾದವು ಪ್ರಾಚೀನ ಕಾವ್ಯದಲ್ಲಿ ಕಾಣಿಸುವುದು. ಆದರೆ ಆಧುನಿಕ ಚಳುವಳಿಗಳು ಆ ಚಳುವಳಿಗಿಂತ ತೀವ್ರವಾಗಿ ವ್ಯಾಪಿಸಿದೆ. ಆಧುನಿಕ ಚಳುವಳಿಗಳು ತೀವ್ರವಾಗಿ ವಾಸ್ತವಿಕ ನೆಲೆಯಲ್ಲಿ ರಚನೆಗೊಂಡಿವೆ. ಆಧುನಿಕ ಸಾಹಿತ್ಯ, ಕಾವ್ಯ ಪಾಶ್ಚಾತ್ಯ ವಿದ್ಯೆಯ ಪ್ರಭಾವದಿಂದ ಉದಯಿಸಿದೆ. ಇಲ್ಲಿನ ಸಾಮಾಜಿಕ ಪರಿವರ್ತನೆಗೆ ಪಾಶ್ಚಾತ್ಯ ಸಾಹಿತ್ಯದ ಪ್ರಭಾವ ಒಂದು ಕಾರಣ. ಸುಮಾರು ೧೦೦

ವರ್ಷಗಳಿಂದ ಸಾಮಾಜಿಕವಾಗಿ ರಾಜಕೀಯವಾಗಿ, ಕಾವ್ಯ ರೂಪದಲ್ಲಿ ತೆಲುಗು ಕಾವ್ಯದಲ್ಲಿ ಅನೇಕ ಚಳುವಳಿಗಳು ತಲೆ ಎತ್ತಿದವು. ಕೆಲವು ಸ್ವದೇಶಿ ಚಳುವಳಿಗಳು ಇನ್ನು ಕೆಲವು ವಿದೇಶಿ ಚಳುವಳಿಗಳಿಂದ ತೆಲುಗು ಸಾಹಿತ್ಯ ಪ್ರಭಾವ ಪಡೆದಿದೆ.

ಭಾರತದೇಶದ ೧೯ನೇ ಶತಮಾನವು ಉತ್ತರಾರ್ಧವು ಬಹಳ ಪ್ರಾಮುಖ್ಯತೆ ಪಡೆದಿದ್ದು, ಸರ್ವತೋಮುಖ ಜಾಗೃತಿಯನ್ನು ಮೈತಾಳಿದೆ. ಝೂನ್ಸಿರಾಣಿಲಕ್ಷ್ಮಿಬಾಯಿ, ತಾಂತಿಯಟೊಪಿ, ನಾನಾಸಾಹೇಬ, ಎಲ್ಲಾ ಸ್ವಾತಂತ್ರ್ಯ ವೀರರು ಇವರ ನೇತೃತ್ವದಲ್ಲಿ ಸಿಪಾಯಿ ದಂಗೆಗಳು ಜರುಗಿದವು. ಈ ಕಾಲದಲ್ಲಿ ರಾಜರಾಮಮೋಹನ್‌ರಾಯ್, ಈಶ್ವರಚಂದ್ರ ವಿದ್ಯಾಸಾಗರ್, ರಾಮಕೃಷ್ಣ ಪರಮಹಂಸ, ವಿವೇಕಾನಂದ, ದಯಾನಂದ ಸರಸ್ವತಿ ಎಲ್ಲಾ ಸಂಘಸಂಸ್ಥೆಗಳು ಹಾಗೂ ಲೋಕಮಾನ್ಯ ಗಂಗಾಧರ ತಿಲಕ, ಲಾಲಾಲಜಪತರಾಯ, ಬಿಪಿನ್‌ಚಂದ್ರಪಾಲ್ ಎಂಬ ದೇಶಭಕ್ತರುಗಳು. ಮತ್ತು ರವೀಂದ್ರನಾಥಠಾಗೂರ್, ಹರೀಂದ್ರನಾಥ ಚಟೋಪಾಧ್ಯಾಯ, ಶರಶ್ಚಂದ್ರ, ಬಂಕಿಮಚಂದ್ರ, ಇಕ್ಬಾಲ್ ಎಲ್ಲಾ ಕವಿಗಳ ರಚನೆಗಳು ಉದ್ಭವಿಸಿ ರಾಷ್ಟ್ರೀಯ ಪುನರುಜ್ಜೀವನದ ವಿಕಾಸವು ಪಡೆಯಿತು.

ಯೂರೋಪಖಂಡದ ವಿಜ್ಞಾನದ ಮುನ್ನಡೆಯ ಪ್ರಭಾವವು ೧೯ನೆಯ ಶತಮಾನದ ಉತ್ತರಾರ್ಧದಲ್ಲಿ ಸರಿಯಾಗಿ ಪ್ರಸಾರವಾಗಿದೆ. ಯೂರೋಪಿನಲ್ಲಿ ವಾಲ್ಟೆರ್, ರೂಸೋ ವಿಚಾರಗಳು ಸ್ವಚ್ಛ(Luberty), ಸಮಾನತೆ (Equality), ಸೋದರತ್ವ (Fraternity) ಅಂತಹ ತತ್ವಗಳು ಅವರ ವಿಚಾರಗಳು ಇಲ್ಲಿನ ಮೇಧಾವಿಗಳ ಹೃದಯಗಳನ್ನು ಪುಳಕಿತಗೊಳಿಸಿದುವು.

**ಭಾವ ಕಾವ್ಯ ಚಳುವಳಿ**

೨೦ನೇ ಶತಮಾನ ಪ್ರಾರಂಭದಲ್ಲಿ ಮೊದಲ ಸಲ **ತೆಲುಗು ಸಾಹಿತ್ಯ**ದಲ್ಲಿ ಪ್ರಬಂಧ ಕಾವ್ಯ ಧೋರಣೆಗಳ ಮೇಲೆ ತಿರುಗಿಬಿದ್ದ ವಚನವೇ ಭಾವಕಾವ್ಯ. ಆಧುನಿಕ ತೆಲುಗು ಕವಿತಾ ಧೋರಣೆಗಳಲ್ಲಿ ಭಾವಕಾವ್ಯವು ಒಂದು. ಭಾವಕಾವ್ಯ ಚಳುವಳಿ, ತೆಲುಗುದೇಶದಲ್ಲಿ ಮೂರು ದಶಕಗಳವರೆಗೆ (೧೯೨೦-೧೯೪೦) ಸಾಗಿಬಂತು. ಆಂಗ್ಲದ **ರೋಮ್ಯಾಂಟಿಕ್ ಪೊಯಟ್ರಿ** ಪ್ರಭಾವವು ಭಾವಕಾವ್ಯದ ಮೇಲೆ ಇದೆ. ಭಾವಕಾವ್ಯವನ್ನು ಕಾಲ್ಪನಿಕ ಕಾವ್ಯ ಎಂದು ಕೂಡ ಕರೆಯುವರು. ತೆಲುಗಿನಲ್ಲಿ ಕಾಲ್ಪನಿಕ ಕಾವ್ಯ, ಭಾವಕಾವ್ಯ ಎಂದು ಪರ್ಯಾಯ ಪದಗಳು ಕಂಡುಬರುತ್ತವೆ.

ರಾಯಪ್ರೋಲು ಸುಬ್ಬಾರಾವು ಕಾವ್ಯದಲ್ಲಿ ಭಾವಪದಂ ,ಭಾವಗೀತಂ ಮೊದಲು ಕಾಣಸಿಗುತ್ತವೆ. ವಿಶ್ವನಾಥ ಸತ್ಯನಾರಾಯಣ, ದೇವುಲಪಲ್ಲಿ ಕೃಷ್ಣಶಾಸ್ತ್ರಿ ರಚನೆಗಳಲ್ಲಿ ಭಾವಗೀತೆ ಕಾಣುತ್ತದೆ. ಈ ಭಾವಗೀತೆಯನ್ನು ಮೊದಲಸಲ ರಾಯಪ್ರೋಲು ಸುಬ್ಬರಾವು ಅಭಿನವಕಾವ್ಯದಲ್ಲಿ,

ಕೃಷ್ಣಶಾಸ್ತ್ರಿಯ ಕಾಲ್ಪನಿಕ ಕಾವ್ಯದಲ್ಲಿ ದುವ್ವರಿ ರಾಮಿರೆಡ್ಡಿಯ 'ಗೀತತತ್ವ'ದಲ್ಲಿ ನೋರಿನನರಸಿಂಹಶಾಸ್ತ್ರಿಯ ನವ್ಯಕಾವ್ಯದಲ್ಲಿ ಹೆಸರಿಸಿದರು. ತೆಲುಗು ಸಾಹಿತ್ಯದಲ್ಲಿ ಮೊಟ್ಟಮೊದಲು ಭಾವಕಾವ್ಯ ಎನ್ನುವ ಪದವನ್ನು ಗಾಡಿಚರ್ಲಹರಿಸರ್ವೋತ್ತಮರಾವು ಆಯ್ದುಕೊಂಡರು. ನಂತರ ಭಾವಕಾವ್ಯ ಎಂಬ ಪದವನ್ನು ಎಲ್ಲರೂ ಬಳಸಿದರು.

ಆಧುನಿಕ ತೆಲುಗು ಕಾವ್ಯದ ಅರುಣೋದಯ ಕಾಲದಿಂದ ಇದುವರೆಗೆ ಕವಿಗಳ ಮೇಲೆ ಹೆಚ್ಚು ಪ್ರಭಾವವನ್ನು ಬೀರಿದವರು ಗುರುಜಾಡ ಅಪ್ಪರಾವು. ಆದರೂ ೧೮೧೦ ರಿಂದ ೧೯೩೦ರವರೆಗೆ ಪ್ರಚಲಿತವಾಗಿದ್ದ ಭಾವಕಾವ್ಯದ ಸ್ಫೂರ್ತಿನೆಲೆಯು ರಾಯಪೋಲು ಸುಬ್ಬರಾವು ಇವರ ಕಾವ್ಯವಾಗಿದೆ. ಭಾವಕವಿತ್ವದ ಕವಿಗಳಾದ ರಾಯಪೋಲು ಸುಬ್ಬರಾವು, ವಿಶ್ವನಾಥ ಸತ್ಯನಾರಾಯಣ, ವೆಂಕಟಪಾರ್ವತಿ ಕವಿಗಳು, ದೇವುಲಪಲ್ಲಿ ಕೃಷ್ಣಶಾಸ್ತ್ರಿ, ದುವ್ವೂರಿ ರಾಮಿರೆಡ್ಡಿ, ಬಸವರಾಜು ಅಪ್ಪಾರಾವ್. ನಂಡೂರಿ ಸುಬ್ಬರಾವು, ವೇಮಲ ಸತ್ಯನಾರಾಯಣಶಾಸ್ತ್ರಿ, ನಾಯನಿ ಸುಬ್ಬರಾವು, ಪಿಂಗಳಿ ಲಕ್ಷ್ಮಿಕಾಂತ, ಕಾಟೂರಿ ವೆಂಕಟೇಶ್ವರರಾವು, ಜಾಷುವ, ಶಿವಶಂಕರಶಾಸ್ತ್ರಿ, ಅಡವಿಬಾಪಿರಾಜು, ಮುಂತಾದವರು ನೂತನ ತೆಲುಗು ಕಾವ್ಯದ ನಕ್ಷತ್ರಗಳು. ತೆಲುಗು ಭಾವಕಾವ್ಯಕ್ಕೆ ಕೆಲವು ವಿಶಿಷ್ಟ ಲಕ್ಷಣಗಳಿವೆ. ಅವುಗಳು ''ಡಾ. ಶಿವಲೋಕ ಪ್ರಕಾಶರಾವು ಇವರ ಕೃತಿಯಾದ 'ರೋಮ್ಯಾಂಟಿಸಂ'ನಲ್ಲಿ ಭಾವಕವಿತ ಲಕ್ಷಣಗಳನ್ನು ಹೇಳಿದ್ದಾರೆ. ೧) ಸ್ವೆಚ್ಛಾ ಪ್ರಯತ್ವಂ, ೨) ಆತ್ಮ ಶ್ರಯತ್ವಂ, ೩) ಮನನ ಪ್ರಾಧಾನ್ಯಂ, ೪) ಸಾಧನ ಪ್ರಾಧಾನ್ಯಂ, ೫) ಖಂಡಕಾವ್ಯತ್ವಂ, ೬) ಆರಾಧನಾತತ್ವಂ, ೭) ಮಾನವತವಾದಂ, ೮) ಸಂಕ್ಷಿಪ್ತತ, ಇಲ್ಲಿ ಮುಖ್ಯವಾಗಿ ಸ್ತ್ರೀ - ಪುರುಷರ ಬಾಹ್ಯ ಸೌಂದರ್ಯವನ್ನು ವರ್ಣಿಸದೆ ಆತ್ಮ ಸೌಂದರ್ಯಕ್ಕೆ ಈ ಕವಿಗಳು ಹೆಚ್ಚು ಪ್ರಾಧಾನ್ಯತೆಯನ್ನು ಕೊಟ್ಟಿದ್ದಾರೆ.''[೧೮]

ಭಾವಕಾವ್ಯದ ಕವಿಗಳು ಪ್ರಕೃತಿ ವರ್ಣನೆಗಳಲ್ಲಿ ಸೌಂದರ್ಯ ತತ್ವವನ್ನು ಪ್ರತಿಪಾದಿಸಿದ್ದಾರೆ. ತಮ್ಮ ಕಷ್ಟ ನೋವು-ನಲಿವುಗಳನ್ನು ಯಾವುದೇ ಮುಚ್ಚು ಮರೆಯಿಲ್ಲದೆ ವ್ಯಕ್ತ ಪಡಿಸಿದ್ದಾರೆ. ಈ ಭಾವಕಾವ್ಯದ ಮೇಲೆ ಇಂಗ್ಲೀಷಿನ ರೋಮ್ಯಾಂಟಿಕ್ ಪ್ರಭಾವ ದಟ್ಟವಾಗಿರುವುದು ಸ್ಪಷ್ಟ. ''ತೆಲುಗು ಭಾವಕಾವ್ಯದ ಪ್ರಕಾರಗಳು: ಪ್ರಣಯ ಕಾವ್ಯ (Love Poetry), ಪ್ರಕೃತಿ ಕಾವ್ಯ (Nature Poetry), ಆಧ್ಯಾತ್ಮಿಕ ಕಾವ್ಯ (Mystric poetry), ದೇಶಭಕ್ತಿ ಕಾವ್ಯ (Partiotic poetry), ಸಂಘಪರಷ್ಕರಣ ಕಾವ್ಯ (Reformative Poetry), ಮಾನವತಾವಾದ ಕಾವ್ಯ (Humanism poetry), ಸ್ತುತಿ ಕವಿತ್ವ ಸ್ಮೃತಿ ಕಾವ್ಯ (Elegiac poetry), ಬಾಲಗೇಯ ಕಾವ್ಯ ಮುಖ್ಯವಾಗಿವೆ.''[೧೯]

ಪ್ರಣಯ ಕಾವ್ಯದ ಮೇಲೆ ಇಂಗ್ಲಿಷಿನ ಶೈಲಿ, ಕೀಟ್ಸ್ ಮೊದಲಾದವರ ಕವಿಗಳ ಪ್ರಭಾವವಿದೆ. ಈ ಕಾವ್ಯಕ್ಕೆ ಭಾವಕವಿಗಳು ಹೆಚ್ಚು ಪ್ರಾಧಾನ್ಯವನ್ನು ಕೊಟ್ಟರು. ತರುಣ ವಯಸ್ಸಿನಲ್ಲಿ ರಾಯಪೋಲು ಸುಬ್ಬರಾವು, ಕೃಷ್ಣಶಾಸ್ತ್ರಿ, ವಿಶ್ವನಾಥ, ಮುಂತಾದವರು ಉತ್ತಮ

ಪ್ರಣಯ ಪದ್ಯಗಳನ್ನು ರಚಿಸಿದರು. ಕೃಷ್ಣಶಾಸ್ತ್ರಿಯ **ಊರ್ವಶಿ**, ವಿಶ್ವನಾಥನ **ಕಿನ್ನೆರ ಸಾನಿ**, ಶಿವಶಂಕರಶಾಸ್ತ್ರಿಯ **ಹೃದಯೇಶ್ವರಿ**, ಬಾಪಿರಾಜುವಿನ **ಶಶಿಕಲ**, ಮುಂತಾದವರ ಪ್ರಣಯ ಕಾವ್ಯಗಳನ್ನು ಕಾಣಬಹುದು. ಪ್ರಣಯ ಕಾವ್ಯಗಳಲ್ಲಿ ಕೆಲವು ಆತ್ಮನಿಷ್ಠ ಕಾವ್ಯಗಳಾದರೆ ಇನ್ನು ಕೆಲವು ವಸ್ತುನಿಷ್ಠ ಕಾವ್ಯಗಳಾಗಿವೆ.

ತೆಲುಗಿನ ಭಾವ ಕಾವ್ಯದಲ್ಲಿ ದೇಶಭಕ್ತಿ ಕಾವ್ಯವನ್ನು ಕಾಣಬಹುದು. ಈ ಕಾವ್ಯದಲ್ಲಿ ಭಾರತದೇಶದ, ಆಂಧ್ರದೇಶದಲ್ಲಿ ಭಕ್ತಿಯನ್ನು ತಮ್ಮ ಗೀತೆಗಳ ಮುಖಾಂತರ ಪ್ರತಿಬಿಂಬಿಸಿದ್ದಾರೆ. ಈ ರೀತಿಯ ಕಾವ್ಯವು ರಾಷ್ಟ್ರೀಯ ಚಳುವಳಿಯ ಮೇಲೆ ತುಂಬ ಪ್ರಭಾವವನ್ನು ಬೀರಿತು. ದೇಶಭಕ್ತಿಯನ್ನು ಪ್ರಚೋದಿಸುವ ಭಕ್ತಿಗೀತೆಗಳು ೧೯೦೭ರಿಂದ ತೆಲುಗಿನಲ್ಲಿ ರಚನೆಗೊಂಡವು. ಚಿಲಕಮತ ಲಕ್ಷ್ಮೀನರಸಿಂಹ ಬರೆದ **ಭರತಖಂಡ ಹಾಲುಕೊಡುವ ಹಸು** ಎಂಬ ಪದ್ಯ ಅನೇಕರಲ್ಲಿ ದೇಶಭಕ್ತಿಯನ್ನು ಉಂಟುಮಾಡಿತು. ಈ ತರಹದ ಕಾವ್ಯಕ್ಕೆ ರಾಯಪ್ರೋಲು ಸುಬ್ಬಾರಾವು ಕೊಡುಗೆ ಸ್ಮರಣೀಯವಾದದ್ದು, ದೇಶಭಕ್ತಿ ಕಾವ್ಯಗಳಾದ ರಾಣಾ ಪ್ರತಾಪಸಿಂಹ ಚರಿತ್ರೆ, ಶಿವಭಾರತಮು ಮುಂತಾದ ಐತಿಹಾಸಿಕ ಕಾವ್ಯಗಳು ರಚಿತವಾದವು.

ಪ್ರಕೃತಿ ಕಾವ್ಯವು ಭಾವ ಕಾವ್ಯದಲ್ಲಿ ಬರುವ ಕಾವ್ಯವಾಗಿದ್ದು, ಈ ಕಾವ್ಯದಲ್ಲಿ ಹೊಸ ರೀತಿಯಲ್ಲಿ ಪ್ರಕೃತಿ ವರ್ಣನೆ ಮಾಡಿದ್ದಾರೆ. ಅಂತರ್ಮುಖತೆ, ತದಾತ್ಮ್ಯಭಾವ, ಪಾರಮಾರ್ಥಿಕತೆ ಮುಂತಾದ ಲಕ್ಷಣಗಳು ಆಧುನಿಕ ಕಾವ್ಯದ ಪ್ರಕೃತಿ ಕಾವ್ಯದಲ್ಲಿ ಕಾಣಬರುತ್ತದೆ. ಗ್ರಾಮೀಣ ಪ್ರಕೃತಿಯ ಚಿತ್ರಣ ಪ್ರಮುಖವಾಗಿದೆ. ಹಾಗೆ ಈ ಯುಗದ ಕವಿಗಳು ಕಾಲ್ಪನಿಕತೆಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟರೂ ಕೆಲವು ಕವಿಗಳು ವಾಸ್ತವಿಕ ಜೀವನವನ್ನು ಚಿತ್ರಿಸುವುದು ಮಾತ್ರವಲ್ಲದೆ ಸಮಾಜ ಸುಧಾರಣೆಗಾಗಿ ಕಾವ್ಯವನ್ನು ರಚಿಸಿದರು. ಕಾಲ್ಪನಿಕ ಕವಿತೆಯ ಮೇಲೆ ವೀರೇಶಲಿಂಗಂ ಪ್ರಭಾವ ತುಂಬ ಇದೆ. ಕೆಲವು ಕವಿಗಳ ವಿಧವಾವಿವಾಹ, ಕನ್ಯಾಶುಲ್ಕ, ತಿರಸ್ಕರಿಸುವ ಗೀತೆಗಳು ಹೊರಬಂದವು. ಜಾಷುವಾ ಎಂಬ ಕವಿ ವರ್ಣ ವ್ಯವಸ್ಥೆ ವಿರುದ್ಧ ತೀವ್ರ ಪ್ರತಿಭಟಿಸಿದರು. ಈ ಯುಗದ ಕಾವ್ಯದಲ್ಲಿ ಸಾಮಾಜಿಕ ಸುಧಾರಣಾ, ರಾಜಕೀಯ ತತ್ವಗಳು, ಗಾಂಧೀತತ್ವಗಳು ಗಣನೀಯವಾಗಿ ಕಾಣಬಹುದು. ವಿಶ್ವಮಾನವ ಪ್ರೇಮವನ್ನು ತಮ್ಮ ಕಾವ್ಯದಲ್ಲಿ ತಂದರು ಹಾಗೂ ಹರಿಜನೋದ್ಧಾರವನ್ನು ಕಾವ್ಯ ವಸ್ತುವನ್ನಾಗಿ ತೆಗೆದುಕೊಂಡರು. ರಾಜಕೀಯ, ಆರ್ಥಿಕ, ಸಾಮಾಜಿಕವಾದ ವಿಚಾರಗಳನ್ನು ತಮ್ಮ ಕಾವ್ಯದಲ್ಲಿ ಅಳವಡಿಸಿದರು. ತಮ್ಮ ಭಾವನೆಗಳನ್ನು ಕಾವ್ಯರೂಪದಲ್ಲಿ ಮೂಡಿಸಿದರು.

ತೆಲುಗು ಸಾಹಿತ್ಯದ ಈ ಯುಗದಲ್ಲಿ ಭಕ್ತಿ ಕಾವ್ಯವಾದ ದಾಸಭಕ್ತಿ, ವಾತ್ಸಲ್ಯಭಕ್ತಿ, ಸಖಿಭಕ್ತಿ, ಮಧುರಭಕ್ತಿ, ಮುಂತಾದ ಅನೇಕ ರೀತಿಯ ಭಕ್ತಿತತ್ವವನ್ನು ಪ್ರತಿಪಾದಿಸುವ ಕಾವ್ಯಗಳು ರಚಿತವಾದವು. ಸ್ಮೃತಿ ಕಾವ್ಯ ಹೊಸ ತೆಲುಗು ಕಾವ್ಯದ ಒಂದು ವಿನೂತನ ಪ್ರಕಾರವಾಗಿದ್ದು, ಇದು ಶೋಕ ಪ್ರಧಾನ ಕಾವ್ಯ. ಇದನ್ನು ಅವರ ಕಾವ್ಯಗಳಲ್ಲಿ ಪ್ರಕಟಿಸಿದರು. ಈ ವಿಧದ ಕಾವ್ಯಗಳಲ್ಲಿ

ಬರೆದ ನವ್ಯ ಕವಿಗಳಲ್ಲಿ ಮೊದಲಿಗರು ರಾಯಪ್ರೋಲು ಸುಬ್ಬಾರಾವು. ಇವರು ಗೋಖಲೆಯವರ ಮರಣ, ರವೀಂದ್ರರ ನಿಧನದ ಸ್ಮೃತಿ ಕಾವ್ಯ ರಚಿಸಿದರು ಹೀಗೆ ಅನೇಕ ಕವಿಗಳು ಸ್ಮೃತಿ ಗೀತೆಗಳನ್ನು ರಚಿಸಿದರು.

**ಅಭ್ಯುದಯ (ಪ್ರಗತಿಪರ) ಕಾವ್ಯ ಚಳುವಳಿ**

ಅಭ್ಯುದಯ ಎಂದರೆ ಶುಭಂ ಮಂಗಳಂ ಎನ್ನು ಅರ್ಥ ನಿಘಂಟಿನಲ್ಲಿ ಕಾಣಬಹುದು. ಪ್ರೋಗ್ರೆಸ್ ಎನ್ನುವ ಆಂಗ್ಲ ಪದಕ್ಕೆ ಸಮನಾರ್ಥವಾಗಿ **ಅಭ್ಯುದಯ** ಎನ್ನುವ ಪದವನ್ನು ಬಳಸುತ್ತಾರೆ. ಭಾವಕಾವ್ಯಕ್ಕೆ ವಿರುದ್ಧವಾಗಿ ಶ್ರಮಿಕವರ್ಗದ ಚೈತನ್ಯಕ್ಕೆ ಹೊಸ ಕವಿತಾ ರೀತಿಗೆ ಬುನಾದಿಯನ್ನು ಶ್ರೀ ಶ್ರೀ ಹಾಕಿದರು. ಪ್ರಗತಿ ಎನ್ನುವ ಅರ್ಥದಲ್ಲಿ **ಅಭ್ಯುದಯ** ಎನ್ನುವ ಪದವನ್ನು ಮೊಟ್ಟಮೊದಲ ಸಲ ಪ್ರಯೋಗಿಸಿ **ಅಭ್ಯುದಯ** ಪದಕ್ಕೆ ಹೊಸ ಅರ್ಥವನ್ನು ಹೇಳಿದರು. ತೆಲುಗು ಸಮಾಜದಲ್ಲಿ ಸಮಸಮಾಜದ ನಿರ್ಮಾಣಕ್ಕೋಸ್ಕರ ಅಭ್ಯುದಯ ಸಾಹಿತ್ಯವು ಶ್ರಮಿಸಿದೆ. ಅಭ್ಯುದಯ ಸಾಹಿತ್ಯವು ಎರಡು ದಶಕಗಳವರೆಗೆ (೧೯೩೫-೧೯೫೫) ತೆಲುಗು ಸಾಹಿತ್ಯವು ಉಜ್ವಲವಾಗಿತ್ತು. ಸಾಮಾನ್ಯ ದುಡಿವವರ್ಗ, ಕೆಳವರ್ಗದ, ದಲಿತರ, ಸ್ತ್ರೀಯರ ಏಳಿಗೆಗೆ ಸೃಷ್ಟಿಸಿದಂತಹ ಸಾಹಿತ್ಯವೇ ಅಭ್ಯುದಯ ಸಾಹಿತ್ಯವಾಗಿದೆ.

**ಚಾರಿತ್ರಿಕ ಹಿನ್ನೆಲೆ**

೧೯೧೭ರ ರಷ್ಯದ ಸಾಮಾಜಿಕ ಕ್ರಾಂತಿ ಉಂಟಾಗಿ ಪ್ರಪಂಚದಲ್ಲೆಲ್ಲಾ ಈ ಕ್ರಾಂತಿಯು ಕವಿಗಳ, ಕಲಾಕಾರರ ಮೇಲೆ ತುಂಬ ಪ್ರಭಾವವನ್ನು ಬೀರಿತು. ೧೮೧೯ರಲ್ಲಿ ಮುಗಿದ ಮೊದಲ ಪ್ರಪಂಚದ ಯುದ್ಧ ಫಲಿತಗಳು ತೀವ್ರವಾಗಿ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಪರಿಣಾಮಗಳು ಮಾನವ ಜನಾಂಗದ ಮೇಲೆ ಉಂಟಾಯಿತು. ಪ್ರಪಂಚದಾದ್ಯಂತ ಇದರ ಕಂಪನಗಳನ್ನು ಸೃಷ್ಟಿಸಿತು. ೧೯೩೦ರ ದಶಕವೂ **ಹಸಿವಿನ ದಶಕ** ಎಂದು ಮಹತ್ವ ಪಡೆಯಿತು. ೧೮೩೪ರ ಅಂದಿನ ಜರ್ಮನಿಯಲ್ಲಿ ಹಿಟ್ಲರ್‌ನ ನೇತೃತ್ವದಲ್ಲಿ ರಾಷ್ಟ್ರೀಯ ದುರಹಂಕಾರದ ಕಪ್ಪುಛಾಯೆ ಪಸರಿಸಿತು. ಸಂಸ್ಕೃತಿ ಪರಿವೀಕ್ಷಣೆಯ ಸಲುವಾಗಿ ೧೯೩೫ರ ಡಿಸೆಂಬರ್‌ದಲ್ಲಿ ಅಲಹಾಬಾದ್‌ನಲ್ಲಿ ಇಂಡಿಯನ್ ಪ್ರೋಗ್ರೆಸ್ಸಿವ್ ರೈಟರ್ಸ್ ಅಸೋಸಿಯೇಶನ್ ಏರ್ಪಟ್ಟಿತು. ೧೯೩೬ರ ಫೆಬ್ರವರಿಯಲ್ಲಿ ಲಂಡನ್‌ದಿಂದ ಹೊರಬಂದ **ದಿ ಡೆಯಲಿ ಟ್ರಿಬ್ಯೂನ್** ನಲ್ಲಿ ಭಾರತದ ಪ್ರಗತಿಪರ ರಚನೆಕಾರರ ಪ್ರಣಾಳಿಕೆ ಪ್ರಕಟವಾಯಿತು. ೧೯೩೬ ಎಪ್ರಿಲ್ ೯, ೧೦ರಂದು ಲಕ್ನೋದಲ್ಲಿ ಮುನ್ಷಿ ಪ್ರೇಮಚಂದ್ ಅಧ್ಯಕ್ಷತೆಯಲ್ಲಿ ಅಖಿಲಭಾರತ ಅಭ್ಯುದಯ ರಚಯಿತ ಪ್ರಥಮ ಮಹಾಸಭೆಯು ಜರುಗಿತು. ೧೯೩೬ರಂದು ಸ್ಪೇನ್‌ನ ಅಂತರರಾಷ್ಟ್ರೀಯ ಚಳುವಳಿಯಲ್ಲಿ ವಿವಿಧ ದೇಶಗಳ ಕವಿಗಳು, ಕಲಾಕಾರರು ಪ್ರತ್ಯಕ್ಷವಾಗಿ ಪಾಲ್ಗೊಂಡಿದ್ದರು. ೧೯೩೬ ಸೆಪ್ಟೆಂಬರ್‌ನಲ್ಲಿ ಫೈಜಪುರದಲ್ಲಿ ಜರುಗಿದ ರಾಷ್ಟ್ರೀಯ ಕಾಂಗ್ರೆಸ್ ಮಹಾಸಭೆಯ ಸಂದರ್ಭದಲ್ಲಿ ಇಷ್ಟಾಗೋಷ್ಠಿ ಸಮಾವೇಶವು ಸರೋಜಿನಿ ನಾಯ್ಡು ಅಧ್ಯಕ್ಷತೆಯಲ್ಲಿ ಜರುಗಿತು. ರಾಷ್ಟ್ರೀಯ ಚಳುವಳಿಯಲ್ಲಿ ಕ್ರಮವಾಗಿ ತೀವ್ರವಾದ

ವಿಚಾರಗಳ ಹಾಗೂ ಯುವಕರ ಕ್ರಿಯಾಶೀಲ ಪ್ರಮೇಯವು ಹೆಚ್ಚುತ್ತಾ ಸಾಗಿತು. ಇವೆಲ್ಲಾ ಪರಿಣಾಮಗಳ ಹಿನ್ನೆಲೆಯಲ್ಲಿ ಅಭ್ಯುದಯ ರಚಯಿತ ಸಂಘ ೧೯೩೬ ರಲ್ಲಿ ರೂಪುಗೊಂಡಿತು.

ರಾಷ್ಟ್ರೀಯ ನೆಲೆಯಿಂದ ಪ್ರಾಂತೀಯ ನೆಲೆಯವರೆಗೆ ಅಭ್ಯುದಯ ರಚನೆಯು ಸಾಗಲೆಂದು ಲಕ್ಕೋದಲ್ಲಿ ತೀರ್ಮಾನಿಸಿದರು. ಆ ಪ್ರಭಾವದಲ್ಲಿ ೧೯೪೩ರಲ್ಲಿ ಆಂಧ್ರದ ತೆನಾಲಿನಲ್ಲಿ ಮೊಟ್ಟಮೊದಲ ಅಭ್ಯುದಯ ರಚಯಿತರ ಮಹಾಸಭೆ ಜರುಗಿತು. ಈ ಸಭೆಯಲ್ಲಿ ಎಲ್.ಧರ್ಮಾರಾವು ಅಧ್ಯಕ್ಷತೆ ವಹಿಸಿದ್ದರು. ಈ ಸಭೆಯಲ್ಲಿ ಶ್ರೀ ಶ್ರೀ, ಬೆಲ್ಲಂಕೊಂಡ ರಾಮದಾಸು, ಅನಿಶೆಟ್ಟಿ, ಕುಂಡುರ್ತಿ ಆಂಜನೇಯುಲು, ಸೋಮಸುಂದರ್, ಚದಲವಾಡ ಪಿಚ್ಚಯ್ಯ, ಮೊದಲಾದ ಕವಿಗಳು ಪಾಲ್ಗೊಂಡಿದ್ದರು. ಈ ಚಳುವಳಿಗೆ **ಪ್ರಜಾಶಕ್ತಿ , ತೆಲುಗು ತಲ್ಲಿ** ಮೊದಲಾದ ಪತ್ರಿಕೆಗಳು ವ್ಯಾಪಕ ಪ್ರಚಾರವನ್ನು ನೀಡಿದವು.

ಅಭ್ಯುದಯ ಸಾಹಿತ್ಯವು ಯಾವುದೇ ವ್ಯಕ್ತಿಗೆ ನಿಷ್ಠೆಯನ್ನು ಹೊಂದಿಲ್ಲ, ಅದೊಂದು ವ್ಯವಸ್ಥೆಗೆ ನಿಷ್ಠವಾಗಿದೆ. ಈ ಸಾಹಿತ್ಯದಲ್ಲಿ ಸಾಮಾಜಿಕ ಪರಿಣಾಮದಲ್ಲಿ ಮಾನವನ ಅಭ್ಯುದಯವು ಇಮ್ಮಡಿಸಿದೆ. ಹಾಗೆ ಈ ಸಾಹಿತ್ಯದಲ್ಲಿ ವೇದ, ಪುರಾಣ, ದೈವ, ಮತದೃಷ್ಟಿ, ಕುಲಮತ, ಯಾವುದನ್ನು ಅಸ್ತಿತ್ವದಲ್ಲಿ ಇಟ್ಟುಕೊಳ್ಳುವುದಿಲ್ಲ. ವಿಜ್ಞಾನಶಾಸ್ತ್ರ, ಹಾಗೂ ನಾಸ್ತಿಕವಾದವು ಮುಖ್ಯವಾಗಿ ಕಾಣಸುತ್ತದೆ. ಅಭ್ಯುದಯ ಸಾಹಿತ್ಯದಲ್ಲಿ ಮಠಾಧಿಪತಿಗಳು, ಸ್ವಾಮಿಗಳು, ಸನ್ಯಾಸಿಗಳು ಮುಂತಾದವರ ವಿಷಯಗಳು ಈ ಕಾವ್ಯದಲ್ಲಿ ಬರುವುದಿಲ್ಲ. ಹಾಗೆ ಸ್ವರ್ಗ, ನರಕವೆಂಬ ಭ್ರಮೆ ಕೂಡ ಇಲ್ಲ. ಮತ್ತು ಪೂಜಾ ಪುನಸ್ಕಾರಗಳಿಗೆ ಮಹತ್ವವಿಲ್ಲ. ಮುಖ್ಯವಾಗಿ ಮಾನವನ ಅಭ್ಯುದಯಕ್ಕೆ ಹೆಚ್ಚು ಮಹತ್ವವಿದೆ. ಮಾನವ ಕೃತಿಗಿಂತ ಭಿನ್ನವಾದ ಶಕ್ತಿಯ ಮೇಲೆ ವಿಶ್ವಾಸವಿಲ್ಲ. ಮನುಷ್ಯ ತನಗೆ ತನ್ನ ಸಮಾಜಕ್ಕೆ ಹೊಣೆ ಎಂಬ ನಂಬಿಕೆಯನ್ನು ಈ ಸಾಹಿತ್ಯವು ಹೊಂದಿದೆ.

**ಅಭ್ಯುದಯ ಸಾಹಿತ್ಯ**

ಶ್ರೀರಂಗಂ ಶ್ರೀನಿವಾಸರಾವು **ಸುಸ್ತಾಸ್ಥಿಕಲು** (೧೯೨೬) ಬರೆದು ಭಾವಕಾವ್ಯದ ಪ್ರಭಾವದಿಂದ ಹೊರಹೊಮ್ಮಿದ್ದಾರೆ. ೧೯೫೦ರಿಂದ ಶ್ರೀ ಶ್ರೀ ಮಹಾಪ್ರಸ್ಥಾನಂ ಕವಿತೆ ಸಂಪುಟ ಹೊರಬಂದಿದೆ. ಶ್ರೀ ಶ್ರೀಯ ಆಧುನಿಕಾಂಧ್ರ ಸಾಹಿತ್ಯದಲ್ಲಿ ಒಂದು ಪ್ರಧಾನಘಟ್ಟ. ಶ್ರೀ ಶ್ರೀ ಅವರು ಅಭ್ಯುದಯ ಕವಿಗಳಲ್ಲೇ ಅಗ್ರಗಾಮಿ. ವಿಪ್ಲವ ಸೃಷ್ಟಿಯಲ್ಲಿ ಪುರೋಗಾಮಿ. ತಾನು ಪ್ರಮುಖವಾಗಿ ಕವಿಯಾದರೂ ಸಹ ಸಾಹಿತ್ಯ ವಿಮರ್ಶೆ, ಪ್ರಬಂಧ, ನಾಟಕ, ಕಥೆ, ಸಮೀಕ್ಷೆ ಸಾಹಿತ್ಯ ರೂಪದಲ್ಲಿ ಸೃಷ್ಟಿಸಿದ್ದಾರೆ. ಕಥೆಗಳು ಹೆಚ್ಚಾಗಿ ವಾಸ್ತವಿಕ ಪಾತ್ರಗಳಿಗೆ ಎಡೆಮಾಡಿವೆ. ಸಾಹಿತ್ಯ ವಿಮರ್ಶೆಯಲ್ಲಿ ಶ್ರೀ ಶ್ರೀ ನಿಷ್ಠಾವಂತರು, ಅದ್ಭುತ ವಚನಶಿಲ್ಪಿ. ಶ್ರೀ ಶ್ರೀ ಮುಖ್ಯವಾಗಿ ಕವಿ. ಮಹಾಪ್ರಸ್ಥಾನಂ, ಖಡ್ಗಸೃಷ್ಟಿ, ಮತ್ತೊಂದು ಪ್ರಸ್ಥಾನ, ಇವರ ಕಾವ್ಯಗಳು. ಅದರಲ್ಲಿ ಮಹಾಪ್ರಸ್ಥಾನವು ವಿಶಿಷ್ಟ ಕೃತಿಯಾಗಿದೆ. ಶ್ರೀ ಶ್ರೀ ಅವರ ಸಾಹಿತ್ಯದಲ್ಲಿ ಸ್ಪಷ್ಟವಾಗಿ **ಮಾರ್ಕಿಸ್ಟ್** ಮನೋಭಾವನೆಯನ್ನು ಕಾಣಬಹುದು.

ಶ್ರೀಶ್ರೀ ಗಿಂತ ಮೊದಲೇ ಭಾವಕಾವ್ಯದ ಮೆಲೆ ಶಿಷ್ಟ್ಲಾ, ಪಠಾಭಿನಾರಾಯಣಬಾಬು, ಭಾವಕಾವ್ಯದ ವಿರುದ್ಧ ತಿರುಗಿಬಿದ್ದಿದ್ದರು. ೧೯೧೩ರಿಂದ ಶಿಷ್ಟ್ಲಾ ಅತಿ ನವ್ಯ ಪ್ರಯೋಗವನ್ನು ಮಾಡಿದರು. ಶಿಷ್ಟ್ಲಾ ಬರೆದ ನವಮಿ ಚಿಲುಕ, ವಿಷ್ಣುಧನುವು ಕಾವ್ಯ ಸಂಪುಟದಲ್ಲಿ ಕಂಡುಕೊಳ್ಳಬಹುದು. ಫಿಡಲರಾಗಾಲ ಡಜನ್ ಎನ್ನುವ ಕವಿತಾ ಸಂಪುಟವು ಪಠಾಬಿಯ ನೂತನ ಭಾವದಲ್ಲಿ ರಚಿಸಿದರು. ತೆಲುಗು ಸಾಹಿತ್ಯದ ಆಧುನಿಕ ಕಾಲದಲ್ಲಿ ಎಲ್ಲಾ ವರ್ಗದವರನ್ನು ಜಾಗೃತಿ ಮೂಡಿಸಿದ್ದು ಅಭ್ಯುದಯ ಸಾಹಿತ್ಯ ಪ್ರಾರಂಭದಲ್ಲಿ ಅಭ್ಯುದಯ ಸಾಹಿತ್ಯ. ಕಾವ್ಯದ ರೂಪದಲ್ಲಿ ಬಂದಿದೆ. ಕ್ರಮಕ್ರಮಾನುಸಾರವಾಗಿ ಕಾದಂಬರಿ, ನಾಟಕ, ಕಥೆ ಮೊದಲಾದ ಪ್ರಕಾರಗಳೇ ಸ್ಥಾನವನ್ನು ಪಡೆದುಕೊಂಡಿತು.

ಕುಂದುರ್ತಿ ಆಂಜನೆಯಲು ಅಭ್ಯುದಯ ಕವಿ. ನನ್ನಗೀತೆಯು ಮಾನವನ ಬಿಡುಗಡೆಯ ಸಂಗೀತವೆಂದು ಹೇಳಿದವರು. ಇವರ ತೆಲಂಗಾಣ, ಮುಗೆಮುಗೆ ,ನರಸಿಂಹಲೋದಾನ ,ನಾಲೋನಿ ,ನಾದಾಲು, ಸುಪುಟಗಳು, ಅಭ್ಯುದಯ ಸಾಹಿತ್ಯ ಕೃತಿಗಳಾಗಿವೆ. ನಾತೆಲಂಗಾಣ ಕೋಟಿ ರತ್ನಾಲವೀಣ ಎಂದು ಹೇಳುವ ಧಾಶರಥಿಯ, ಮಹೇಂದ್ರೋದಯ, ಪುನ್ನರಯ ತಿಮಿರಂತೋಸಮರ ಮೊದಲಾದ ಕಾವ್ಯಗಳಲ್ಲಿ ಅಭ್ಯುದಯ ಭಾವಗಳು ಬಹಳ ಸ್ಪಷ್ಟವಾಗಿ ಗೋಚರಿಸುತ್ತವೆ. ಹಾಗೆ 'ಅಮೃತ ಕುರುಸಿನ' ರಾತ್ರಿಯ ಕವನ ಸಂಕಲನದಲ್ಲಿ ದೇವರು ಕೊಂಡ ಬಾಲಗಂಗಾಧರ ತಿಲಕರು ರಚಿಸಿದ ಸೌಂದರ್ಯ, ಅಭ್ಯುದಯ ಎರಡು ಅಂಶಗಳನ್ನು ಇದರಲ್ಲಿ ಕಾಣಬಹುದು. ಅನಿಶೆಟ್ಟಿಸುಬ್ಬಾರಾವುರ 'ಅಗ್ನಿವೀಣ', ರೆಂಟಾಲ ಗೋಪಾಲಕೃಷ್ಣರ 'ಸಂಘರ್ಷ' 'ಸರ್ಪಯಾಗಂ' ಇವು ಪ್ರಮುಖ ಅಭ್ಯುದಯ ಕಾವ್ಯಗಳು. ಗಂಗಿನೇನಿ ವೆಂಕಟೇಶ್ವರರ 'ಉದಯಂ' ಎನ್ನುವ ಕಾವ್ಯವನ್ನು ಅಭ್ಯುದಯ ಭಾವದಲ್ಲಿ ರಚಿಸಿದರು. ಇವರ ಕವಿತೆಯಲ್ಲಿ ರಾಜಕೀಯ ಸಿದ್ಧಾಂತ ಅವಗಾಹನೆ ಕವಿತಾಶಿಲ್ಪಂ ಚೆನ್ನಾಗಿ ಮೇಳವಿಸಿದೆ.

ಕೆ.ವಿ ರಾಮಿರೆಡ್ಡಿಯ ಅಜಂತಾ, ಅಲೂರು ಬೈರಾಗಿ, ಗೋಪಾಲ ಚಕ್ರವರ್ತಿ, ನಯಗಾರ ಮೊದಲಾದವರು ಅಭ್ಯುದಯ ಕಾವ್ಯದಲ್ಲಿ ಅನೇಕ ಕವಿತೆಗಳನ್ನು ರಚಿಸಿದ್ದಾರೆ. ಕರುಣಶ್ರೀಯ 'ಅರುಣಕಿರಣಾಲು', ಸಿ. ನಾರಾಯಣರೆಡ್ಡಿಯ 'ದಿವ್ವೆಲಮುವ್ವಲು', 'ಮಧ್ಯತರಗತಿ' 'ಮಂದಹಾಸಂ', ಭೋಯಿಭೀಮನ್ನ 'ಗುಡಿಸಲು ಕಾಲಿಪೋತ್ನುನ್ನೈ', ಗಜ್ಜೆಲ ಮಲ್ಲರೆಡ್ಡಿ, 'ಮಲ್ಲಾರೆಡ್ಡಿಗೇಯಾಲು', 'ಶಂಕಾರಾವಂ', ಸಿ. ವಿಜಯಲಕ್ಷ್ಮಿ 'ಕಾರುಚಿಖಟಿಲೋ ಕಾಂತಿ ರೇಖ', 'ವಿಷಾದ ಭಾರತಂ', ಎನ್ನುವ ಕಾವ್ಯ ಸಂಪುಟಗಳನ್ನು ರಚಿಸಿದರು. ರಾಜಕೀಯ ಸಾಮಾಜಿಕ ಚೈತನ್ಯವೇ ಇವರ ಕವಿತೆಯಲ್ಲಿ ಪ್ರಧಾನ ವಸ್ತು. ''ರಾಮಮೋಹನರಾಯ್ ಅಂಚನಾ ಪ್ರಕಾರ ''ಸಿ. ವಿಜಯಲಕ್ಷ್ಮಿಯವರು ದಿಗಂಬರ ಕಾವ್ಯವು ಉದಯವಾಗುವುದಕ್ಕೆ ಪೂರ್ವ ಸಿದ್ದಮಾಡಿದ, ಪೂರ್ವರಾಗ ಪ್ರವಕ್ತರಾದ ಸೂತ್ರಧಾರರು ಎಂದು ಹೇಳಬಹುದು''.[೨೦] ಇನ್ನು ವೆಂಕಟಶಿವಯ್ಯ, ವೇಮುಪಲ್ಲಿ ಶ್ರೀಕೃಷ್ಣ, ನಾರ್ಲ ಚಿರಂಜೀವಿ, ಸುಂಕರವಂಟೆ ಮುಂತಾದ ಕವಿಗಳ ಗೇಯಗಳ ದ್ವಾರದ ಅಭ್ಯುದಯ ಪ್ರಚಾರ ತಂದರು. ಕಾರುಮಂಡಿ ವೆಂಕಟೇಶ್ವರಾವು ಪಾಂಚಜನ್ಯವು ಅಭ್ಯುದಯದ ಕೃತಿಯಾಗಿದೆ. ಜೆ. ಬಾಪುರೆಡ್ಡಿ, ಅವಸರಾಲ ಸೂರ್ಯರಾವು, ಶಾರ್ವರಿ, ನಾರಪರೆಡ್ಡಿ, ಕೋಮರಾಜು,

ವಿನಾಯಕರಾವು, ಸಂಪತ್, ಪ್ರಯಾಣ ಕೋದಂಡರಾಮಶಾಸ್ತ್ರಿ, ಪತ್ತಿಕೊಂಡ ವಿಶಾಲಾಕ್ಷಿ ರಾಂಥಾ, ವಾಚಾರಫರ್, ಚಾಗುಟೆ ಸೋಮಯಾಜುಲು ಮೊದಲಾದವರು ಅಭ್ಯುದಯ ಕಾವ್ಯವನ್ನು ರಚಿಸಿದರು.

ತೆಲುಗು ಕಾದಂಬರಿ ಲೋಕದಲ್ಲಿ ಮಹೀಧರ ರಾಮಮೋಹನ ರಾವು ಇವರ ಓನಮಾಲು ಕಾದಂಬರಿಯಲ್ಲಿ ಅಭ್ಯುದಯ ಆಶಯವು ಸಮೃದ್ಧವಾಗಿದೆ. ಪ್ರಜಲ ಮನಿಷಿ ಕಾದಂಬರಿಯಲ್ಲಿ ವಟ್ಟಿಕೋಟ ಆಳ್ವಾರು ಸ್ವಾಮಿ ಭೂಮಿಗೋಸ್ಕರ ಪ್ರಜೆಗಳ ಆಂದೋಲನವನ್ನು ಬಹಳ ಸೊಗಸಾಗಿ ಚಿತ್ರಿಸಿದ್ದಾರೆ. ಭೂಸ್ವಾಮ್ಯ ವ್ಯವಸ್ಥೆಯು, ಸ್ತ್ರೀ ದುರಾವಸ್ಥೆಯನ್ನು ಚಿತ್ರಿಸಿದೆ. ಗಂಗು, ಕಾದಂಬರಿ ಮೃತ್ಯುಂಜಯಲುದಲ್ಲಿ ಮೊಲ್ಲಿಮಂತ ಶಿವ ರಾಮಕೃಷ್ಣ ಇವರು ತೆಲಂಗಾಣಾ ರೈತಜನಾಂಗದ ಹೋರಾಟದ ಚಿತ್ರಣವಿದೆ. ಲಕ್ಷ್ಮೀಕಾಂತ ಮೋಹನರು ಬರೆದ ಸಿಂಹಗರ್ಜನೆ ಈ ಕಾವ್ಯದಲ್ಲಿ ಬರುತ್ತದೆ. ಚಿಲ್ಲರದೇವುಳ್ಳದಲ್ಲಿ ದಶರಥ ರಂಗಾಚಾರ್ಯರು ತೆಲಂಗಾಣದ ಯಾತನೆಗಳನ್ನು ವಿಶಾಲವಾಗಿ ಚಿತ್ರಿಸಿದೆ. ಕೇಶವರೆಡ್ಡಿಯವರ ಕಾದಂಬರಿಯಲ್ಲಿ ಶ್ರಮಿಕವರ್ಗ, ಜೀವಿತವು ಕಾಣಸಿಗುತ್ತದೆ. ಜಾತಶ್ರೀಯು ತನ್ನ ಕಾದಂಬರಿಯಲ್ಲಿ ವರ್ಗ ಸಂಘರ್ಷಣವೂ ಚಿತ್ರಿತವಾಗಿದೆ. ಕೊಡವಟಿಗಂಟಿ ಕುಟುಂಬರಾವು, ಶಾರದ, ವಟ್ಟಿಕೊಂಡ ವಿಶಾಲಾಕ್ಷಿ, ಉಪ್ಪಲ ಲಕ್ಷ್ಮಣರಾವು ಮೊದಲಾದವರು ಅಭ್ಯುದಯದ ಕಾದಂಬರಿಗಳನ್ನು ರಚಿಸಿದರು.

ಅಭ್ಯುದಯ ಸಾಹಿತ್ಯದ ನೆಲೆಯಲ್ಲಿ ತೆಲುಗಿನ ಅನೇಕ ನಾಟಕಗಳು ಬಂದವು. ಆಂಧ್ರನಾಟಕ ಕಲಾ ಪರಿಷತ್ತು ಪ್ರಜಾನಾಟ್ಯಮಂಡಲಿ ಮೊದಲಾದ ಸಂಸ್ಥೆಗಳು ಈ ಸಾಹಿತ್ಯದಲ್ಲಿ ತುಂಬ ಕೃಷಿ ಮಾಡಿವೆ. ಆತ್ರೇಯ, ರಾಜಾರಾವು, ನಾಗಭೂಷಣ, ಅನಿರೆಡ್ಡಿ ಸುಬ್ಬಾರಾವು, ಮುಖರ ವಾಸಿರೆಡ್ಡಿ, ದೆನಸೆಟ್ಟಿ ಶ್ರೀರಾಮಮೂರ್ತಿ, ನಾಜರ್ ಮೊದಲಾದವರು ನಾಟಕಗಳನ್ನು ರಚಿಸಿದರು. ತಾಗಂಟೆ ಸೋಮಯಾಜುಲು, ಕರುಣಕುಮಾರ, ಶಾರದ, ನಾರ್ಲ, ಚಿರಂಜೀವಿ, ಚಲಂ ಮೊದಲಾದವರು ಅಭ್ಯುದಯ ಕಥೆಗಳನ್ನು ರಚಿಸಿದರು. ಕೊಡವಟಿಗಂಟಿ ಕುಟುಂಬರಾವು, ಶ್ರೀ ಶ್ರೀ, ಮೊದಲಾದವರು ಅಭ್ಯುದಯ ಪ್ರಬಂಧಗಳನ್ನು ರಚಿಸಿದರು.

೧೯೪೩ರಲ್ಲಿ ಅಭ್ಯುದಯ ರಚಯಿತ ಸಂಘಸ್ಥಾಪನೆಯ ಅಭ್ಯುದಯ ಕಾವ್ಯವು ವಿಶ್ವರೂಪವನ್ನು ಪಡೆಯಿತು. ೧೯೪೪ರಲ್ಲಿ ಹೊರಬಂದ ನಿರ್ಮಾಣ ಕವಿತಾಸಂಪುಟ ಸಂಪುಟವು ಇದಕ್ಕೆ ನಿದರ್ಶನ. ಬೆಲ್ಲಕೊಂಡ ರಾಮದಾಸು, ಕುಂದುರ್ತಿ ಆಂಜನೇಯಲು, ಎಲ್ಲೂರಿ ಸುಬ್ರಹ್ಮಣ್ಯಂ ಎನ್ನುವ ಮೂವರು ಕವಿಗಳು ಬರೆದ ಗೇಯಗಳು ಈ ಸಂಕಲನದಲ್ಲಿ ಗೋಚರಿಸುತ್ತವೆ. ಸೀತರಾಮರಾಜು, ಮನ್ಯಂವಿಪ್ಲವ, ದಂಡಿ ಸತ್ಯಗ್ರಾಹದಲ್ಲಿ ಪಾಲ್ಗೊಂಡು ಆಡಳಿತದ ಕೈಯಲ್ಲಿ ಅಜೀವ ಕಾರಗೃಹ ಶಿಕ್ಷೆ ಅನುಭವಿಸಿದ ವಿಪ್ಲವ ನಾಯಕರುಗಳು, ಠಾಕೂರಚಂದ್ರಸಿಂಗ್, ವೀರಚರಿತ್ರ ಮೊದಲಾದ ಸಂಘಟನೆಗಳು ಇವರಿಗೆ ಕಾವ್ಯವಸ್ತುಗಳಾಗಿವೆ. ಇನ್ನು ಪ್ಯಾರಿಸ್‌ಧಾರಿಗಳು, ಚೈನಾಕಣವೆಗಳು, ಗೊರಿಲ್ಲಾ ಗುಂಪುಗಳು, ಕೆಂಪುಜಂಡ ಮೊದಲಾದವು ಇವರ ಗೇಯಗಳಲ್ಲಿ ಕಾಣಬಹುದು.

**ಮಹಾಕವಿ ಶ್ರೀ ಶ್ರೀ**

ರಕ್ತ ಕಣ್ಣೀರು ಕಲಿಸಿ ಒಂದು ಹೊಸ ಟಾನಿಕ್ ತಯಾರಿ ಮಾಡಿದವರೆಂದರೆ ಶ್ರೀ ಶ್ರೀ. ಈ ಮುಪ್ಪಾದ ಪ್ರಪಂಚಕ್ಕೆ ಹೃದಯವು ಯಾವ ರೀತಿ ಕಾಣಿಸುತ್ತದೋ ಹಾಗೆಯೇ ಮಾತಿನ ರೂಪದಲ್ಲಿ ಕೊಡಲು ಶ್ರೀಶ್ರೀಗೆ ಚೆನ್ನಾಗಿ ಗೊತ್ತು. ಶ್ರೀ ಶ್ರೀ ಯ ಎಲ್ಲರ ಯಾತನೆಗಳನ್ನು ತನ್ನಲ್ಲಿ ಕಾಣಿಸಿಕೊಳ್ಳುತ್ತಾರೆ. ೧೯೪೦ರ ನಂತರ ಒಂದು ದಶಕದಲ್ಲಿ ಆಂಧ್ರಸಾಹಿತ್ಯ ಲೋಕವನ್ನು ಉತ್ತೇಜಿಸಿ ಮುಂದುವರಿಸಿದ ಅಭ್ಯುದಯ ಕಾವ್ಯ ಚಳುವಳಿಗೆ ಮೂಲ ಸ್ಫೂರ್ತಿ ಶ್ರೀ ಶ್ರೀ. ಭಾವಕವಿತ್ವದ ವಿರುದ್ಧ ಸಿಡಿದೆದ್ದು ತನ್ನದೇ ಆದ ವೈಚಾರಿಕ ವಿಚಾರಗಳನ್ನು ಎತ್ತಿದ್ದಲ್ಲದೆ, ಶ್ರಮಿಕ ವರ್ಗದ ಚೈತನ್ಯವನ್ನುಂಟುಮಾಡುವುದರ ಜೊತೆಗೆ, ಸಮಾನತೆಯ ಹೊಸ ಕಾವ್ಯ ರೀತಿಗೆ ದಾರಿ ಹಾಕಿದವರು ಶ್ರೀ ಶ್ರೀ.

''ಆಂಧ್ರಸಾಹಿತ್ಯ ಚರಿತ್ರೆಯಲ್ಲಿ ಅಭ್ಯುದಯ ಕವಿತೆಯ ಮಹಾಪ್ರಸ್ಥಾನದ ಯುಗಕರ್ತ ಶ್ರೀ ಶ್ರೀ. ಸುಮಾರು ೧೯೩೦ರಿಂದ ಆಂಧ್ರಸಾಹಿತ್ಯವು ಅವರ ಹಿಂದೆಯೇ ನಡೆಯುತ್ತಿದೆ.''[೨] ಇವರು ಚಿಕ್ಕ ವಯಸ್ಸಿನಲ್ಲೇ ಸಾವಿತ್ರಿ ಸತ್ಯವಂತುಡು ಎನ್ನುವ ಪದ್ಯನಾಟಕವನ್ನು ರಚಿಸಿದರು. ೧೫ನೇ ವರ್ಷದಲ್ಲೇ ಛಂದಸ್ಸನ್ನು ಚೆನ್ನಾಗಿ ಅರಿತಿದ್ದರು. ೧೯೨೫ರಲ್ಲಿ ವಿಶ್ವರೂಪ ಸಂದರ್ಶನ ಎನ್ನುವ ಗೀತೆಮಾಲಿಕೆಯನ್ನು ರಚಿಸಿದರು.

ಶ್ರೀ ಶ್ರೀ ಕಾವ್ಯರಚನೆಯಲ್ಲಿ ಮೂರು ದಶಕಗಳು ಕಾಣಸಿಗುತ್ತದೆ. ಆತನು ಮೊದಲು ಪದ್ಯಕವಿ, ಭಾವಕವಿ, ನಂತರ ಅಭ್ಯುದಯ ಕವಿ, ಅನಂತರ ವಿಪ್ಲವ ಕವಿ. ಕಾಲಾನುಕ್ರಮಾನುಸಾರವಾಗಿ ಪರಿವರ್ತನೆ ಹೊಂದುತ್ತಾ ಹೋಗಿದ್ದಾರೆ. ಪ್ರಭವ, ಮಹಾಪ್ರಸ್ಥಾನಂ, ಖಡ್ಗಸೃಷ್ಟಿ, ಮರೋಪ್ರಸ್ಥಾನಂ, ಸೀಪ್ರಾಲಿ ಎನ್ನುವವು ಕಾವ್ಯಕ್ಕೆ ಸಂಬಂಧಿಸಿವೆ. ಮರೋಪ್ರಪಂಚಂ ರೇಡಿಯೋ ನಾಟಕಗಳ ಸಂಪುಟ. ಕಥೆಗಳ ಸಂಪುಟ ಚರಮರಾತ್ರಿ, ಚೈನಾಯಾನಂ ಎನ್ನುವುದ ಯಾತ್ರಸಾಹಿತ್ಯ. ಶ್ರೀ ಶ್ರೀ ಪತ್ರಿಕೆಗಳಲ್ಲಿ ಕೊಟ್ಟಿದ್ದ ಪ್ರಶ್ನೆಗಳು ಉತ್ತರಗಳು ಪ್ರಜೆ ಹೆಸರಿನಲ್ಲಿ ಪ್ರಕಟವಾದವು. ಶ್ರೀ ಶ್ರೀ ರಚಿಸಿದ ಸಿನಿಮಾ ಹಾಡುಗಳು ಪಾಡವೊಯ ಭಾರತೀಯುಡಂ ತೆಲುಗುವೀರ ಲೇವರಾ ಎನ್ನುವ ಹೆಸರಿನಲ್ಲಿ ಹೊರಬಂದಿದೆ.

''ಶ್ರೀ ಶ್ರೀ ಯ ದೃಷ್ಟಿ ಅತ್ಯಂತ ವಿಶಾಲವಾದುದು. ಈ ಕಡೆ ನಾನು ಶ್ರೀ ಶ್ರೀ ಅಲ್ಲ ಶ್ರೀ ಶ್ರೀಕಂಠದಿಂದ ಹೇಳುವ ಶ್ರಮಿಕನೆಂದು ಹೇಳಿಕೊಂಡಿದ್ದಾರೆ. ಶ್ರೀ ಶ್ರೀಯ ಮಹಾಪ್ರಸ್ಥಾನದಲ್ಲಿ ಮಾರ್ಕ್ಸಿಸು ಪ್ರಭಾವವು ಕಾಣಿಸುತ್ತದೆ. ೧೯೭೦ರಲ್ಲಿ ಸೃಜನ ಪತ್ರಿಕೆಗೆ ಸಂದರ್ಶನ ಕೊಡುವಾಗ ಶ್ರೀ ಶ್ರೀ ಈ ರೀತಿ ಹೇಳಿದ್ದರು.

''ಮಹಪ್ರಸ್ಥಾನಂ ಅನ್ನಗೀತಂ ರಾಸೆಗಾಟಿಕಿ ನಾಕು Marxism
ಗೂರ್ಚಿ ತೆಲಿಯನೆ ತೆಲಿಯದು. ನೇನು Marxism ತೆಲುಸುಕುನ್ನದಿ
ಸಾಹಿತ್ಯಂ ದ್ವಾರನೇ ರಾಜಕೀಯಾಲ ದ್ವಾರಾಕಾದು.''

ಇನ್ನು ಕೆಲವರು ಶ್ರೀ ಶ್ರೀಗೆ ಮಾರ್ಕಿಸ್ಟು ಪರಿಜ್ಞಾನವಿಲ್ಲವೆಂದು ಹೇಳುವರು. ಶ್ರೀ ಶ್ರೀಗೆ ಇದ್ದ ಮಾರ್ಕ್ಸಿಸ್ ಸಿದ್ಧಾಂತ ಪರಿಜ್ಞಾನವು ಪರಿಮಿತವಾಗಿದೆ. ಅವಸರವಾದ ಅವಗಾಹನೆ ಮಾತ್ರ ಇದೆ. ಚೇಕೂರಿ ರಾಮರಾವು. ಶ್ರೀ ಶ್ರೀ ಮೇಲೆ ಗುರುಜಾಡ,, ನಜ್ರುಲ್ಲಾ ಇಸ್ಲಾಂ, ಸ್ಪಿನ್‌ಬರ್ನ್, ಎಡ್ಮಾರ್ ಎಲೆನಪೋ, ಬೆರ್ಟೊಲ್‌ಡಬ್ರೆಕ್ಟ್, ಮಯಕೋವಸ್ಕಿ ಗೋರ್ಕಿ, ಬೋದಲೇರ್, ಕ್ರಿಷ್ಟಾಫರ್‌ಕಾಡವೆಲ್, ರಾಲ್ಫ್ ಹಾಕ್ಸು ಮೊದಲಾದವರ ಪ್ರಭಾವವು ಇದೆ.''[೨]

### ದಿಗಂಬರ ಕಾವ್ಯ

ಯಾವುದೇ ಸಾಹಿತ್ಯವಾಗಲಿ, ಅದು ಪರಿವರ್ತನೆಶೀಲವಾಗಿರುತ್ತದೆ. ಕಾರಣ ಅದು ಕಾಲಕ್ಕೆ ತಕ್ಕಂತೆ ಜನರ ಮನೋಬಾವಗಳಿಗೆ ಅನುಸಾರವಾಗಿ ಪರಿವರ್ತಿತವಾಗುತ್ತದೆ. ಪ್ರಾಚೀನದಲ್ಲಿ ಕವಿಗಳ ಆಶ್ರಯದಲ್ಲಿ ಅವರ ಮನೋಭಾವನೆಗಳಿಗೆ ಅನುಗುಣವಾಗಿ ಕಾವ್ಯ ರಚಿಸುತ್ತಿದ್ದರು. ಆಧುನಿಕ ಯುಗದಲ್ಲಿ ವಾಸ್ತವದ ನೆಲೆಯಲ್ಲಿ ಜನರ ಮನೋಭಾವನೆಗಳಿಗೆ ಅನುಗುಣವಾಗಿ, ಸಾಮಾಜಿಕ, ರಾಜಕೀಯ, ಆರ್ಥಿಕ ಮುಂತಾದ ವಿಷಯಗಳನ್ನು ಇಟ್ಟುಕೊಂಡು ಕಾವ್ಯ ರಚನೆ ಮಾಡಿದರು. ಹಾಗಾಗಿ ಆಧುನಿಕ ಕಾವ್ಯವು ಬದಲಾವಣೆ ಹೊಂದುತ್ತಾ ಬಂತು, ಮುಖ್ಯವಾಗಿ ಪಾಶ್ಚಾತ್ಯ ಸಾಹಿತ್ಯದ ಪ್ರಭಾವ ಪಡೆದು ಅಲ್ಲಿನ ಸರಳವಾದ ಕಾವ್ಯ ರಚನೆಗೆ, ಮಾರು ಹೋಗಿ ಪಾಶ್ಚಾತ್ಯ ಕಾವ್ಯ ಪರಂಪರೆಯಲ್ಲಿ ಕಾವ್ಯ ರಚಿಸಿದರು. ದಿಗಂಬರ ಕಾವ್ಯವು ಈ ಎಲ್ಲಾ ಕಾವ್ಯ ಸಂಪ್ರದಾಯಗಳನ್ನು ಮೆಟ್ಟಿನಿಂತು ಆ ಕಾವ್ಯಗಳ ವಿರುದ್ಧ ತಿರುಗಿಬಿದ್ದು, ಹೊಸ ಸಮಾಜಕ್ಕಾಗಿ, ಸಮಾಜ ಪರಿವರ್ತನೆಗಾಗಿ, ಅತಿಕೆಳವರ್ಗದ ಜನರ, ಸಮಾಜದ ದುರ್ನಡತೆಗಳನ್ನು ರಾಜಕೀಯ ದೊಂಬರಾಟವನ್ನು ಬಯಲಿಗೆಳೆಯಲು ನೇರವಾಗಿ ಜನರ ಭಾಷೆಯಲ್ಲಿ ಮುಚ್ಚುಮರೆಯಿಲ್ಲದೆ ಆಡು ಮಾತಿನಲ್ಲಿ ದಿಗಂಬರ ಕಾವ್ಯವು ಉದಯಿಸಿತು. ಈ ಕಾವ್ಯದ ಮೇಲೆ ಸ್ವಲ್ಪ ಮಟ್ಟಿಗೆ ಪಾಶ್ಚಾತ್ಯ ಕಾವ್ಯ ಚಳುವಳಿ ಪ್ರಭಾವ ಕಾಣಬಹುದು. ದಿಗಂಬರ ಕಾವ್ಯವನ್ನು ವಿಸ್ತೃತವಾಗಿ ಮುಂದಿನ ಅಧ್ಯಾಯದಲ್ಲಿ ನೋಡಲಾಗುವುದು.

### ಅಡಿ ಟಿಪ್ಪಣಿ

೧. ಡಾ. ದ್ವಾ.ನಾ.ಶಾಸ್ತ್ರಿ: ತೆಲುಗು ಸಾಹಿತ್ಯ ಚರಿತ್ರೆ, ಪು.೩.
೨. ಡಾ. ದ್ವಾ.ನಾ. ಶಾಸ್ತ್ರಿ: ತೆಲುಗು ಸಾಹಿತ್ಯ ಚರಿತ್ರೆ, ಪು.೪.
೩. ಡಾ. ದ್ವಾ.ನಾ. ಶಾಸ್ತ್ರಿ: ತೆಲುಗು ಸಾಹಿತ್ಯ ಚರಿತ್ರೆ, ಪು.೪.
೪. ಡಾ. ದ್ವಾ.ನಾ. ಶಾಸ್ತ್ರಿ: ತೆಲುಗು ಸಾಹಿತ್ಯ ಚರಿತ್ರೆ, ಪು.೫.
೫. ಡಾ. ದ್ವಾ.ನಾ. ಶಾಸ್ತ್ರಿ: ತೆಲುಗು ಸಾಹಿತ್ಯ ಚರಿತ್ರೆ, ಪು.೮.
೬. ಆರ್.ವಿ. ಎಸ್. ಸುಂದರಂ: ತೆಲುಗು ಭಾಷೆ ಮತ್ತು ಸಾಹಿತ್ಯ, ಪು.೩೧.
೭. ಆರ್.ವಿ. ಎಸ್. ಸುಂದರಂ: ತೆಲುಗು ಭಾಷೆ ಮತ್ತು ಸಾಹಿತ್ಯ, ಪು.೪೯.
೮. ಆರ್.ವಿ. ಎಸ್. ಸುಂದರಂ: ತೆಲುಗು ಭಾಷೆ ಮತ್ತು ಸಾಹಿತ್ಯ, ಪು.೬೧.
೯. ಆರ್.ವಿ. ಎಸ್. ಸುಂದರಂ: ತೆಲುಗು ಭಾಷೆ ಮತ್ತು ಸಾಹಿತ್ಯ, ಪು.೬೫.

೧೦. ಆರ್.ವಿ. ಎಸ್. ಸುಂದರಂ: ತೆಲುಗು ಭಾಷೆ ಮತ್ತು ಸಾಹಿತ್ಯ,ಪು.೬೮.

೧೧. ಆರ್.ವಿ. ಎಸ್. ಸುಂದರಂ: ತೆಲುಗು ಭಾಷೆ ಮತ್ತು ಸಾಹಿತ್ಯ,ಪು.೭೫.

೧೨. ಆರ್.ವಿ. ಎಸ್. ಸುಂದರಂ: ತೆಲುಗು ಭಾಷೆ ಮತ್ತು ಸಾಹಿತ್ಯ,ಪು.೭೬.

೧೩. ಆರ್.ವಿ. ಎಸ್. ಸುಂದರಂ: ತೆಲುಗು ಭಾಷೆ ಮತ್ತು ಸಾಹಿತ್ಯ,ಪು.೮೦.

೧೪. ಆರ್.ವಿ. ಎಸ್. ಸುಂದರಂ: ತೆಲುಗು ಭಾಷೆ ಮತ್ತು ಸಾಹಿತ್ಯ,ಪು.೮೨.

೧೫. ಆಟಲವೇದಿ ಎನ್ನುವುದು ದೇಸಿಯ ಭಾಷೆಯಲ್ಲಿ ಬರೆದ ಪದ್ಯರಚನ ಮುಖ್ಯವಾಗಿ ದೇಸಿಯ ಛಂದಸ್ಸಿಗೆ ಸಂಬಂಧಿಸಿದ್ದು ಇದರಲ್ಲಿ ಪ್ರಾಸ ಯತಿ ಮಾತ್ರ ಇರುವುದು.

೧೬. ಪ್ರೊ. ಎಲ್. ಎಸ್ . ಶೇಷಗಿರಿರಾವ್: ಭಾರತೀಯ ಸಾಹಿತ್ಯ ಮೀಮಾಂಸೆ (ಸಂ.೧), ಪು.೨೪೯.

೧೭. ಡಾ. ದ್ವಾ.ನಾ.ಶಾಸ್ತ್ರಿ: ತೆಲುಗು ಸಾಹಿತ್ಯ ಚರಿತ್ರೆ, ಪು.೩೫೭.

೧೮. ಪ್ರೊ. ವೆಲಮಲ ಸಿಮ್ಮನ್ನ : ತೆಲುಗು ಸಾಹಿತ್ಯ ವಿಮರ್ಶೆ ಸಿದ್ಧಾಂತಲು, ಪು.೪೨೭.

೧೯. ಪ್ರೊ. ವೆಲಮಲ ಸಿಮ್ಮನ್ನ : ತೆಲುಗು ಸಾಹಿತ್ಯ ವಿಮರ್ಶೆ ಸಿದ್ಧಾಂತಲು, ಪು.೪೨೮.

೨೦. ಡಾ. ದ್ವಾ.ನಾ.ಶಾಸ್ತ್ರಿ: ತೆಲುಗು ಸಾಹಿತ್ಯ ಚರಿತ್ರೆ, ಪು.೫೧೫.

೨೧. ಡಾ. ದ್ವಾ.ನಾ.ಶಾಸ್ತ್ರಿ: ತೆಲುಗು ಸಾಹಿತ್ಯ ಚರಿತ್ರೆ, ಪು.೪೧೫.

೨೨. ಡಾ. ದ್ವಾ.ನಾ.ಶಾಸ್ತ್ರಿ: ತೆಲುಗು ಸಾಹಿತ್ಯ ಚರಿತ್ರೆ, ಪು.೪೧೯.

■

## ಅಧ್ಯಾಯ - ೩
## ತೆಲುಗು ದಿಗಂಬರ ಕಾವ್ಯ ವಿಶ್ಲೇಷಣೆ

''ಮಾನಸಿಕ ದಿಗಂಬರಕ್ಕಾಗಿ ನಿತ್ಯ ಸಚೇತನ ಆತ್ಮ
ಸ್ಫೂರ್ತಿಯಿಂದ ಬದುಕುವುದೇ ನಮ್ಮ ಗುರಿ, ಉಸಿರಾಡುವ
ಪ್ರತಿಜೀವಿಯೊಂದಿಗೆ ಸ್ಪಂದಿಸಿ ವ್ಯಕ್ತಿಯ ಅಸ್ತಿತ್ವ ರಕ್ಷಣೆಗಾಗಿ
ಅಂತರಂಗದಲ್ಲಿ ಸುಪ್ತವಾಗಿರುವ ನೋವನ್ನು ಅಸಂತೋಷವನ್ನು
ಆಸೆಯನ್ನು ಕೆರಳಿಸಬೇಕೆಂಬುದೇ ನಮ್ಮ ಗುರಿ'' [೧]
- ನಗ್ನಮುನಿ, ನಿಖಿಲೇಶ್ವರ, ಜ್ವಾಲಾಮುಖಿ, ಚೆರಬಂಡರಾಜು, ಭೈರವಯ್ಯ, ಮಹಾಸ್ವಪ್ನ.

ಭಾರತದಲ್ಲಿ ದಿಗಂಬರ ಎನ್ನುವುದು ಪ್ರಸಿದ್ಧ ಜೈನಧರ್ಮದ ಸಂಪ್ರದಾಯ. ದಿಗಂಬರತ್ವ ಅಥವಾ ನಗ್ನತೆ ದೈಹಿಕವಾಗಿರಬಹುದು ಅಥವಾ ತಾತ್ವಿಕವಾಗಿರಬಹುದು. ತೆಲುಗು ಸಾಹಿತ್ಯದಲ್ಲಿ ನಿಜವಾದ ದಿಗಂಬರತ್ವಕ್ಕೆ ನಿದರ್ಶನ ವೇಮನ. ಸುಮಾರು ೧೫ನೇ ಶತಮಾನಕ್ಕೆ ಸೇರಿದ ಈ ಕವಿಗೆ ವೈರಾಗ್ಯವುಂಟಾಗಿ ದಿಗಂಬರವಾಗಿಯೇ ಸಂಚರಿಸುತ್ತಿದ್ದನೆಂಬ ಪ್ರತೀತಿ. ಈ ಕವಿಯ ಪದ್ಯಗಳಲ್ಲಿ ಮಾನಸಿಕ ದಿಗಂಬರ ಭಾವನೆಗಳನ್ನು ಕಾಣಬಹುದು. ಸಂಪ್ರದಾಯ, ಸಾಮಾಜಿಕ ಅಸಮಾನತೆಯನ್ನು, ಡಂಬಾಚಾರಗಳನ್ನು ಮೂರ್ಖತನವನ್ನು, ಭ್ರಷ್ಟತೆಯನ್ನು ನಗ್ನವಾಗಿ ಟೀಕಿಸಿದ ತೆಲುಗಿನ ವಿಚಾರವಾದಿ, ವಾಸ್ತವಿಕವಾದಿಯಾದ ಕವಿ ವೇಮನ.

ಆಧುನಿಕ ಯುಗದ ಸಾಹಿತ್ಯದಲ್ಲಿ ದಿಗಂಬರ ಕವಿಗಳು ಮಾನಸಿಕ ದಿಗಂಬರತ್ವ ಪಡೆದು ಹೊಸ ಕಾವ್ಯವನ್ನು ಸೃಷ್ಟಿಸಿದರು. ಅದು ದಿಗಂಬರ ಕಾವ್ಯವಿದ್ದು, ಈ ವಿಧವಾದ ದಿಗಂಬರ ಕವಿಗಳು ತಮ್ಮ ಹೆಸರುಗಳನ್ನು ಗುಪ್ತವಾಗಿಟ್ಟುಕೊಂಡು ಕಾವ್ಯವನ್ನು ರಚಿಸಿದರು. ಈ ಪ್ರಪಂಚದ ದುರ್ಗುಣಗಳನ್ನು ತೊಲಗಿಸಿ ನಿತ್ಯ ಸಚೇತನ ಆತ್ಮ ಸ್ಫೂರ್ತಿಯಿಂದ ಬಾಳುವುದೇ ಗುರಿಯಾಗಿಟ್ಟುಕೊಂಡ ಆರು ಜನ ತರುಣರ ಗುಂಪೇ ದಿಗಂಬರ ಕವಿಗಳು. ಪ್ರತಿಯೊಬ್ಬ ವ್ಯಕ್ತಿಯ ಅಸ್ತಿತ್ವದ ಪರಿವರ್ತನೆಗಾಗಿ ಸಮಾಜದಲ್ಲಿರುವ ಅಸಂತೋಷ, ಅತೃಪ್ತಿಯನ್ನು ತಮ್ಮ ಲೇಖನಿಯ ಮೂಲಕ ಅಭಿವ್ಯಕ್ತಿಸಲು ಹೊರಟವರೇ ಈ ದಿಗಂಬರ ಕವಿಗಳು. ದಿಗಂಬರ ಕಾವ್ಯ ಉದಯಿಸಲು ಅಂದಿನ ಸಾಮಾಜಿಕ ಸ್ಥಿತಿಗತಿಗಳೇ ಕಾರಣ. ರಾಜಕೀಯ ದುರಾಡಳಿತ, ದುಷ್ಟಶಕ್ತಿಗಳು,

ದಂಬಾಚಾರಿಗಳು ಅಂದಿನ ಸಮಾಜವನ್ನು ಕಲುಷಿತಗೊಳಿಸಿದ್ದುವು. ಅದು ತರುಣ ದಿಗಂಬರ ಕವಿಗಳಿಗೆ ಒಟ್ಟುಗೂಡಿ ಕಾವ್ಯ ರಚನೆ ಮಾಡಲು ಪ್ರೇರೇಪಿಸಿತು.

೧೯೫೭ರಲ್ಲಿ ಜರುಗಿದ ಸಾಮಾನ್ಯ ಚುನಾವಣೆಯಲ್ಲಿ ಅಭ್ಯುದಯ ಕವಿಗಳು ಇಚ್ಛಿಸಿದ ಕಮ್ಯುನಿಸ್ಟ್ ಪಾರ್ಟಿಯು ಸೋತಿದ್ದರಿಂದ ಅಭ್ಯುದಯ ಕವಿಗಳ ಸಂಘವು ನಿರ್ವೀರ್ಯವಾಗಿ ಅಂದಿನ ಪ್ರಣಾಳಿಕೆಗಳಿಂದಾಗಿ ಕೆಲವರು ಕೋಟೀಶ್ವರರಾದರೆ, ಅಂಸಂಖ್ಯಾತ ಪ್ರಜೆಗಳು ಕಡುಬಡವರಾಗಿ ಮಾರ್ಪಾಡು ಹೊಂದಿದರು. ದೇಶದಲ್ಲಿ ನಿರಂಕುಶ ಅಂಧಕಾರವು ಕಾರ್ಮೋಡ ಆವರಿಸಿ ಲಕ್ಷೋಪಲಕ್ಷ ನಿರುದ್ಯೋಗಿ ಯುವಜನರು ಬೀದಿಯಲ್ಲಿ ಭಿಕಾರಿಗಳಾಗಿ ತಮ್ಮ ಜೀವನವನ್ನು ಸಾಗಿಸುತ್ತಿದ್ದರು.

ಸ್ವಾತಂತ್ರ್ಯ ಬಂದೊಡನೆ ಹಳೆಯ ಸಮಾಜದ ಸ್ಥಾನದಲ್ಲಿ ಹೊಸ ಸಮಾಜ ನಿರ್ಮಾಣವಾಗುತ್ತದೆಂದು, ಮಾನವೀಯ ಮೌಲ್ಯಗಳು ಬದಲಾವಣೆ ಪಡೆಯುತ್ತವೆಂದೂ, ಪ್ರತಿಯೊಬ್ಬರಿಗೆ ಸ್ವಾತಂತ್ರ್ಯ, ಸಮಾನತೆ, ಸಾಮಾಜಿಕ ಸಮಾನತೆ, ಪ್ರಾಮಾಣಿಕ ಬದುಕು ಸಿಗುತ್ತದೆಂದು ಪ್ರಜೆಗಳು ನಂಬಿದ್ದರು. ಆದರೆ, ಸ್ವಾರ್ಥ, ಅಸಮಾನತೆ,ಅಧರ್ಮ, ಅನೀತಿ, ಮೋಸ, ವಂಚನೆ ಮುಂತಾದವುಗಳು ವಿಪರೀತವಾಗಿ ಬೆಳೆದವು. ರಾಜಕೀಯದಲ್ಲಿ ಮಿತಿಯಿಲ್ಲದೆ ಪ್ರತಿಯೊಬ್ಬರು ರಾಜಕೀಯ ಪ್ರವೇಶಿಸಿ ಮುಖಂಡರಾಗಿ ಮೆರೆದರು. ಇಂಥ ರಾಜಕೀಯ ವ್ಯಕ್ತಿಗಳಲ್ಲಿ ಸ್ವಂತಿಕೆ ಇತ್ತು. ಆದರೆ ಉದಾರ ಗುಣಗಳಿದ್ದಿಲ್ಲ. ಇವರು ಕಪ್ಪು ಹಣದ ಸಹಾಯದಿಂದ, ಹಿಂಸಾತ್ಮಕ ರೀತಿಯಲ್ಲಿ ಜಾತಿ, ಮತ, ಪಂಥಗಳನ್ನು ಮುಂದಿಟ್ಟುಕೊಂಡು ಪ್ರಜೆಗಳು ಅಡ್ಡದಾರಿಗೆ ಹೋಗಲು ಪ್ರೇರಕರಾದರು. ಸರಕಾರದ ವೈಫಲ್ಯಗಳು, ದುಷ್ಟ ಶಕ್ತಿಗಳಿಗೆ ತಲೆಯಾಡಿಸುವ ಅಧಿಕಾರಿಗಳು, ಮತ್ತೊಂದೆಡೆಗೆ ಮೇಧಾವಿಗಳ, ಚಿಂತಕರ ಉದಾಸೀನತೆ, ಯಾಂತ್ರಿಕ ಹೊಗಳಿಕೆಯ ಹವ್ಯಾಸಗಳು, ಅಸ್ಪಷ್ಟವಾದ ಕವಿತೆಗಳು ಮುಂತಾದವು ಜನವಿರೋಧಿಯಾಗಿದ್ದವು. ಇದನ್ನೆಲ್ಲಾ ಮೇಧಾವಿ ವಿದ್ವಾಂಸರುಗಳು, ಕವಿಗಳು, ಚಿಂತಕರು ನೋಡಿ ಕಣ್ಣಿಲ್ಲದ ಕುರುಡರಂತೆ ಕಿವಿಯಿಲ್ಲದ ಕಿವುಡರಂತೆ ಇದ್ದರು. ಈ ಎಲ್ಲಾ ಸ್ಥಿತಿಗತಿಗಳನ್ನು ಗಮನಿಸಿದ ತರುಣ ದಿಗಂಬರ ಕವಿಗಳು ನೂತನ ಸಮಾಜವನ್ನು ನಿರ್ಮಿಸಬೇಕೆಂದು ತಿಳಿದು, ಈ ಕೋಪೋದ್ರಿಕ್ತ ತರುಣ ದಿಗಂಬರ ಕವಿಗಳು ದಿಗಂಬರ ಕಾವ್ಯ ಎಂಬ ನೂತನ ಕಾವ್ಯ ಪ್ರಯೋಗ ಮಾಡಿದರು.

ದಿಗಂಬರ ಕಾವ್ಯದಲ್ಲಿ ಸೌಂದರ್ಯವಾಗಲಿ, ಸುಂದರ ಪದಗಳಾಗಲಿ, ಕಾಣುವುದಿಲ್ಲ. ಪ್ರಜೆಗಳ ನೋವು - ನಲಿವುಗಳನ್ನು ನೇರವಾಗಿ ಅವರ ಕಾವ್ಯದಲ್ಲಿ ತಂದರು. ಹಾಗಾಗಿ ಅವರ ಕಾವ್ಯದಲ್ಲಿ ಅಶ್ಲೀಲವೆನ್ನಬಹುದಾದ ಪದಗಳನ್ನು ಸಹ ವಿಡಂಬನಾತ್ಮಕವಾಗಿ ಬಳಸುವುದನ್ನು ಕಾಣಬಹುದು.

ದಿಗಂಬರ ಕವಿಗಳಲ್ಲಿ ವಿಚಾರಗಳೇ ಪ್ರಧಾನ. ಈ ಕವಿಗಳು ವಿಚಾರಗಳ ಪ್ರವಾಹದಲ್ಲಿ ನಿರಾಶೆ, ಆವೇಗ, ಜಿಗುಪ್ಸೆ, ಕ್ರೋಧ, ಮೊದಲಾದ ಭಾವಗಳು ಮನಸ್ಸಿನೊಳಗೆ ಹೊಸ ಚೈತನ್ಯವು ಹೊಂದಿ ಆಶೆಯನ್ನು ಹೊರಚೆಲ್ಲಿ ಮಾನವನ ಜೀವನದ ಬಗ್ಗೆ ಗುರಿ ಇಟ್ಟುಕೊಂಡು ವಿಚಾರ ಮಾಡಿದರು.

''ಇಲ್ಲಿ ಈ ದೇಶದಲ್ಲಿ ಈ ಭೂಗೋಳದಲ್ಲಿ ಉಸಿರಾಡುವ ಪ್ರತಿ ಮಾನವನ ಅಸ್ತಿತ್ವಕ್ಕಾಗಿ ತಾಪದಿಂದ ಆತನ ಭವಿಷ್ಯವನ್ನು ಚಿಂತಿಸಿ, ಬಿಕ್ಕಿ ಬಿಕ್ಕಿ ಅತ್ತು ಹುಚ್ಚೆದ್ದು ಪ್ರವಚಿಸಿದ ಕಾವ್ಯ ಇದು... ರಾಜಕೀಯ ಕೊಚ್ಚೆಯಲ್ಲಿ ಹೊರಳಾಡುತ್ತಿರುವ ನಾಯಿಗಳು ಪ್ರಜೆಗಳನ್ನು ಬ್ಲಾಕ್‌ಮೆಲ್ ಮಾಡುತ್ತಿರುವ ಖೋಟಾಸನ್ಯಾಸಿಗಳು ಪತ್ರಿಕೆಗಳಲ್ಲಿ ವಾಂತಿ ಮಾಡಿಕೊಳ್ಳುತ್ತಿರುವ ಲೇಖಕ ಹಂದಿಗಳು, ಬಾಲ ವಿಧವೆಯರ ರುಚಿಕಂಪ ಸ್ವಾಮಿಗಳು, ಸಿನಿಮಾ ಹೀರೋಗಳೆಂಬ ಖೋಜ್ಜಾಗಳು ಇವರೆಲ್ಲ ಸೃಷ್ಟಿಸುತ್ತಿರುವ ಪೋಷಿಸುತ್ತಿರುವ ಈ ಕುಷ್ಠ ವ್ಯವಸ್ಥೆಯನ್ನು ದುರ್ಗಂಧ ಸಂಸ್ಕೃತಿಯನ್ನು ನಾಶ ಮಾಡುವುದಕ್ಕಾಗಿಯೇ ಈ ದಿಗಂಬರ ಕಾವ್ಯ ಅವತರಿಸಿದೆ '' ಎಂದು ದಿಗಂಬರ ಕವಿಗಳು ಹೇಳಿಕೊಂಡಿದ್ದಾರೆ.

ಈ ದಿಗಂಬರ ಕವಿಗಳು ಹೊಲಸು ಅಶ್ಲೀಲ ಪದಗಳು ಎಂದು ಹೆದರದೆ ಆವೇಶ, ಆಕ್ರೋಶ ಏನನ್ನು ನಿಯಂತ್ರಿಸಲೆತ್ನಿಸದೆ ಯಥೇಚ್ಛವಾಗಿ ಹೇಳಿದ್ದಾರೆ. ಈ ಆರು ಮಂದಿ ಕವಿಗಳ ಬರಹವೂ ಹೆಚ್ಚು ಕಡಿಮೆ ಒಂದೇ, ಬಯ್ಗುಳಗಳ ಸರಮಾಲೆ, ನೋಡುನೋಡುತ್ತಾ ತಾರಸ್ಥಿತಿಗೇರುವ ಇವರ ಕೂಗು, ನೇರವಾಗಿ, ನಗ್ನವಾಗಿ, ಸತ್ಯ ಹೇಳುವುದು ಇವರ ಮುಖ್ಯ ಉದ್ದೇಶ. ಈ ಕವಿಗಳು ತಮ್ಮದೇ ಆದ ವೈಚಾರಿಕ ನಿಲುವುಗಳು, ತಾತ್ವಿಕ ಧೋರಣೆಗಳನ್ನು ಇಟ್ಟುಕೊಂಡು ಕಾವ್ಯವನ್ನು ರಚಿಸಿದರು. ಅವರ ಕಾವ್ಯಕ್ಕೆ 'ದಿಗಂಬರ ದಿಕ್ಕು' ಎಂದು ಕರೆದರು.

ಆಧುನಿಕ ತೆಲುಗು ಕಾವ್ಯ ೧೯೧೦ರಿಂದ ಪ್ರಾರಂಭವಾಯಿತು. ಗುರುಜಾಡ ಅಪ್ಪರಾವ್ ಅವರು ಹೊಸ ಛಂದಸ್ಸಿನಲ್ಲಿ ಹೊಸ ವಸ್ತುವನ್ನು ಇಟ್ಟುಕೊಂಡು ಕಾವ್ಯ ರಚಿಸಿದರು. ಇವರ ಗೀತೆಗಳು ತೆಲುಗಿನ ನವೋದಯ ಕಾವ್ಯಕ್ಕೆ ನಾಂದಿ ಹಾಡಿತು. ೧೯೩೦ರಿಂದ ಪ್ರಗತಿಶೀಲ ಸಾಹಿತ್ಯ ನೆಲೆಯೂರಿತು. ಶ್ರೀ ಶ್ರೀ ಅವರು ಈ ಪಂಥದ ನೇತಾರರು. ಶ್ರೀ ಶ್ರೀ ಅವರು ತೆಲುಗು ಕಾವ್ಯಕ್ಕೆ ಹೊಸ ಆಯಾಮ ನೀಡಿದರು. ಸಮಾಜವಾದದ ಸಿದ್ಧಾಂತಗಳನ್ನು ಕಾವ್ಯರೂಪದಲ್ಲಿ ತಂದರು. ಈ ಕಾವ್ಯಯುಗ ೧೯೩೦-೪೦ ರ ತನಕ ಪ್ರಚರಿತದಲ್ಲಿ ೧೯೪೩ರಲ್ಲಿ ಮೊದಲ ಅಭ್ಯುದಯ ಲೇಖಕರ ಸಮ್ಮೇಳನ ನಡೆಸಿತು. ಈ ಕಾಲದಲ್ಲಿ ಕೆಲವರು ಅಭ್ಯುದಯ ಬಿಟ್ಟು ನವ್ಯಕ್ಕೆ ತಿರುಗಿದರು. ಒಟ್ಟಾರೆ ಈ ಯುಗವು ಪರಿವರ್ತನೆಯ ಯುಗವಾಗಿದೆ. ೧೯೪೯ರ ಹೊತ್ತಿಗೆ ಶ್ರೀ ಶ್ರೀಯವರ ಪ್ರಗತಿಪರವಾದ ಧೋರಣೆಗಳನ್ನು ಅನೇಕ ಕವಿಗಳು ಬೆಂಬಲಿಸಿದರು. ೧೯೪೮ರ ನಂತರ ಅಭ್ಯುದಯ ಕುಂಟುತ್ತಾ ಸಾಗಿತ್ತು. ೧೯೫೫ರಲ್ಲಿ ಅಭ್ಯುದಯವು ಛಿದ್ರವಾಯಿತು. ಪ್ರತಿಯೊಬ್ಬ ಕವಿಗಳು ತಮ್ಮದೇ ಆದ ಧೋರಣೆಗಳನ್ನು ಇಟ್ಟುಕೊಂಡು ಬೇರೆ ಬೇರೆಯಾಗಿ, ತಮ್ಮದೇ

ಭಾವನೆಗಳಿಗೆ ತಕ್ಕಂತೆ ಸೃಜನಾತ್ಮಕವಾದ ಬರವಣಿಗೆಯನ್ನು ಪ್ರಾರಂಭಿಸಿದರು. ಪರಿವರ್ತನೆಯು ಜಗತ್ತಿನ ನಿಯಮ. ಹಾಗೆಯೇ ಸಾಹಿತ್ಯದಲ್ಲಿಯೂ ಕಾಲಕ್ಕೆ ತಕ್ಕಂತೆ ಬದಲಾವಣೆಯನ್ನು ಕಾಣಬಹುದು. ಕಾವ್ಯದಲ್ಲಿ ಹೊಸ ಹೊಸ ಪ್ರಯೋಗಗಳನ್ನು ಕಾಣಬಹುದು.

**ಚಾರಿತ್ರಿಕ ಹಿನ್ನೆಲೆ**

ಭಾರತ ದೇಶಕ್ಕೆ ರಾಜಕೀಯವಾಗಿ ಸ್ವಾತಂತ್ರ್ಯ ಬಂದಿದೆ; ಆದರೆ ಆರ್ಥಿಕ, ಸಾಮಾಜಿಕ ನೆಲೆಯಲ್ಲಿ ನಿಜವಾಗಿ ಭಾರತದೇಶಕ್ಕೆ ಸ್ವಾತಂತ್ರ್ಯ ಲಭಿಸಿಲ್ಲ. ೧೯೪೭ರಲ್ಲಿ ಕೇವಲ ಅಧಿಕಾರವು ಮಾತ್ರ ಬದಲಾವಣೆ ಹೊಂದಿದೆಯೆಂದು ಕವಿಗಳು, ವಿಚಾರವಾದಿಗಳು ಭಾವಿಸಿದರು. ಪ್ರಜೆಗಳು ಕನಸುಕಂಡ ಸ್ವಾತಂತ್ರ್ಯಕ್ಕೂ ಬಂದ ಸ್ವಾತಂತ್ರ್ಯಕ್ಕೂ ಅಜಗಜಾಂತರವಿದ್ದು, ತುಂಬ ದೂರ ಸಾಗಿಯಾಗಿತ್ತು. ಪ್ರಜೆಗಳ ಸಮಸ್ಯೆಗಳು ಹೆಚ್ಚುತ್ತಾ ಹೋದವು ಹೊರತು ಕಡಿಮೆಯಾಗಲಿಲ್ಲ.

ಚೈನಾ ಭಾರತ ದೇಶದ ಮೇಲೆ ಯುದ್ಧ ಸಾರಿತು, ಆನಂತರ ಪಾಕಿಸ್ತಾನವು ಸಹ ಭಾರತದ ಮೇಲೆ ಯುದ್ಧ ಪ್ರಕಟಿಸಿತು. ಹಾಗಾಗಿ ಪ್ರಜೆಗಳಲ್ಲಿ ಯುದ್ಧದ ವಾತಾವರಣ ಮೂಡಿತು. ಜನರಲ್ಲಿ ಭಯದ ಆತಂಕವಿತ್ತು. ಆದರೆ ಆಗ ಸಾಮ್ರಾಜ್ಯವಾದದ ದೇಶಗಳ ಅಧಿಕಾರಿಗಳು ಯುದ್ಧವನ್ನು ಮುಕ್ತಾಯ ಮಾಡಲು ಮನಸ್ಸು ಮಾಡಲಿಲ್ಲ. ಅಧಿಕಾರಶಾಹಿಗಳ ಅಹಂಕಾರ, ಅವರ ಅಧಿಕಾರದರ್ಪ, ಗರ್ವ ಮುಂತಾದವುಗಳಿಂದ ಇನ್ನಷ್ಟು ಯುದ್ಧ ವಾತಾವರಣವನ್ನು ಸೃಷ್ಟಿಸಿದರು. ಈ ರೀತಿಯಿಂದ ಪ್ರಜೆಗಳಲ್ಲಿ ಅಭದ್ರತಾಭಾವನೆ ಎಡೆಮಾಡಿತು. ರಾಜಕೀಯ ಪರಿಸ್ಥಿತಿಯು ನೂರಕ್ಕೆ ನೂರರಷ್ಟು ಕಲುಷಿತಗೊಂಡಿತ್ತು.

ತೆಲುಗು ದೇಶದಲ್ಲಿ ಕ್ಷಾಮಕಾಟಚಾರವು ಹೆಚ್ಚುತ್ತಾ ಹೋಯಿತು. ರೈತರಿಗೆ, ಪ್ರಜೆಗಳಿಗೆ ಸಹಾಯ ಮಾಡುವ ಒಡೆಯರು ಯಾರೂ ಇರಲಿಲ್ಲ. ಪ್ರಜಾಪ್ರಭುತ್ವದ ಬಗ್ಗೆ ಜನರಿಗೆ ಸಂಪೂರ್ಣ ವಿಶ್ವಾಸ ಹೊರಟುಹೋಗಿತ್ತು. ಆಂಧ್ರರಾಯಲಸೀಮ ಪ್ರಾಂತದಲ್ಲಿ ಕ್ಷಾಮ ಬಂದು, ಈ ಪ್ರಾಂತಗಳಲ್ಲಿ ತೀವ್ರವಾದ ಕ್ಷಾಮವನ್ನು ತಡೆಯಲು ಉದ್ಯೋಗ, ವ್ಯಾಪಾರಗಳ ನಿಮಿತ್ತವಾಗಿ ತೆಲಂಗಾಣಕ್ಕೆ ವಲಸೆ ಹೋದರು. ಹಾಗಾಗಿ ಆಂಧ್ರ ರಾಯಲಸೀಮ ಪ್ರಜೆಗಳು, ತೆಲಂಗಾಣ ಪ್ರಜೆಗಳು ಒಂದೇ ಕಡೆ ಕೂಡಿದ್ದರಿಂದ ಅಸಂತೃಪ್ತಿ ಅಸಮಧಾನ ಹೊಂದಿದರು. ಈ ಪ್ರಜೆಗಳಲ್ಲಿ ಪ್ರಾದೇಶಿಕ ತತ್ವವು ಕೆರಳಿ ಕುಲತತ್ವವು ಹೊರ ಬಂತು. ಮತೀಯತೆಯು ಪ್ರಳಯ ತಾಂಡವ ಮಾಡಿತು. ನಿರುದ್ಯೋಗ ಹೆಚ್ಚಾಯಿತು. ಮೂಢನಂಬಿಕೆಗಳು ಪ್ರಬಲವಾದವು. ಆಂಧ್ರರಾಯಲಸೀಮೆ ಪ್ರಜೆಗಳು, ತೆಲಂಗಾಣಕ್ಕೆ ಬಂದಿದ್ದರಿಂದ, ನಮ್ಮ ಜೀವಿತಗಳು ನಾಶವಾಗಿ ಹೋಗಿವೆಯೆಂದು ತೆಲಂಗಾಣ ಪ್ರಜೆಗಳು ಯಾತನೆಯನ್ನು ಅನುಭವಿಸಿದರು. ಒಟ್ಟಾರೆ ಆಂಧ್ರ ದೇಶದಲ್ಲಿ ಅಂದು ರಾಜಕೀಯ ಪ್ರಶಾಂತತೆ ಇಲ್ಲವಾಗಿತ್ತು. ಎಲ್ಲ ವರ್ಗದವರು, ಎಲ್ಲ ಕುಲ, ಮತಗಳ ರಾಜಕೀಯ ದುಸ್ಥಿತಿಯನ್ನು ಕಂಡು ನಿರಾಸೆ ವ್ಯಕ್ತ ಪಡಿಸಿದರು.

ದಿಗಂಬರ ಕಾವ್ಯದ ಮೇಲೆ ಪಾಶ್ಚಾತ್ಯ ಸಾಹಿತ್ಯ ಪ್ರಭಾವವನ್ನು ಸಹ ಗುರುತಿಸಬಹುದಾಗಿದೆ. ಈ ಕಾವ್ಯದ ಧ್ಯೇಯೋದ್ದೇಶಗಳ ಮೇಲೆ ಮುಖ್ಯವಾಗಿ **ಫ್ಯೂಚರಿಸಂ** ಪ್ರಭಾವವು ಪ್ರಧಾನವಾಗಿ ಕಂಡುಬರುತ್ತದೆ. ಇಂಗ್ಲೆಂಡಿನಲ್ಲಿ ಪ್ರಾರಂಭವಾದ **ಜಾರ್ವಿಯಸ್** ಕಾವ್ಯ ಚಳುವಳಿಯ ಪ್ರಭಾವ ಆಧುನಿಕ ತೆಲುಗು ಕಾವ್ಯದ ಮೇಲೆ ಆಗಿದೆ. **ಇಮೇಜಿಸಂ**(ಭಾವಚಿತ್ರವಾದ), **ಸಿಂಬಾಲಿಸಮ್** (ಪ್ರತೀಕವಾದ)ನ್ನು ದಿಗಂಬರ ಕವಿಗಳು ಅನುಸರಿಸಿದರು. ೧೯೩೦ರ ನಂತರ ಸರ್ರಿಯಲಿಸಂ (ಅಧಿಕವಾಸ್ತವಿಕವಾದ), ಡಾಡಾಯಿಸಂ (ವಿಧ್ವಂಸಕವಾದ) ಜೊತೆಗೆ ನೂತನ ಸಿದ್ಧಾಂತಗಳು ಆಧುನಿಕ ಕವಿತೆಯನ್ನು ಪ್ರವೇಶಿಸಿತು. ಇಟಾಲಿಯನ್ ಕವಿತೆಗಳು ದಿಗಂಬರ ಕವಿಗಳಿಗೆ ಸ್ಫೂರ್ತಿಯಾದವು. ೧೯೦೯ರಲ್ಲಿ ಇಟಲಿಯಲ್ಲಿ **ಮ್ಯಾರಿನೆಟ್ಟಿ** ಎಂಬ ಲೇಖಕನ ಮುಖಂಡತ್ವದಲ್ಲಿ **ಫ್ಯೂಚರಿಸ್ಟ್ ಮ್ಯಾನಿಫೆಸ್ಟೋ** ಪ್ರಕಟವಾಯಿತು. ಇವರ ಧ್ಯೇಯ ಪತ್ರದ ಅನೇಕ ವಾಕ್ಯಗಳನ್ನು ದಿಗಂಬರ ಕವಿಗಳು ತಮ್ಮ ಉದ್ದೇಶ ಪ್ರಕಟಣೆಯಲ್ಲಿ ಬಳಸಿಕೊಂಡರು. **ಫ್ಯೂಚರಿಸಂ** ಚಿತ್ರಕಲೆಗೆ ಮಾತ್ರ ಅನ್ವಯವಾಗಿತ್ತು. ಆದರೆ ಅನಂತರದಲ್ಲಿ ಬೇರೆ ಬೇರೆ ಕಲೆಗಳಿಗೂ ವಿಸ್ತರಣೆ ಪಡೆಯಿತು. ಹಳೆಯದನ್ನು ಖಡಾಖಂಡಿತವಾಗಿ ಖಂಡಿಸಿದರು. ಹೊಸ ಸೃಷ್ಟಿಯನ್ನು ಮಾತ್ರ ಅವರು ಆಹ್ವಾನಿಸಿದರು. ಇವರು ಚಲನಚಿತ್ರ, ಪತ್ರಿಕಾವರದಿ, ಯಂತ್ರಗಳಿಂದ ವಸ್ತುಗಳನ್ನು ಸ್ವೀಕರಿಸಬೇಕೆಂದು ಸಲಹೆ ಮಾಡಿದರು. ಇವರ ದೃಷ್ಟಿಯಲ್ಲಿ ಧ್ವನಿಗಳೇ ಸಂಗೀತ, ಮಾತುಗಳೇ ಕಾವ್ಯ. ಬಣ್ಣಗಳೇ ಶಿಲ್ಪವಾಗಿದ್ದುವು.

ದಿಗಂಬರ ಕವಿಗಳ ಮೇಲೆ ಇಂಥ ಅನೇಕ ಪ್ರತಿಭಟನೆಯ ಚಳುವಳಿಗಳು, ಧೋರಣೆಗಳು, ತಾತ್ವಿಕ ನಿಲುವುಗಳು ಪ್ರಭಾವ ಬೀರಿವೆ. **ಫ್ಯೂಚರಿಸಂ**ನಂತೆ ಪ್ರಪಂಚದ ಸಾಹಿತ್ಯದಲ್ಲಿ ಇನ್ನೂ ಹಲವಾರು ಪ್ರತಿಭಟನೆಗಳು ಚಳುವಳಿಗಳು ನಡೆದು ಹೋದವು.**ಡಾಡಾಯಿಸಂ** ಈ ಸಿದ್ಧಾಂತವು ವಿಧ್ವಂಸಕ ಮುಖಾಂತರ ದುಷ್ಟ ವ್ಯವಸ್ಥೆಯನ್ನು ಕೊನೆಗೊಳಿಸುವುದು. ಈ ಸಿದ್ಧಾಂತವು ದಿಗಂಬರ ಕವಿಗಳ ಮೇಲೆ ತುಂಬ ಪ್ರಭಾವಬೀರಿದಂತಹದು. ಮೊದಲ ಪ್ರಪಂಚ ಯುದ್ದದ ಪರಿಣಾಮವಾಗಿ ಈ **ಡಾಡಾಯಿಸಂ** ಹುಟ್ಟಿಕೊಂಡಿತು. ಈ ಯುದ್ಧದ ಪರಿಣಾಮಗಳು ಯುವಕರ ಮೇಲೆ ಬಹಳಷ್ಟು ಪರಿಣಾಮವನ್ನುಂಟು ಮಾಡಿದುವು. **ಡಾಡಾಯಿಸಂ** ಚಳುವಳಿ ೧೯೧೬ರಲ್ಲಿ ಜಾರಾ ನೇತೃತ್ವದಲ್ಲಿ ಪ್ರಾರಂಭವಾಯಿತು. ಹೊಸದನ್ನು ಕಟ್ಟುವುದು, ಶುಭ್ರವಾದ ಪ್ರಪಂಚವನ್ನು ಸಮಾಜವನ್ನು ಕಟ್ಟುವುದು ಇವರ ಮುಖ್ಯ ಧ್ಯೇಯ. ದಿಗಂಬರ ಕವಿಗಳಿಗೂ ಸಹ ಹೊಸ ಸಮಾಜವನ್ನು ಕಟ್ಟುವುದೇ ಕನಸಾಗಿತ್ತು.

೧೯೨೪ರಲ್ಲಿ ಆಂಡ್ರಬ್ರೆಟನ್ ಮುಖಂಡತ್ವದಲ್ಲಿ **ಸರ್ರಿಯಲಿಸಂ** (ಅಧಿಕ ವಾಸ್ತವಿಕವಾದ) ಧ್ಯೇಯಪತ್ರ ಪ್ರಕಟವಾಯಿತು. ಇದಕ್ಕೆ ಪ್ರೇರಕಶಕ್ತಿ ಎಂದರೆ ಫ್ರಾಯ್ಡ್‌ರವರ ಮನೋವಿಶ್ಲೇಷಣಾ ಸಿದ್ಧಾಂತ (Psycho-analysis), ಅಧಿಕ ವಾಸ್ತವಿಕತೆಗೆ ವ್ಯಕ್ತಾವ್ಯಕ್ತ ಅವಸ್ಥೆಯೇ ಪ್ರಧಾನ. ಐನಸ್ಟೀನ್ ಸಾಪೇಕ್ಷ ಸಿದ್ಧಾಂತ (Theory of Relativity) ಪ್ರಭಾವ **ಸರ್ರಿಯಲಿಸಂ** ಮೇಲೆ ಸ್ವಲ್ಪ ಮಟ್ಟಿಗೆ ಇದೆ. ಸುಪ್ತ ಪ್ರಜ್ಞೆಯನ್ನು ಸೃಜನಶಕ್ತಿಯಾಗಿ ಮಾರ್ಪಡಿಸುವ ಕಾರ್ಯವನ್ನು

ಇವರು ಕೈಗೊಂಡರು. ಇವರು ಹಳೆಯದನ್ನು ತಿರಸ್ಕರಿಸಿದರು. ವ್ಯಂಗ್ಯ, ಟೀಕೆ, ಅಪಹಾಸ್ಯಗಳನ್ನು ಬಳಸಿಕೊಂಡರು. ಮೊದಲು ಚಿತ್ರಕಲೆಯಲ್ಲಿ ಪ್ರಾರಂಭವಾದ ಈ **ಸರ್ರಿಯಲಿಸಂ** ವಾದವನ್ನು ಕಾವ್ಯಕ್ಕೂ ವಿಸ್ತರಿಸಿದರು.

ಆಂಡ್ರೆಟ್ರೈಟನ್ what is surrealism ಎನ್ನುವ ರಚನೆಯಲ್ಲಿ The diberation of Man ಎನ್ನುವುದಕ್ಕೆ ಪ್ರಾಧಾನ್ಯ ಕೊಟ್ಟಿದ್ದಾರೆ. ಅಂದರೆ ಮಾನಸಿಕವಾದ ಸ್ವಾತಂತ್ರ್ಯಕ್ಕಾಗಿ, ಸಾಮಾಜಿಕ, ರಾಜಕೀಯ ವಿಪ್ಲವಕ್ಕೆ ನಾಂದಿ ಹಾಡಬೇಕೆಂಬ ಆಶಯವಿದೆ. ತೆಲುಗು ಸಾಹಿತ್ಯದಲ್ಲಿ ಶ್ರೀ ಶ್ರೀ, ಶ್ರೀರಂಗಂ ನಾರಾಯಣಬಾಬು ಇವರ ರಚನೆಗಳಲ್ಲಿ ಅಧಿಕವಾಸ್ತವಿಕ ಲಕ್ಷಣಗಳು ಕಂಡುಬರುತ್ತವೆ. ಈ ವಾದದ ಧೋರಣೆಗಳು ದಿಗಂಬರ ಕಾವ್ಯದ ಮೇಲೆ ಪರಿಣಾಮ ಬೀರಿರುತ್ತವೆ. ಅಮೇರಿಕಾದಲ್ಲಿ ಪ್ರಾರಂಭವಾದ ಬೀಟ್ನಿಕ್ ಸಂಸ್ಕೃತಿಯ ಪ್ರಭಾವವು ಜಗತ್ತಿನ ತರುಣರ ಮೇಲೆ ತುಂಬ ಪರಿಣಾಮ ಬೀರಿದೆ. ಬೀಟ್ನಿಕ್‌ವಾದ ಹುಟ್ಟಲು ಯಾಂತ್ರಿಕ ನಾಗರಿಕತೆಯಿಂದಾದ ಅತೃಪ್ತಿ, ಮಹಾಯುದ್ಧಗಳಿಂದಾದ ಯುದ್ಧದ್ವೇಷ, ಮಾರಕಾಸ್ತ್ರಗಳ ಬಗೆಗಿರುವ ಭಯ, ಮುಂತಾದವುಗಳ ಪರಿಣಾಮಗಳಿಂದ ಆವಿರ್ಭವಿಸಿದೆ. ಈ ವಾದಗಳವರೆಗೆ ಸಂಗೀತ ಎಂದರೆ ತುಂಬ ಇಷ್ಟ. ಸ್ವೇಚ್ಛಾಜೀವನ, ಲೈಂಗಿಕ ಸ್ವಾತಂತ್ರ್ಯ, ಯಾಂತ್ರಿಕ ನಾಗರಿಕತೆಯ ಬಗ್ಗೆ ಅನುಮಾನ, ಸಮಕಾಲೀನ ವಾಸ್ತವಿಕತೆಯ ಬಗ್ಗೆ ಆಸಕ್ತಿ ಇವು ಬೀಟ್ನಿಕ್‌ವಾದದ ಲಕ್ಷಣಗಳಾಗಿವೆ. ಇವರಿಗೆ ಸಮಕಾಲೀನ ವಾಸ್ತವಿಕತೆಯ ಬಗ್ಗೆ ಹೆಚ್ಚು ಒಲವು ಈ ಎಲ್ಲಾ ವಾದಗಳು ದಿಗಂಬರ ಕಾವ್ಯದ ಮೇಲೆ ತಕ್ಕ ಮಟ್ಟಿಗೆ ಪ್ರಭಾವ ಬೀರಿವೆ.

ಭಾರತೀಯ ಸಾಹಿತ್ಯ ಹಿನ್ನೆಲೆಯಲ್ಲಿ ಅದು ಮುಖ್ಯವಾಗಿ ಹಿಂದಿಯಲ್ಲಿ ಛಾಯಾವಾದ ಎಂಬುದು ರಮ್ಯಕಾವ್ಯದ ಧೋರಣೆಯಾಗಿದ್ದು, ಅದರ ಪ್ರಕ್ರಿಯೆಯಾಗಿ ನಯೀಕವಿತಾ ಎಂಬ ಹೆಸರಿನಲ್ಲಿ ನವ್ಯಕಾವ್ಯ ಉದಯಿಸಿತು. ಇದು ಪ್ರಗತಿಶೀಲ ಮತ್ತು ಪ್ರಯೋಗಶೀಲ ಧೋರಣೆಗಳೊಂದಿಗೆ ತಾದಾತ್ಮ್ಯ ಪಡೆದು ಹೊಸ ಹಿಂದೀ ಕಾವ್ಯವನ್ನು ಸೃಷ್ಟಿಸಿತು. ಅಜೆಯ್, ಧರ್ಮವೀರ್ ಮುಂತಾದವರು ಹಿಂದೀ ಸಾಹಿತ್ಯಕ್ಕೆ ತಿರುವನ್ನು ಕೊಟ್ಟರು. **ನಕೇನ** ವಾದದ ಕವಿಗಳಾದ ನಲಿನ ವಿಲೋಚನ್, ಕೇಸರಿ ನಾರಾಯಣ, ನರೇಶ್ ತಮ್ಮ ಹೆಸರುಗಳ ಮೊದಲ ಅಕ್ಷರಗಳನ್ನೇ ಸ್ವೀಕರಿಸಿ ಕವನ ಸಂಕಲನ ಪ್ರಕಟಿಸಿದರು. ಬಂಗಾಳದ ಹಸಿವು ತಲೆಮಾರಿನ ಚಳುವಳಿ ಮುಖ್ಯವಾದದ್ದು. ಈ ಚಳುವಳಿಯ ಪ್ರಮುಖರೆಂದರೆ ಮಲಯಚೌದರಿ, ದೇವಿರಾಯ್, ಉತ್ಪಲಕುಮಾರ್ ಬಸು, ವಾಸುದೇವದಾಸ್ ಮುಂತಾದವರು. ೧೯೬೪ರಲ್ಲಿ ಈ ತರುಣ ಕವಿಗಳು ಸಾವಿರಾರು ಮುಖವಾಡಗಳನ್ನು ತಯಾರಿಸಿ ಅವುಗಳನ್ನು ಅಂಚೆ ಮೂಲಕ ಭಾರತದ ಎಲ್ಲಾ ಪ್ರದೇಶಗಳಿಗೆ ಸೇರಿರುವ ಕಲಾವಿದರಿಗೆ, ಆಡಳಿತಗಾರರಿಗೆ, ಶಿಕ್ಷಣತಜ್ಞರಿಗೆ, ಲೇಖಕರಿಗೆ ಕಳುಹಿಸಿ, ಎಲ್ಲರೂ ತಮ್ಮ ತಮ್ಮ ಮುಖವಾಡಗಳನ್ನು ತೊಲಗಿಸಿ ನೈಜಮುಖಗಳನ್ನು ತೋರಿಸಬೇಕೆಂದು ಇವರು ಸೂಚಿಸಿದರು. ಮುಂದೆ 'ಹಸಿವು ತಲೆಮಾರಿನ' ೧೬ ಜನ ತರುಣರನ್ನು ೧೯೬೪ರಲ್ಲಿ ಅಶ್ಲೀಲ ಸಾಹಿತ್ಯ ಸೃಷ್ಟಿಸಿದರೆಂಬ ಆಪಾದನೆಯ ಮೇರೆಗೆ ಸೆರೆಮನೆಗೆ ಹಾಕಲಾಯಿತು. ದೇಶದ

ಅಸಂಖ್ಯಾತ ಮೇಧಾವಿಗಳು ಇದನ್ನು ಖಂಡಿಸಿದರು. ಸಾಹಿತ್ಯದಲ್ಲಿ ಅಶ್ಲೀಲದ ಬಗ್ಗೆ ಚರ್ಚಿಸುವ ಅಧಿಕಾರ ಸಾಹಿತಿಗಳಿಗೆ ಹೊರತು ಸರ್ಕಾರಕ್ಕಿಲ್ಲ ಎಂದು ಕವಿಗಳು ವಾದಿಸಿದರು. ದಿಗಂಬರ ಕವಿಗಳು ಹಸಿವು ತಲೆಮಾರಿನ ಕವಿಗಳು ಒಟ್ಟೊಟ್ಟಿಗೆ ಕವನಗಳನ್ನು ರಚಿಸಿದರು. ಹಾಗಾಗಿ ಇವರ ಕವನಗಳಲ್ಲಿ ಅನನ್ಯತೆ ಕಂಡುಬರುತ್ತದೆ.

೨೦ನೇ ಶತಮಾನದ ಭಾರತ ಸ್ವಾತಂತ್ರ್ಯ ಚಳುವಳಿ, ಆಂಧ್ರಚಳುವಳಿ, ತೆಲಂಗಾಣ ಸಹಯೋಗದ ರೈತಾಂಗ ಜನರ ಹೋರಾಟ ಮೊದಲಾದ ಸಾಮಾಜಿಕ, ರಾಜಕೀಯ, ಚಳುವಳಿಗಳು ಬಹಳಷ್ಟು ಹೊರಬಂದವು. ಹೆಚ್ಚು ಕಡಿಮೆ ಎಲ್ಲಾ ಪ್ರಜೆಗಳ ಚಳುವಳಿಗಳು ಪ್ರಜೆಗಳ ನೇತೃತ್ವದಲ್ಲಿ ನಡೆದು ಆಂಧ್ರ ಪ್ರದೇಶದಲ್ಲಿ ವಿಜಯವನ್ನು ಸಾಧಿಸಿದರು. ಭಾರತದೇಶಕ್ಕೆ ೧೯೪೭ರಲ್ಲಿ ಸ್ವಾತಂತ್ರ್ಯ ಬಂದಿತು. ಸ್ವಲ್ಪ ಕಾಲದ ನಂತರ ಆಂಧ್ರರಾಜ್ಯ ೧೯೫೩ರಲ್ಲಿ ಉದಯಿಸಿತು. ತೆಲಂಗಾಣ ಪ್ರಾಂತವು ನಿಜಾಂ ನಿರಂಕುಶದಿಂದ ವಿಮುಕ್ತಿ ಪಡೆಯಿತು. ಆಂಧ್ರಪ್ರದೇಶ ಎಂಬ ರಾಜ್ಯವಾಗಿ ೧೯೫೬ರಲ್ಲಿ ಏರ್ಪಟ್ಟಿತು. ಆಂಧ್ರಪ್ರದೇಶದಲ್ಲಿ ಪ್ರಜೆಗಳ ರಾಜ್ಯ ಬರುತ್ತದೆಂಬ ಪ್ರಜೆಗಳ ಆಶಯವಾಗಿತ್ತು. ಆದರೆ ಪ್ರಜೆಗಳಿಗೆ ಕೊನೆಯವರೆಗೆ ಅವರ ಆಶಯಗಳು ನನಸಾಗಲಿಲ್ಲ. ಸಮಾಜದಲ್ಲಿ ಅನೀತಿ, ಆಶ್ರಿತಜನರ ಪಕ್ಷಪಾತ, ಲಂಚ, ಮೋಸ, ವಂಚನೆ ವಿಜೃಂಭಿಸಿದವು. ಇನ್ನೊಂದು ಕಡೆ ರಾಜಕೀಯ ನಾಯಕರ ಕ್ರೂರವಾದ ಕೃತ್ಯಗಳು ಪ್ರತಿಯೊಂದು ವಿಷಯಗಳಲ್ಲಿ ಆಂಧ್ರಪ್ರದೇಶದಲ್ಲಿ ಹೆಚ್ಚಾದವು. ಈ ಎಲ್ಲಾ ಪರಿಣಾಮಗಳು ತೆಲುಗು ಸಾಹಿತ್ಯದ ಮೇಲೆ ಪ್ರಭಾವ ಬೀರಿದೆ. ಕವಿಗಳು ದೇಶದ ಸ್ಥಿತಿಗತಿಗಳ ಬಗೆಗೆ ಅಸಂತೃಪ್ತಿ ವ್ಯಕ್ತ ಪಡಿಸಿದರು. ದಿಗಂಬರ ಕಾವ್ಯದ ಮೊದಲ ಸಂಪುಟ ಬರುವ ಮೊದಲು ರಾತ್ರಿ ಎನ್ನುವ ಕವನ ಸಂಕಲನವು ಹೊರಬಂದಿತು. ಈ ಸಂಕಲನದಲ್ಲಿ ಕೇಶವರಾವು, ವೆಂಕಟೇಶ್ವರರಾವು, ಯಾದವರೆಡ್ಡಿ ಇವರು ಕವಿತೆಗಳನ್ನು ರಚಿಸಿ ತೆಲುಗು ಸಾಹಿತ್ಯದಲ್ಲಿ ಸಂಚಲನವುಂಟು ಮಾಡಿದರು. ದಿಗಂಬರ ಕವಿಗಳ ಕಾವ್ಯದಲ್ಲಿ ಸೌಂದರ್ಯವಾಗಲಿ, ಒಳ್ಳೆಯ ಪದಗಳಾಗಲಿ ಕಾಣುವುದಿಲ್ಲ. ದಿಗಂಬರ ಕವಿಗಳು ಪ್ರಜೆಗಳ ಅಂತರಂಗದಲ್ಲಿ ವ್ಯಾಪಿಸಿದ ಬೇಸರವನ್ನು ವ್ಯಕ್ತಪಡಿಸಿದರು. ಸಮಾಜದೊಳಗಿನ, ರಾಜಕೀಯದೊಳಗೆ ಇರುವ ಕೊಳೆಯನ್ನು ಹೊರಗೆಡವಿದರು.

ದಿಗಂಬರ ಕವಿಗಳು ದಿಗಂಬರ ಕಾವ್ಯಪಂಥ ಹುಟ್ಟುವುದಕ್ಕಿಂತ ಮೊದಲೇ ತಮ್ಮ ಕಾವ್ಯ ರಚನೆಯನ್ನು ಪ್ರಾರಂಭಿಸಿದ್ದರು. ದೇಶದ ಸಮಾಜದ ಮತ್ತು ವ್ಯಕ್ತಿಯ ಶುದ್ಧಿಕರಣವೇ ದಿಗಂಬರ ಕಾವ್ಯದ ಗುರಿ. ಸಮಾಜದ ಹೊಲಸನ್ನು ಹುಳುಕುಗಳನ್ನು ಬಯಲಿಗೆಳೆಯಲು ಮಾನವನ ಆತ್ಮವನ್ನು ಮುಚ್ಚಿದ ಶೋಷಣೆಯ ಸೋಗಿನ ಬಟ್ಟೆಯನ್ನು ಬಿಚ್ಚಲು ದಿಗಂಬರ ಕವಿಗಳು ಮಾನಸಿಕ ಮಡಿವಂತಿಕೆಯನ್ನು ಕಿತ್ತೊಗೆದು ಭಾಷೆಯ ಮಡಿವಂತಿಕೆಯನ್ನು ದಾಟಿದರು. ಇಂಥ ತೀವ್ರವಾದ ಚುರುಕು ಅಂದಿನ ತೆಲುಗು ಕಾವ್ಯಕ್ಕೆ ಅವಶ್ಯವಿತ್ತು. ಮುಂದೆಯೂ ಸಹ ದಿಗಂಬರ ಕವಿಗಳ ಧೈರ್ಯ, ಮಾನಸಿಕ ಸ್ವಾತಂತ್ರಗಳು ಆದರ್ಶವಾದವು. ಮುಂದಿನ ಚಳುವಳಿಗಳಲ್ಲಿ ದಿಗಂಬರ ಕವಿಗಳು

ಕ್ರಿಯಾತ್ಮಕವಾಗಿ ಭಾಗವಹಿಸಿದರು. ದಿಗಂಬರ ಕಾವ್ಯ ಮೂರು ವರ್ಷಗಳವರೆಗೆ ಉನ್ನತ ಮಟ್ಟಕ್ಕೇರಿ, ತನ್ನ ತೀವ್ರತೆ ಮತ್ತು ಪ್ರಭಾವಗಳಿಂದ ವಿಶಿಷ್ಟವಾಗಿ ಕಾಣಿಸಿತು.

ದಿಗಂಬರ ಕವಿಗಳ ಮೊದಲ ಸಂಪುಟ ೧೯೬೫ರಲ್ಲಿ ಹೊರಬಂತು. ದಿಗಂಬರ ಕಾವ್ಯದ ಮೇಲೆ ವಿದೇಶದ ಪ್ರಭಾವವಿಲ್ಲ ನಾವು ನಾವೇ ಆಗಿ ಬರೆಯುತ್ತಿದ್ದೇವೆಂದು ದಿಗಂಬರ ಕವಿಗಳು ಪ್ರಕಟಿಸಿದ್ದಾರೆ. ತೆಲುಗು ಸಾಹಿತ್ಯದಲ್ಲಿ ಹೊಸ ಛಾಪನ್ನು ಮೂಡಿಸಿದ ದಿಗಂಬರ ಕವಿಗಳು ತಮ್ಮ ಹೆಸರುಗಳನ್ನು ಗುಪ್ತವಾಗಿಟ್ಟುಕೊಂಡು ಕಾವ್ಯವನ್ನು ರಚಿಸಿದರು.

| | |
|---|---|
| ನಗ್ನಮುನಿ | - ಎಂ. ಎಚ್. ಕೇಶವರಾವು |
| ನಿಖಿಲೇಶ್ವರ | - ಯಾದವರೆಡ್ಡಿ |
| ಜ್ವಾಲಾಮುಖಿ | - ವೀರರಾಘವಚಾರ್ಯುಲು |
| ಚೆರಬಂಡರಾಜು | - ಬದ್ದಂ ಭಾಸ್ಕರ ರೆಡ್ಡಿ |
| ಭೈರವಯ್ಯ | - ಮನಮೋಹನ ಸಹಾಯ್ |
| ಮಹಾಸ್ವಪ್ನ | - ಕಮ್ಮಿಶೆಟ್ಟಿ ವೆಂಕಟೇಶ್ವರರಾವು |

ಈ ಆರು ಜನ ತರುಣ ಕವಿಗಳದು ಭೌತಿಕ ದಿಗಂಬರತ್ವವಲ್ಲ. ಇವರದು ಮಾನಸಿಕ ದಿಗಂಬರತ್ವ. ಈ ಆರು ಜನ ಕವಿಗಳು ದಿಗಂಬರ ಕವಿಗಳಾಗಿ ಕಾವ್ಯ ರಚಿಸಿದರು. ಇವರು ೧೯೬೫-೧೯೬೮ರ ಮಧ್ಯ ಅಂದರೆ ಸುಮಾರು ಮೂರು ವರ್ಷಗಳಲ್ಲಿ ಕವನ ಸಂಕಲನಗಳನ್ನು ಪ್ರಕಟಿಸಿ ತೆಲುಗು ಸಾಹಿತ್ಯ ರಂಗದಲ್ಲಿ ಸಂಚಲನವನ್ನುಂಟು ಮಾಡಿದರು.

ಈ ಕವಿಗಳು ಮೊದಲ ಕಾವ್ಯಕ್ಕೆ ಯಾವ ಹೆಸರನ್ನು ಇಡಬೇಕೆಂದು ತೀವ್ರವಾಗಿ ಎಲ್ಲರೂ ವಿಚಾರ ಮಾಡಿದರು. ನಿಖಿಲೇಶ್ವರರು ದಿಗಂಬರ ಕವಿಗಳನ್ನು 'ಅಗ್ನೆಯ ಕವಿಗಳು' ಎಂದು ಹೆಸರಿಸಲು ಸೂಚಿಸಿದರು. ಆದರೆ ನಗ್ನಮುನಿ ಮೊದಲು 'ಬಜಾರು ಕವಿಗಳು ' ಎಂಬ ಹೆಸರನ್ನು ಸೂಚಿಸಿ, ನಂತರ "ದಿಗಂಬರ ಕವಿಗಳು' ಎಂಬ ಹೆಸರನ್ನು ಸೂಚಿಸಿದರು. ಉಳಿದ ಎಲ್ಲಾ ಕವಿಗಳು 'ದಿಗಂಬರ ಕವಿಗಳು' ಎಂಬ ಹೆಸರನ್ನು ಅಂಗೀಕರಿಸಿದರು. ಅಲ್ಲಿಂದ ಈ ಕವಿಗಳು ಆಂಧ್ರ ಪ್ರದೇಶದಲ್ಲಿ ದಿಗಂಬರ ಕವಿಗಳು ಎಂದು ಪ್ರಸಿದ್ಧಿ ಪಡೆದರು.

ಈ ದಿಗಂಬರ ಕವಿಗಳು ಕೋಪೋದ್ರಿಕ ತರುಣ ಕವಿಗಳು. ತಮ್ಮ ಕಾವ್ಯವನ್ನು ಆಂದೋಲನದ, ಕಾವ್ಯರೂಪದಲ್ಲಿ ಪ್ರಕಟಿಸಬೇಕೆಂದು ತಿಳಿದು ಇದು ದಿಗಂಬರ ಶಕ; ನಾವು ದಿಗಂಬರ ಕವಿಗಳು, ನಮ್ಮದು ದಿಗಂಬರ ಕವಿತ, ಇದು ಸಾಹಿತ್ಯದಲ್ಲಿ ದಿಗಂಬರ ಕಾವ್ಯ ಚಳುವಳಿ ಎಂದು ಹೇಳಿ ತಮ್ಮ ಕಾವ್ಯಕ್ಕೆ 'ದಿಕ್ಕು'ಗಳೆಂದು ಕರೆದರು. ಹಳೆಯ ಕಾವ್ಯ ರಚನ ಪದ್ದತಿ, ಹಳೆಯ ಋತುಗಳ ಹೆಸರು, ಸಂವತ್ಸರಗಳ ಹೆಸರುಗಳು ಉಪಯೋಗಕ್ಕೆ ಬರುವುದಿಲ್ಲ. ಆದ್ದರಿಂದ ಹೊಸ

ಹೆಸರುಗಳಿಂದ ಪ್ರದರ್ಶಿಸಿ ಕವಿತಾ ರಂಗದಲ್ಲಿ ಆಧುನಿಕ ಕವಿತಾದಲ್ಲಿ ಒಂದು **ಷಾಕ್ ಟ್ರೀಟ್‌ಮೆಂಟ್** ಆಯಿತು. ದಿಗಂಬರ ಕವಿಗಳು ಸೃಷ್ಟಿಸಿದ ಹೊಸ ಹೆಸರುಗಳು ಇವು:

**ದಿಗಂಬರ ಶಕೆ**

| | | |
|---|---|---|
| **ಸಂವತ್ಸರಗಳು:** | ಆರು: | ನಗ್ನನಾಮ ಸಂವತ್ಸರ |
| | | ನಿಖಿಲೇಶ್ವರ ನಾಮ ಸಂವತ್ಸರ |
| | | ಜ್ವಾಲಾಮುಖಿ ನಾಮ ಸಂವತ್ಸರ |
| | | ಚೆರಬಂಡರಾಜ ನಾಮ ಸಂವತ್ಸರ |
| | | ಭೈರವಯ್ಯ ನಾಮ ಸಂವತ್ಸರ |
| | | ಮಹಾಸ್ವಪ್ನ ನಾಮ ಸಂವತ್ಸರ |
| **ಋತುಗಳು:** | ಆರು: | ಆಶೆ ಋತು |
| | | ತಪನ ಋತು |
| | | ಅಶ್ರು ಋತು |
| | | ಮದಿರ ಋತು |
| | | ವಿರಹ ಋತು |
| | | ವಿಷಾದ ಋತು |
| **ವಾರಗಳು:** | ಆರು: | ಸ್ನೇಹವಾರ |
| | | ವಿಶೃಂಕಲವಾರ |
| | | ಕ್ರಾಂತಿವಾರ |
| | | ಸೃಜನ ವಾರ |
| | | ವಿಕಾಸ ವಾರ |
| | | ಅನಂತ ವಾರ''[3] |

ಈ ರೀತಿಯಾಗಿ ಕನಿಷ್ಠ ಆರು ಸಂಪುಟಗಳನ್ನು ತಮ್ಮ ಕಾವ್ಯವನ್ನು ಹೊರಹೊಮ್ಮಿಸುತ್ತೇವೆಂದು ಭಾವಿಸಿದ್ದರು. ಆದರೆ ಮೂರು ಸಂಪುಟಗಳನ್ನು ಮಾತ್ರ ಹೊರತರಲು ಸಫಲರಾದರು. ಉಳಿದ ಮೂರು ಸಂಪುಟಗಳು ಕನಸಾಗೆ ಉಳಿದವು.

''೧೯೬೫ರ ಮೇ ೬ರಂದು ಮಧ್ಯರಾತ್ರಿ ೧೨ ಗಂಟೆಗೆ ಹೈದರಾಬಾದಿನಲ್ಲಿ ''ನಾಂಪಲ್ಲಿ ಪಾಂಡು'' ಎನ್ನುವ ರಿಕ್ಷಾ ಕಾರ್ಮಿಕನಾದ ದಲಿತನಿಂದ ಮೊದಲ ಸಂಕಲನವನ್ನು

ಬಿಡುಗಡೆಗೊಳಿಸಿದರು. ಇದನ್ನು ದಿಗಂಬರ ಶಕೆ ನಗ್ನನಾಮ ಸಂವತ್ಸರದಲ್ಲಿ ಅಶ್ರು ಋತುವಿನಲ್ಲಿ ಬಿಡುಗಡೆ ಮಾಡಿದರು.

೧೯೬೬ರ ಡಿಸೆಂಬರ್ ೮ರಂದು ವಿಜಯವಾಡದಲ್ಲಿ ''ಜಂಗಾಲಚಟ್ಟ'' ಎನ್ನುವ ಹೋಟೆಲ್ ಕಾರ್ಮಿಕನಿಂದ ಮಧ್ಯರಾತ್ರಿಯಲ್ಲಿ ಎರಡನೇ ಕವನ ಸಂಕಲನವನ್ನು ಬಿಡುಗಡೆಗೊಳಿಸಿದರು. ಇದನ್ನು ದಿಗಂಬರ ಶಕೆ, ನಿಖಿಲೇಶ್ವರನಾಮ ಸಂವತ್ಸರಲ್ಲಿ, ಮದಿರ ಋತುವಿನಲ್ಲಿ ಬಿಡುಗಡೆಗೊಳಿಸಿದರು.

೧೯೬೮ರ ಜೂನ್‌ನಲ್ಲಿ ವಿಶಾಖಪಟ್ಟಣದಲ್ಲಿ ''ಎಡಮನೂರಿಯಶೋಭ '' ಎನ್ನುವ ಭಿಕ್ಷುಕನಿಂದ ಮೂರನೇ ಕವನ ಸಂಕಲನವನ್ನು ಬಿಡುಗಡೆಗೊಳಿಸಿದರು. ಇದನ್ನು ಜ್ವಾಲಾನಾಮ ಸಂವತ್ಸರ ವಿಷಾದ ಋತುವಿನಲ್ಲಿ ಬಿಡುಗಡೆಗೊಳಿಸಿದರು.

ಈ ಮೂರು ಕವಿತಾ ಸಂಪುಟದಲ್ಲಿ ದಿಗಂಬರ ಕವಿಗಳು ರಚಿಸಿದ ಕವಿತೆಗಳು ಒಟ್ಟು ೯೩. ಅದರಲ್ಲಿ ನಗ್ನಮುನಿ ೨೫; ನಿಖಿಲೇಶ್ವರ ೨೪; ಜ್ವಾಲಾಮುಖಿ ೬; ಚೆರಬಂಡರಾಜು ೨೦; ಭೈರವಯ್ಯ ೧೨; ಮಹಾಸ್ವಪ್ನ ೬; ಇದಕ್ಕಿಂತ ಮೊದಲು ನಗ್ನಮುನಿ ''ಉದಯಿಂಚನಿ ಉದಯಾಲು '' ಎನ್ನುವ ಕವಿತಾ ಸಂಪುಟವನ್ನು ಪ್ರಕಟಿಸಿದ್ದರು.''[೪]

ಈ ಮೂರು ಕವನ ಸಂಕಲನದಿಂದ ದಿಗಂಬರ ಕವಿಗಳು ತೆಲುಗು ಸಾಹಿತ್ಯ ಪ್ರಪಂಚಕ್ಕೆ ದೊಡ್ಡ ಷಾಕ್ ಟ್ರೀಟ್‌ಮೆಂಟ್ ಕೊಟ್ಟರು. ರಾಜಕೀಯ ನಿನಾದಕ್ಕಾಗಿ ಉದ್ದೇಶಿಸಿದ್ದು ಅಲ್ಲದೆ, ಈ ದೇಶದಲ್ಲಿ ಈ ಪ್ರಪಂಚದಲ್ಲಿ ಉಸಿರಾಡುವ ಪ್ರತಿ ಮಾನವರ ಅಸ್ತಿತ್ವಕ್ಕಾಗಿ ತಾಪದಿಂದ ಆತನ ಭವಿಷ್ಯವನ್ನು ಚಿಂತಿಸಿ ಬಿಕ್ಕಿ ಬಿಕ್ಕಿ ಅತ್ತುದ್ದು ಹುಚ್ಚೆದ್ದು ಪ್ರವಚಿಸಿದ್ದು ಕಾವ್ಯವೆಂದು ತಮ್ಮ ಮೊದಲ ಸಂಪುಟದಲ್ಲಿ ಹೇಳಿದ್ದಾರೆ.

ಎರಡನೇ ಸಂಪುಟ ನಿಖಿಲನಾಮ ಸಂವತ್ಸರದ ಮದಿರ ಋತುವಿನಲ್ಲಿ ದುರ್ಭರವಾಗಿ, ಹೇಯವಾಗಿ, ಚಾಂಡಲವಾಗಿದ್ದ ಆಂಧ್ರಪ್ರದೇಶವೆಂಬ ಹೊಲಸು ಚರಂಡಿನೊಳಗಿಂದ ದಿಗಂಬರ ಕವಿಗಳ ಹೆಸರಿನಲ್ಲಿ ಕಾವ್ಯವು ಎರಡನೇ ಸಂಪುಟವಾಗಿ ಹೊರಬಂದಿದೆ.

ಮೂರನೇ ಸಂಪುಟದಲ್ಲಿ ಸಾಮಾಜಿಕ ಸಮಸ್ಯೆಗಳ ಪರಿಹಾರಕ್ಕೆ ಸಾಯುಧ ಹೋರಾಟ ಮಾರ್ಗ ಸೂಚಿತವಾಗಿದೆ. ಈ ದೇಶದಲ್ಲಿ ಇಪ್ಪತ್ತು ವರುಷ ಸ್ವಾತಂತ್ರ್ಯದಲ್ಲಿ (೧೯೪೭-೧೯೬೭) ಭಯಂಕರವಾಗಿ ವಿಜೃಂಭಿಸಿದ ಕುಲಮತ ದುರಂಹಕಾರಕ್ಕೆ ಧನಮದದಲ್ಲಿ ಯಥೇಚ್ಛವಾಗಿ ಬಳಸಿಕೊಳ್ಳುತ್ತಿದ್ದ ಗುಂಡಾಯಿಸಂಗೆ, ಸಿನಿಮಾರೂಪದಲ್ಲಿ ಈಜಾಡುತ್ತಿದ್ದ ಯುವಜನಾಂಗವು, ಬಲಹೀನಕ್ಕೆ ಸ್ತೋತ್ರ ಪಾಠದಲ್ಲಿ ಕಡಾಯಿಯಲ್ಲಿ ಬಿದ್ದುಹೋದ, ಪತ್ರಿಕಾ ಲೋಕದ ಹಡಗು ಜೀವನಕ್ಕೆ ಮೇಧಾವಿಗಳ ಅನಾಸಕ್ತತೆ, ನಾಯಕರುಗಳ ಗೋಸುಂಬೆ ಆದರ್ಶಕ್ಕೆ, ಪದವಿ,

ವ್ಯವಹಾರಗಳಿಗೆ ಇಂದಿನ ಈ ದುಷ್ಟ ವ್ಯವಸ್ಥೆಗೆ ಪ್ರತಿಭಟನೆಯನ್ನು ಮೂರನೇ ಕವನ ಸಂಕಲನದಲ್ಲಿ ದಿಗಂಬರ ಕವಿಗಳು ಮಾಡಿದ್ದಾರೆ.

ಈ ಮೂರು ಕವನ ಸಂಕಲನಗಳು ಬಂದ ನಂತರ ಮಹಾಸ್ವಪ್ನ ಭೈರವಯ್ಯ, ದಿಗಂಬರ ಕವಿಗಳ ಸಂಘದಿಂದ ಹೊರಗೆ ಬಂದರು. ಉಳಿದ ನಾಲ್ಕು ಜನ ಕವಿಗಳು ನಗ್ನಮುನಿ, ನಿಖಿಲೇಶ್ವರ, ಚೆರಬಂಡರಾಜು, ಜ್ವಾಲಾಮುಖಿ ವಿರಸಂ (೧೯೭೦) ರಲ್ಲಿ ಸೇರಿದರು. ಆರುಜನ ಹೆಸರಿನಲ್ಲಿ ಇದ್ದ ಆರು ಸಂಪುಟಗಳು ಹೊರಗೆ ಬಾರದೆ ಹಾಗೆಯೇ ಉಳಿದವು ಆದರೆ, ದಿಗಂಬರ ಶಕೆ ಮಾತ್ರ ನಿಸ್ತೇಜವಾಯಿತು.

ದಿಗಂಬರ ಕವಿಗಳು ತಮ್ಮ ಉದ್ದೇಶಕ್ಕೆ ಅನುಗುಣವಾಗಿ ಕಾವ್ಯ ರಚನೆಯನ್ನು ಮಾಡಿದ್ದಾರೆ. ಅದು ವಸ್ತು, ಆಶಯ, ಶೈಲಿ ಎಲ್ಲಾ ಪ್ರಕ್ರಿಯೆಯಲ್ಲಿ ಅನನ್ಯವಾಗಿದೆ. ತೆಲುಗು ದಿಗಂಬರ ಕವಿಗಳ ಕಾವ್ಯವನ್ನು ಮುಂದೆ ಮುಂದೆ ವಿಶ್ಲೇಷಿಸಲಾಗುವುದು.

**ನಗ್ನಮುನಿ**

ದಿಗಂಬರ ಕವಿಗಳನ್ನು ಒಟ್ಟುಗೂಡಿಸಿ ದಿಗಂಬರ ಕಾವ್ಯ ಉದಯಿಸುವಲ್ಲಿ ನಗ್ನಮುನಿಯ ಪಾತ್ರ ಅತ್ಯಂತ ಮಹತ್ವದ್ದು. ನಗ್ನಮುನಿಯೆಂಬ ಕಾವ್ಯನಾಮದಿಂದ ಪ್ರಸಿದ್ಧರಾದ ಶ್ರೀ ಮಾನೆಪಲ್ಲಿ ಹೃಷಿಕೇಶವರಾವು ಗುಂಟೂರು ಜಿಲ್ಲೆಯ ತೆನಾಲಿಯಲ್ಲಿ ೧೫ನೇ ಮೇ ೧೯೪೦ರಲ್ಲಿ ಜನಿಸಿದರು. ಇವರ ತಾಯಿತಂದೆಯವರು ಲಕ್ಷ್ಮಿಶಾಂತಮ್ಮ, ಸಂಗಮೇಶ್ವರ ಕವಿ. ಇವರ ಬಾಲ್ಯ ಜೀವನ ಮಚಲಿಪಟ್ಟಣಂನಲ್ಲಿ ಕಳೆದರು. ಹೈದರಾಬಾದಿನಲ್ಲಿ ವಿದ್ಯಾಭ್ಯಾಸ ಮಾಡಿದ ಅವರು ಆಂಧ್ರಪ್ರದೇಶದ ಲೆಜಿಸ್ಲೇಟೀವ್ ಅಸೆಂಬ್ಲಿಯಲ್ಲಿ ವರದಿಗಾರರಾಗಿ ೧೯೫೮ರಲ್ಲಿ ನೇಮಕಗೊಂಡರು. ಬಳಿಕ ಅಸಿಸ್ಟೆಂಟ್ ಸೆಕ್ರೆಟರಾಗಿ, ಡೆಪ್ಯೂಟಿ ಸೆಕ್ರೆಟರಿಯಾಗಿ, ಜಾಯಿಂಟ್ ಸೆಕ್ರೆಟರಿಯಾಗಿ ಕಾರ್ಯ ನಿರ್ವಹಿಸಿದರು. ೧೯೯೮ರಲ್ಲಿ ವೃತ್ತಿಯಿಂದ ನಿವೃತ್ತಿ ಪಡೆದರು.

ನಗ್ನಮುನಿಯ ಮೊದಲ ಕವನ ''ಸೌಂದರ್ಯಪು ಸ್ವಗತಂ'' ೧೯೫೭ ನವೆಂಬರ್‌ನಲ್ಲಿ ತೆಲುಗು ಸ್ವತಂತ್ರ ಪತ್ರಿಕೆಯಲ್ಲಿ ಪ್ರಕಟವಾಯಿತು. ನಂತರ ಭಾರತಿ, ಆಂಧ್ರಪತ್ರಿಕ, ಆಂಧ್ರಪ್ರಭ, ಗೋಲ್ಕೊಂಡ ಪತ್ರಿಕ, ಕೃಷ್ಣಾಪತ್ರಿಕ ಮೊದಲಾದ ಪತ್ರಿಕೆಗಳಲ್ಲಿ ಅವರ ಕವನಗಳು, ಕಥೆಗಳು ಪ್ರಕಟವಾದವು. ೧೯೫೯ರಲ್ಲಿ ಪ್ರಾರಂಭವಾದ ಆಕಾಶವಾಣಿಯಲ್ಲಿ ಕವಿತ, ಕಥೆ, ಅನುವಾದಗಳು ಸಂದರ್ಶನಗಳು ಪ್ರಸಾರವಾಗಿವೆ. ಅದೇ ವರ್ಷದಲ್ಲಿ ಕೆಲವು ವರ್ಷಗಳವರೆಗೆ ಆಕಾಶವಾಣಿಯಲ್ಲಿ ಪ್ರಸಾರವಾದ ನಾಟಕದಲ್ಲಿ, ಕಿರುನಾಟಕದಲ್ಲಿ ಪಾಲ್ಗೊಂಡಿದ್ದಾರೆ. ೧೯೬೦ರ ದಶಕದ ಮೊದಲಲ್ಲಿ ಆಂಧ್ರಪ್ರದೇಶದ ಆಡಳಿತದ ರಾಷ್ಟ್ರೀಯ ನಾಟಕದ ಸ್ಪರ್ಧೆಯಲ್ಲಿ ಶಾಸನಸಭೆ ಕಾರ್ಯಾಲಯದ ವತಿಯಿಂದ ಪ್ರದರ್ಶಿಸಿದ **ಚತುರಂಗಂ** ನಾಟಕದಲ್ಲಿ ಉತ್ತಮ ನಟನಾಗಿ ಹೆಸರು ಪಡೆದರು. ನಂತರ ಇವರ ಮೊದಲ ಕವಿತಾ ಸಂಪುಟ ಉದಯಿಂಚನಿ ಉದಯಾಲು ೧೯೬೨ರಲ್ಲಿ

ಪ್ರಕಟವಾಯಿತು. ೧೯೬೫ರಲ್ಲಿ ಎಲ್ಲ ಆರುಜನ ಕವಿಗಳು ದಿಗಂಬರ ಕವಿತಾ ಚಳುವಳಿ ಪ್ರಾರಂಭಿಸಿದರು.

ನಂತರ ೧೯೭೦ರಲ್ಲಿ ಸ್ಥಾಪಿತವಾದ **ವಿರಸಂ** ಸದಸ್ಯರಲ್ಲಿ ಇವರೊಬ್ಬರು. **ತೂರ್ಪುಗಾಲಿ** ಕವಿತಾ ಸಂಪುಟ ೧೯೭೨ರಲ್ಲಿ ಪ್ರಕಟಗೊಂಡಿತು. ನಗ್ನಮುನಿ ಕಥಲು ೧೬ ಕಥೆಗಳ ಸಂಪುಟ ೧೯೭೩ರಲ್ಲಿ ಪ್ರಕಟವಾದವು. ಹಾಗೂ ಉನ್ನವ ಲಕ್ಷ್ಮಿನಾರಾಯಣ ಪಂತುಲುರವರ **ಮಾಲಪಲ್ಲಿ** ಕಾದಂಬರಿ ನಾಟಕವಾಗಿ ರೂಪಾಂತರಿಸಿ ೧೯೭೪ರಲ್ಲಿ ಪ್ರದರ್ಶಿತವಾಯಿತು. ಇದು ಸುಮಾರು ನೂರು ಪ್ರದರ್ಶನ ಕಂಡಿತು.

ಉನ್ನವ ಲಕ್ಷ್ಮಿನಾರಾಯಣ ಪಂತುಲುರವರ ಮಾಲಪಲ್ಲಿ ಕಾದಂಬರಿಯ ನಾಟಕವನ್ನು ಆಕಾಶವಾಣಿ ಸಲುವಾಗಿ ನಾಟಕವನ್ನು ೧೯೭೫ರಲ್ಲಿ ರಚಿಸಿದರು. ೧೮೭೫ರ ಏಪ್ರಿಲ್‌ನಲ್ಲಿ ಜರುಗಿದ **ಪ್ರಪಂಚ ತೆಲುಗು ಮಹಾಸಭೆಯ** ಸಮಯದಲ್ಲಿ ಬಂಧನಕ್ಕೆ ಒಳಗಾದರು. ೩೮ಗಂಟೆಗಳ ನಂತರ ಬಿಡುಗಡೆ ಗೊಳಿಸಿದರು. ೧೯೭೫ಜೂನ್ ೨೫ ಮಧ್ಯರಾತ್ರಿ ದೇಶದಲ್ಲಿ ತುರ್ತುಪರಿಸ್ಥಿತಿ ಘೋಷಿಸಿದಾಗ ನಗ್ನಮುನಿಯವರ ರಚನೆಗಳ ಮೇಲೆ ಮತ್ತು ಉಪನ್ಯಾಸಗಳ ಮೇಲೆ ಸರಕಾರ ಹೆಚ್ಚು ನಿಗಾವಹಿಸಿತು. ೧೯೭೫ರ ಡಿಸೆಂಬರ್ ೨೨ ರಂದು ಇವರನ್ನು ಉದ್ಯೋಗದಿಂದ ಅಮಾನತು ಗೊಳಿಸಿದರು. ನಂತರ ಲೋಕಸಭೆಗೆ ಚುನಾವಣೆ ನಡೆದು ಕೇಂದ್ರದಲ್ಲಿ ಜನತಾ ಸರಕಾರ ಅಧಿಕಾರಕ್ಕೆ ಬಂದ ಮೇಲೆ ಮತ್ತೆ ಉದ್ಯೋಗದಲ್ಲಿ ನೇಮಕವಾದರು. ವಿಲೋಮ ಕಥೆಗಳನ್ನು ತುರ್ತುಪರಿಸ್ಥಿತಿಯ ಕಾಲದಲ್ಲಿ ರಚಿಸಿದರು. ಇದರ ಮೊದಲ ಮುದ್ರಣ೧೯೭೭ರಲ್ಲಿ ಆಯಿತು.

ಆಧುನಿಕ ಮಹಾಕಾವ್ಯ ಕೊಯ್ಯಗುರ್ರಂ. ಈ ಕಾವ್ಯವು ಸಾಮಾಜಿಕ, ರಾಜಕೀಯ ನೆಲೆಯಿಂದ ಹೊರಬಂದ ಕಾವ್ಯವಾಗಿದೆ. ಇದು ೧೯೮೦ರಲ್ಲಿ ಮೊದಲ ಮುದ್ರಣ ಪಡೆಯಿತು. ಈ ಕಾವ್ಯವು ರಷ್ಯನ್, ಹಿಂದಿ, ಇಂಗ್ಲಿಷ್ ಪಂಜಾಬಿ, ಕನ್ನಡ, ತಮಿಳು ಭಾಷೆಗಳಲ್ಲಿ ಅನುವಾದವಾಗಿದೆ. ಈ ಕಾವ್ಯವು ಇನ್ನೂ ಚರ್ಚೆಯಾಗುತ್ತಲೇ ಇದೆ.

ಮರೋಚರಿತ್ರ, ಎಂ. ಎಲ್. ಎ. ಏಡುಕೊಂಡಲು, ತ್ರಿಶೂಲಂ, ಉದಯಂ ಮೊದಲಾದ ಸಿನಿಮಾಗಳಿಗೆ ಮೂಲ ಕಥೆಗಳನ್ನು ಬರೆದರು. ಇವರು ಸಿನಿಮಾ, ನಾಟಕ ರಂಗದಲ್ಲಿ, ಸಾಕಷ್ಟು ಸೇವೆಯನ್ನು ಸಲ್ಲಿಸಿದ್ದಾರೆ. ಆಂಧ್ರಪ್ರಭ ದಿನಪತ್ರಿಕೆಯಲ್ಲಿ ಚೆದುಮಾಟ ಶೀರ್ಷಿಕೆಯಲ್ಲಿ ಪ್ರತಿವಾರ ಲಘುಪ್ರಬಂಧ ಪ್ರಕಟಿಸಿದ್ದಾರೆ. **ಉದಯಂ** ದಿನ ಪತ್ರಿಕೆಯಲ್ಲಿ **ಅಕ್ಷರಯುಧಂ** ಶೀರ್ಷಿಕೆಯಲ್ಲಿ ವಾರವೂ ಲಘು ಪ್ರಬಂಧವನ್ನು ಬರೆದಿದ್ದಾರೆ. **ಇಕ್ಕಡ ಕಲಲು ಅಮ್ಮಬಡುನು** ನಾಟಕ ರಚಿಸಿದರು. ಇದನ್ನು ಥಿಯೇಟರ್ ಆಫ್ ಆರ್ಟ್ಸ್ ವಿದ್ಯಾರ್ಥಿಗಳು ಪ್ರದರ್ಶಿಸಿದರು. ೧೯೯೦ರಲ್ಲಿ **ರೇಪಟಿ ಪ್ರಜಾಸ್ವಾಮ್ಯ ಪರಿಶೋಧನಾ ಕೇಂದ್ರಂ** ಎಂಬ ಹೆಸರಿನಲ್ಲಿ ಒಂದು ವೇದಿಕೆಯನ್ನು ಮಾಡಿ ವಿವಿಧ ರಂಗಗಳಿಗೆ ಸೇರಿದ ಮೇಧಾವಿಗಳೊಡನೆ ಉಪನ್ಯಾಸವನ್ನು ಏರ್ಪಡಿಸಿದ್ದಾರೆ.

ಪ್ರಜಾಸ್ವಾಮ್ಯ ಕಾವ್ಯವನ್ನು ಪ್ರಾರಂಭಿಸುತ್ತಾ ಕೆಲವು ಕವಿತೆಗಳು ಪ್ರಕಟಿಸಿದರು. ಈಗ ಪ್ರಸ್ತುತ ಭಾರತೀಯ ಪ್ರಜಾಸ್ವಾಮ್ಯ ಅಧ್ಯಯನಂ ಸಂದರ್ಭದಲ್ಲಿ ಕವಿತೆಗಳು, ಪ್ರಬಂಧಗಳು ರಚಿಸುತ್ತಿದ್ದಾರೆ. ನಿರ್ದಿಷ್ಟ ತಾತ್ವಿಕ ದೃಷ್ಟಿಕೋನದಿಂದ ಎಲ್ಲವನ್ನೂ ವೀಕ್ಷಿಸುತ್ತಾ ಸಾಹಿತ್ಯದಲ್ಲಿ ಕವಿತಾ ಕಥೆ, ಪ್ರಬಂಧಗಳನ್ನು ರಚಿಸುವುದು ಇವರ ಮುಖ್ಯ ಆಶಯ.

ನಗ್ನಮುನಿ ಕವನಗಳನ್ನು ಗಮನಿಸಿದಾಗ ಕೋಪವೊಂದೇ ಅವರ ಕವನಗಳಲ್ಲಿ ಆವಿರ್ಭವಿಸಿದೆ ಎಂದು ತಿಳಿಯಬಾರದು. ಈ ಕವಿಯ ಕೋಪದ ಹಿಂದೆ ಶೋಷಿತ ಜನರ ಬಗ್ಗೆ ಅನುಕಂಪ, ಸಾಮಾಜಿಕ ಕಳಕಳಿ, ಸ್ವಾಭಿಮಾನವಿದೆ. ಸಮಾಜದ್ರೋಹಿಗಳ, ಘಾತಕರ ದೌರ್ಜನ್ಯಕ್ಕೆ ಬಲಿಯಾದ ಕೆಳವರ್ಗದ ಜನರ ಬಗ್ಗೆ ಕಳಕಳಿ ಇದೆ. ಈ ಕವನಗಳಲ್ಲಿ ಆಕ್ರೋಶ, ಆವೇಶ, ಮುಂತಾದವುಗಳು ಎದ್ದು ಕಾಣಿಸುತ್ತವೆ. ಈ ಪದಗಳು ಸಮಾಜ ಘಾತುಕರ, ದುಷ್ಟ ರಾಜಕೀಯ ಶಕ್ತಿಯನ್ನು ಸಭ್ಯ ಶಬ್ದಗಳಿಂದ ವರ್ಣಿಸಲು ಆಗುವುದಿಲ್ಲ. ಹಾಗಾಗಿ ಅಶ್ಲೀಲ, ಬೈಗಳು, ಅಸಭ್ಯ ಪದಗಳನ್ನು ಬೇಕೆಂದೇ ಬಳಸಿದರು. ಆದರೆ ಜನರ ನೋವು-ನಲಿವುಗಳನ್ನು ಸಮಾಜದ ಸ್ಥಿತಿಗತಿಗಳನ್ನು ನೇರವಾಗಿ ಮನಸ್ಸಿಗೆ ನಾಟುವಂತೆ ಪದಗಳನ್ನು ಬಳಸಿದರು. ಈ ಅಶ್ಲೀಲ, ಅಸಭ್ಯ ಪದಗಳ ಬಳಕೆಯು ಎಲ್ಲಾ ಆರು ಜನ ಕವಿಗಳ ಮೇಲೆ ಒಂದು ಆಪಾದನೆಯಾಗಿಯೇ ತೆಲುಗು ಸಾಹಿತ್ಯದಲ್ಲಿ ಉಳಿದಿರುವುದನ್ನು ಕಾಣಬಹುದು.



**ಕಾವ್ಯದಲ್ಲಿ ಹಾಸ್ಯ ಮತ್ತು ವಿಡಂಬನೆ**

ಹಾಸ್ಯ (Comialaughter) ದ ಬೇರೆ ಬೇರೆ ಪ್ರಕಾರಗಳಲ್ಲಿ ವಿಡಂಬನೆ (Satire) ಯೂ ಒಂದಾಗಿದೆ. ನಮಗಾಗದವರನ್ನು ನಮ್ಮ ತತ್ವಗಳಿಗೆ ಹೊರತಾದವರನ್ನು ಇಲ್ಲವೆ ನಮ್ಮ ಶತ್ರುಗಳನ್ನು ವಾಗ್ಯುದ್ಧದಲ್ಲಿ ಇಲ್ಲವೆ ತಾತ್ವಿಕ ಸಂಗ್ರಾಮದಲ್ಲಿ ಹೊಡೆದೋಡಿಸುವ ಆಯುಧವೆಂದರೆ ವಿಡಂಬನೆ. ಸಮಾಜದಲ್ಲಿರುವ ವ್ಯಕ್ತಿಯೇ ಆಗಲಿ, ಸಂಸ್ಥೆಯೇ ಆಗಲಿ, ಒಂದು ಸಮಾಜಕ್ಕೆ ಅಪಾಯ ಒದಗಿಬಂದರೆ ವಿಡಂಬನಕಾರರು ತನ್ನ ನಗೆಯಿಂದ ಅವುಗಳನ್ನು ಕೊಲ್ಲುತ್ತಾರೆ. ಅಥವಾ ನಗೆಯಲ್ಲಿ ಸಂತಾಪವನ್ನು ಬೆರೆಸಿ ಸುಟ್ಟು ಬಿಡುತ್ತಾರೆ. ಅವರನ್ನು ಮುಗಿಸಿ ಬಿಡಬೇಕೆಂಬ ಹುಮ್ಮಸ್ಸು ವಿಡಂಬನಕಾರರಿಗಿರುತ್ತದೆ. ವಿಡಂಬನೆಯ ಉದ್ದೇಶವೆಂದರೆ ಸಮಾಜದ ಸ್ವಾಸ್ಥ್ಯವನ್ನು ಕಾಯಲು ಡಾಂಭಿಕತನವನ್ನು ಬಯಲಿಗೆಳೆಯುವುದು; ದುರ್ಗುಣಗಳ ದುಷ್ಪರಿಣಾಮಗಳಿಗೆ ರಾವುಗನ್ನಡಿಯನ್ನು ಹಿಡಿದು ದುರ್ಜನರನ್ನು ತಿದ್ದುವುದು. ಮೂರ್ಖತನವನ್ನು ಎತ್ತಿಹಿಡಿದು ತೋರಿಸುವುದು. ವಿಡಂಬನಕಾರರು ಇದನ್ನೆಲ್ಲ ವಿನೋದದ ಮೂಲಕವೇ ಕೊನೆಗಾಣಿಸಲು ಪ್ರಯತ್ನಿಸುತ್ತಾರೆ.

ವಿಡಂಬನೆ ದಿಗಂಬರ ಕಾವ್ಯದಲ್ಲಿ ಚೆನ್ನಾಗಿಯೇ ಮೂಡಿಬಂದಿದೆ. ಈ ವಿಡಂಬನೆಯೆಂದರೆ ಬರಿ ಭೂಮದ ಹಾಡಲ್ಲ, ಬೀಭತ್ಸವಲ್ಲ, ಬರಿ ಸಿಟ್ಟಿನಿಂದ ಕೂಡಿದ್ದಲ್ಲ, ಸಿಟ್ಟಿನೊಡನೆ ತನ್ನ ಸ್ವಾಭಿಮಾನವನ್ನು ಸ್ವಲ್ಪ ವಿನೋದವನ್ನು ಕೂಡಿಸಿದಾಗ ಅಲ್ಲಿ ಹುಟ್ಟಿ ಬರುವ ಅಪಹಾಸ್ಯ ಅಂಶವೂ

ಇನ್ನೂ ಹೆಚ್ಚಾಗಿರುತ್ತದೆ. ಈ ವಿಡಂಬನೆಯು ಸಮಾಜದ ಅಣಕಕ್ಕೆ ಸಮೀಪವಾಗಿದ್ದರೂ ಅದರಲ್ಲಿ ವಿನೋದದ ಅಂಶವೂ ಕೂಡಿರುತ್ತದೆ. ಹಾಗೆ, ಸಾತ್ವಿಕ ಕೋಪವೂ ಸಹ ತಕ್ಕಮಟ್ಟಿಗೆ ಇರುತ್ತದೆ. ಸ್ವಾಭಿಮಾನವು ಮಾತ್ರ ಅದೃಶ್ಯವಾಗಿ ಬಂದು ನೆಲೆಸಿರುತ್ತದೆ. ವಿನೋದ, ಸ್ವಾಭಿಮಾನ, ಕೋಪ. ಈ ಮೂರರ ವಿಶಿಷ್ಟ ಸಮ್ಮಿಶ್ರವಾದ ಮೇಲೆ ವಿಡಂಬನೆಯ ಸ್ವಭಾವಗುಣವು ನಿರ್ಣಯವಾಗುತ್ತದೆ.

ವಿಡಂಬನೆಯು ಕಾಲಕಾಲಕ್ಕೆ ಎಲ್ಲಾ ಸಾಹಿತ್ಯದಲ್ಲಿ ಕಾಣುತ್ತೇವೆ. ಕನ್ನಡ ಸಾಹಿತ್ಯದಲ್ಲಿ ಪಂಪ, ರನ್ನ, ಕುಮಾರವ್ಯಾಸ, ಜನ್ನ ಮುಂತಾದ ಕವಿಗಳ ಕಾವ್ಯದಲ್ಲಿಯೂ ಕಾಣಬಹುದು. ಒಂದು ಸಮಾಜದ ಒಳಗನ್ನು ಬಯಲಿಗೆಳೆಯಬೇಕಾದರೆ, ರಾಜಕೀಯ ದುರ್ಗಂಧವನ್ನು, ಸಾಂಪ್ರದಾಯಿಕ ಮೌಢ್ಯವನ್ನು ಬಯಲಿಗೆಳೆಯಲು ವಿಡಂಬನೆ ಅವಶ್ಯ. ದಿಗಂಬರ ಕವಿಗಳು ತಮ್ಮ ವಿಡಂಬನಾತ್ಮಕ ಶೈಲಿಯಲ್ಲಿ ತಮ್ಮ ಕಾವ್ಯವನ್ನು ರಚಿಸಿದ್ದಾರೆ.

ನಗ್ನಮುನಿಯ **ದಾಹ** ಎಂಬ ಕವನದಲ್ಲಿ ರಾಜಕೀಯ ವಿಡಂಬನೆಯನ್ನು ಕಾಣಬಹುದು. ನಗರದ ಮಧ್ಯದಲ್ಲಿ ರಾಜಕೀಯ ದುರೀಣರ ವಿಗ್ರಹಗಳನ್ನು ನಿಲ್ಲಿಸಿದ್ದನ್ನು ಕಂಡು, ಅವರು ಜೀವಂತವಿದ್ದಾಗ ಸಾಧಿಸಿದ್ದೇನು, ಬಹಿರಂಗ ಸಭೆಗಳಲ್ಲಿ ಅಶ್ವಾಸನೆಗಳು, ಅಮಾಯಕರ ಮೇಲೆ ಬ್ರಹ್ಮಾಸ್ತ್ರ, ಜೀವಂತವಿದ್ದಾಗ ಅವರ ಸುತ್ತಮುತ್ತ ತಿರುಗುವ ಜನರ ಅವರ ಸಾಧನೆಗಳೇನೆಂಬುದನ್ನು ಪ್ರಶ್ನಿಸುತ್ತಾರೆ.

''ಈ ವಿಗ್ರಹಗಳು ಬದುಕಿರುವಾಗ
ಸುತ್ತಲೂ ಎಷ್ಟೊಂದು ಗ್ರಹಗಳು
ಕೋಳಿ ಪಂದ್ಯಾಟಗಳು,
ಸಿಮೆಂಟು ಕಂಟ್ರ್ಯಾಕ್ಟರುಗಳು
ಭೂರಿ ಭೋಜನಗಳು
ಅಮಾಯಕರ ತಲೆಯ ಮೇಲೆ
ಜೈಲು ಬಂಡೆಗಳು...?''[7]

ಪ್ರಜಾಪ್ರಭುತ್ವದ ಹೆಸರಿನಲ್ಲಿ ರಾಜಕೀಯ ವ್ಯಕ್ತಿಗಳೂ ಸರ್ವಾಧಿಕಾರಿಗಳಂತೆ ಅಧಿಕಾರ, ನಡೆಸುವುದು, ಸಾಮಾನ್ಯ ಜನರ ಮೇಲೆ ಸವಾರಿ ಮಾಡುವುದನ್ನು ಕಾಣಬಹುದು.

**ಕಾಸ್ಮಿಕ್ ಜಾತಿ** ಈ ಕವನದಲ್ಲಿ ಅಖಿಲಾಂಧ್ರ ರಾಜ್ಯದ ಆರುಕೋಟಿ ಜನರ ವಾರಸುದಾರರಂತೆ ಇರುವ ರಾಜಕೀಯ ಡಂಭಾಚಾರಿಗಳನ್ನು ಕುರಿತು ವಿವೇಚಿಸಿದ್ದಾರೆ.

''ಕೋಳಿಯಂಕಣದಾಟದಲ್ಲಿ
ಟಗರುಗಳ ಹೋರಾಟದಲ್ಲಿ
ರಣ ಭಾರತ ಮಾಡುವ

ಓ ಆಂಧ್ರದೇಶವೇ?

.........................

.........................

ಹೋ - ಹೋ ಅಖಿಲಾಂಧ್ರ ದೇಶವೇ
ಅಜ್ಞಾನ - ಅಂಧ ಸೌಭಾಗ್ಯ ಸೀಮೆಯೇ
ಕಿಚ ಪಿಚ ಮಾಡುವ ನಿನ್ನ ಆರುಕೋಟಿ ಜನರೇ
ಯೋಜನೆಗಳ ವ್ರಣದ ಮೇಲೆ ಸೊಳ್ಳೆಯಂತಿರುವ
ರಾಜಕೀಯ ಡಂಭಾಚಾರಿಗಳೇ
ಅಹಂ ಅಯಾತ್ಕಾರೇ.''[1]

ಈ ಕವನವು ಬೆಳೆಯುತ್ತಾ ಹೋದಂತೆ ಕವಿಯ ಆಕ್ರೋಶ, ಆವೇಶಗಳು, ನೆತ್ತಿಗೇರುವಂತೆ ಕಾಣಿಸುತ್ತದೆ.

**ಅಣುಸೂತ್ರ** ಕವನದಲ್ಲಿ ರಾಜಕೀಯ ವಿಡಂಬನೆಯನ್ನು ಕಾಣಬಹುದು. ರಾಜಕೀಯ ಮುಖಂಡರನ್ನು ಕುರಿತು, ದಿಕ್ಕುದಿಕ್ಕುಗಳ ದೇಶದೇಶದಲ್ಲಿ ಮಹಾಮಾರಿ, ಕಾಲರಾ, ಪ್ಲೇಗು ಹರಡಿಸುವ ಕ್ರಿಮಿಯಂತೆ ರಾಜಕೀಯ ಮುಖಂಡರು ಭ್ರಷ್ಟತೆಯನ್ನು ಹರಡುತ್ತಾರೆ. ಹೊಲಸಿನ ಮೇಲೆ ಕುಳಿತುಕೊಳ್ಳುವ ಹುಳಗಳಂತೆ ಇರುವ, ಊರ ಹಂದಿಗಳಂತೆ ಇರುವ ಅದಕ್ಕಿಂತ ಕನಿಷ್ಠ ಗುಣಗಳನ್ನು ಹೊಂದಿರುವ ರಾಜಕೀಯ ಧುರೀಣರೇ ಒಂದೇ ಒಂದು ಸಲ ಶಾಂತಿಯ ಸಂದೇಶ ಸಾರಲು ಮೇಲೆ ಬನ್ನಿ ಎನ್ನುವುದು ಈ ಕವನದ ಆಶಯ. ಮತ್ತು ಇನ್ನು ಮುಂದುವರಿದು ಜನರಲ್ಲಿ ತಿರುಗಿಬೀಳುವ, ಮನೋಭಾವನೆ ಇಲ್ಲದಿರುವುದಕ್ಕೆ ಈ ಕವನದಲ್ಲಿ ಅವರು ಪರಿತಪಿಸುತ್ತಾರೆ.

''ದಶದಿಶ ದೇಶದೇಶಗಳ
ಮಹಾಮಾರಿ ಮತ್ಸರದ ಕಾಲರಾ ಪ್ಲೇಗು ಕ್ರಿಮಿಗಳ ಚಲ್ಲುತ್ತಿರುವ
ರಾಜಕೀಯ ಧುರೀಣರೇ!
ಹೊಲಸಿನ ಮೇಲೆ ವಾಲಿರುವ ಹುಳುಗಳೇ!
ಮದಗಜಗಳೆಂದುಕೊಂಡ ಊರ ಹಂದಿಗಳೇ!
ಒಮ್ಮೆ ನಿಮ್ಮ ತಲೆಯೆತ್ತಿ
ಶಾಂತಿಯ ಸಂದೇಶದ ಮಾತಿನ ಕುಪ್ಪೆಯಿಂದ
ಮೇಲೆತ್ತಿ ಕೇಳಿ,
    ಹಂದಿಗಳೆಂದೂ ಕ್ರಿಮಿಗಳೆಂದೂ ತಿಳಿದ
    ಮದಗಜಗಳೇ। ಪ್ರಜೆಗಳೇ!
    ಒಂದು ಕ್ಷಣ ರಾಜಕೀಯದ ಕೊಚ್ಚೆಯಿಂದ
    ಹೊರಬಂದು ನೋಡಿ''[2]

ಈ ಕವನದಲ್ಲಿ ರಾಜಕೀಯ ವಿಡಂಬನದ ಜೊತೆಗೆ ಜನರ ಮನೋಭಾವನೆಗಳು ಹೇಗೆ ಇರಬೇಕೆಂದು ಹೇಳುತ್ತಾರೆ. ರಾಜಕೀಯ ದುರಾಡಳಿತದ ಬಗ್ಗೆ ನಗುವಿನ ವ್ಯಂಗ್ಯದಲ್ಲಿ, ಅಧಿಕಾರದಲ್ಲಿ ಅಪಾಯವಿಲ್ಲ. ರಾಜಕೀಯ ಧುರೀಣರುಗಳು ಮಾಡುವ ಮೋಸದಲ್ಲಿ ಇಲ್ಲ. ಜನರು ನಂಬುವ ದಡ್ಡತನದಲ್ಲಿ ಮಾತ್ರ ಅಪಾಯವಿದೆ. ಹೇಡಿತನದಲ್ಲಿ, ಪಲಾಯನದಲ್ಲಿ ರಾಜಿಯಾಗುವುದರಲ್ಲಿ ಅಪಾಯವಿದೆ ಎಂದು ಹೇಳಿ ಜನರು ಎಚ್ಚರವಾಗುವ ತನಕ ಮೋಸ, ವಂಚನೆಗಳು ಹಾಗೆಯೇ ನಡೆಯುತ್ತದೆ ಎಂದು ಜನರನ್ನು ಎಚ್ಚರಿಸುತ್ತಾರೆ. ಕವನವು ಬೆಳೆಯುತ್ತಾ ಹೋದಂತೆಲ್ಲಾ ಇಡೀ ರಾಜಕೀಯದ ಚಿತ್ರಣವನ್ನು ಕಾಣಬಹುದು, ಜನರ ಮನೋಭಾವನೆಯನ್ನೂ ತಿಳಿಯಬಹುದು.

ಹೀಗೆ ನಗ್ನಮುನಿಯ ಕವನಗಳಲ್ಲಿ ರಾಜಕೀಯ ವಿಡಂಬನೆಯು ವಾಸ್ತವತೆ ನೆಲೆಯಲ್ಲಿ ಆವಿರ್ಭವಿಸಿದೆ. ಪ್ರತಿಯೊಂದು ಕವನದಲ್ಲಿ ವಿಡಂಬನಾತ್ಮಕವಾಗಿ ಚಿತ್ರಿಸಿರುವುದನ್ನು ಕಾಣಬಹುದು. ಹಾಗೆಯೇ ಇವರ ಕವನಗಳು ಜನವಿರೋಧಿಗಳ ಬಗೆಗೆ ದ್ವೇಷ, ನರಸತ್ತ ಜನರ ಮೇಲೆ ಆಕ್ರೋಶ, ಶಾಂತಿಮಂತ್ರ ಪಠಿಸುವವರ ಬಗೆಗೆ ಅಸಹನೆ, ಕಟುವಾದ ಪದಗಳಲ್ಲಿ ಮೂಡಿ ಬಂದಿದೆ.

"ಡಿಯರ್ ಸ್ಕೌಂಡ್ರಲ್
ನಾಲ್ಕು ಗೋಡೆಗಳ ನಡುವೆ
ಒಳಿತಿನ ಸಮಾಧಿ ಮಾಡಿ
ಕಣ್ಣೀರಿನ ಸತುವಿನಿಂದ ಗುಲಾಬಿ ಹೂ ಅರಳಿದಾಗ
ಬೆಚ್ಚನೆ ಹದಿಹರೆಯ
ಹಚ್ಚನೆ ಹೊಸತನವ .
ಹೇಗಾದರೂ ತೂರಾಡಿ
ಮೇಲೆತ್ತಿದ ತೆರೆಹಿಂದೆ
ದುರಂತ ನಾಯಕನಂತೆ ಬಿಕ್ಕಿ ಬಿಕ್ಕಿ
ನಗುತ್ತಿರುವ
ನಿನ್ನನ್ನು ನೋಡಿ ಕನಿಕರವೆನಿಸುತ್ತದೆ."[8]

ಈ ಕವಿತೆಯಲ್ಲಿ ವ್ಯಕಿಯು ತಾನೆಲ್ಲಿ ಅಧಿಕಾರ, ಅಂತಸ್ತುನಿಂದ ಹಾಗೂ ಎಲ್ಲಾ ವಿಧದಲ್ಲೂ ಅವನ ಜೀವನವು ಸುಂದರ ಸುಖಮಯವಾಗಿದೆ. ಆದರೆ ಆ ಸುಖವು ಹೊರಗೆ ಬರಲಾರದೆ ದುಃಖದಿಂದ ನಾಲ್ಕು ಗೋಡೆಗಳ ಮಧ್ಯೆ ಹೊರಳಾಡುತ್ತಿದೆ. ಅಂದರೆ ಅವನ ವಯಸ್ಸಿನ ಅಮಲಿನಲ್ಲಿ ಏನೆಲ್ಲವನ್ನು ಮಾಡುತ್ತಿದ್ದಾನೆ. ಹಾಗಾಗಿ ಈ ಕವನ ಬೆಳೆಯುತ್ತಾ ಹೋಗಿ ಅವನಲ್ಲಿ ಹುದುಗಿರುವ ಆತಂಕ ಹೊರತೆಗೆದು, ಸ್ವಚ್ಛವಾದ ಮನಸ್ಸಿನಿಂದ ಹೊರಬಂದು ಜೀವನ ಸಾಗಿಸಬೇಕೆಂಬ ಆಶಯ ಮೂಡಿಬಂದಿದೆ.

**ಕಾವ್ಯದ ಭಾಷೆ**

ನಗ್ನಮುನಿಯ ಕವನಗಳನ್ನು ಗಮನಿಸಿದಾಗ, ಕೋಪ, ಶೋಷಿತ ಜನರ ಬಗ್ಗೆ ಅನುಕಂಪ, ಸಮಾಜ ಘಾತುಕರ ದೌರ್ಜನ್ಯಕ್ಕೆ ಒಳಗಾದ ಜನರ ಬಗ್ಗೆ ಆತಂಕ ಮುಂತಾದವುಗಳನ್ನು ಕಾಣಬಹುದು. ಅವರ ಕವನಗಳಲ್ಲಿ ಮುಖ್ಯವಾಗಿ ಅಶ್ಲೀಲ ಪದಗಳು ಹೆಚ್ಚಾಗಿ ಕಂಡುಬರುತ್ತವೆ. ಕಾರಣ ಜನರ ಕಷ್ಟ ನೋವು-ನಲಿವುಗಳು, ಜನರ ನೇರ ಭಾಷೆಯನ್ನು, ಅಸಭ್ಯ ಪದಗಳನ್ನು ಬಳಸಿದರು. ಏಕೆಂದರೆ ಕಬ್ಬಿಣವನ್ನು ಕಬ್ಬಿಣದಿಂದ ಮಣಿಸಿದ ಹಾಗೆ; ಹೊಲಸನ್ನು, ಸಮಾಜವೆಂಬ ಕೊಳಚೆಯ ದುರ್ಗಂಧವನ್ನು ಸಭ್ಯ ಪದಗಳಿಂದ ವರ್ಣಿಸಲು ಶಕ್ತವಾಗುವುದಿಲ್ಲ. ಹಾಗಾಗಿ ಅಸಭ್ಯ ಪದಗಳನ್ನು, ಬೈಗುಳನ್ನು ಬಳಸಿದರು. ಇವರು ಬಳಸಿದ ಪದಗಳನ್ನು ಅಶ್ಲೀಲವೆಂದು ಕೆಲವರು ಕರೆದಿದ್ದರಿಂದ ನಗ್ನಮುನಿ ಕೆಂಡಕಾರಿ, ಈ ರೀತಿ ಹೇಳುವವರನ್ನು ನಪುಂಸಕ ಎಂದು ಜರಿಯುತ್ತಾರೆ.

ಅಸಭ್ಯ ಪದಗಳ, ವ್ಯಂಗ್ಯ, ಕವನಗಳಲ್ಲಿ ಮೂಡಿಬಂದಿವೆ. 'ಕಾಸ್ಮಿಕ್ ಜಾತಿ' ಕವನದಲ್ಲಿ ಆಂಧ್ರದೇಶವನ್ನು ಕುರಿತು ಅಲ್ಲಿನ ಸ್ಥಿತಿಗತಿಗಳನ್ನು ಜನರ ಮನೋಭಾವನೆಗಳನ್ನು ವೈಶಿಷ್ಟ್ಯಪೂರ್ಣವಾಗಿ ತನ್ನದೇ ಆದ ವಿಚಾರಪೂರಕವಾದ ವಿಷಯವನ್ನು ಅಸಭ್ಯವಾಗಿ ಹೇಳಿದ್ದನ್ನು ಕಾಣಬಹುದು.

> ''ಬಾರುಗಳಲ್ಲಿರುವ ಹೈದ್ರಾಬಾದೇ।
> ಸಾವಿರ ವರ್ಷದ ಗೊಡ್ಡು ಸಂಸ್ಕೃತಿಯೇ!
> ನಿನಗೇನು ಮಾಡಲಿ?
> ಎಲ್ಲೇ ಇರಲಿ ಹೇಗೆ ಇರಲಿ
> ನಿನಗೇನು ಮಾಡಲಿ
>         ಕಾರದಲ್ಲಿ ಉರುಳಾಡಿಸಿದ ಒನಕೆಗಳಿಂದ
>         ಹಾಡುಹಗಲೇ
>         ಸಂಭೋಗಿಸಬೇಕೆನಿಸುತ್ತದೆ.''[5]

ಈ ಕವನದಲ್ಲಿರುವ ಅರ್ಥವು ವೈಶಿಷ್ಟ್ಯಪೂರ್ಣವಾಗಿದೆ. ಇಲ್ಲಿ ಬಂದಿರುವ ಪದಗಳು ಗೋಚರಿಸಿದರೂ ಅದರಲ್ಲಿ ಅಡಗಿರುವ ಅರ್ಥವು ಮಾತ್ರ ಪ್ರಾಮುಖ್ಯವನ್ನು ಪಡೆದಿದೆ. ಆಂಧ್ರದೇಶದ ಅಸಭ್ಯವಾಗಿ ಸ್ಥಿತಿಗತಿಗಳು ವ್ಯಂಗ್ಯವಾಗಿ ಮೂಡಿಬಂದಿದೆ.

'ಮನಸ್ಸು' ಈ ಕವನದಲ್ಲಿ ಆಕಾಶದ ವರ್ಣನೆ, ಸೂರ್ಯ, ಚಂದ್ರ ನಕ್ಷತ್ರಗಳ ವರ್ಣನೆ, ಭೂಮಂಡಲ ವೈಚಿತ್ರ್ಯಗಳ ವರ್ಣನೆ, ಮಾನವನ ಗುಣಧರ್ಮಗಳ ವರ್ಣನೆ, ಪಂಚಭೂತಗಳು ಮುಂತಾದವುಗಳ ಮೇಲೆ ಒಳಗಿನ ಮನಸ್ಸನ್ನು ತೆರೆದು ರಹಸ್ಯವನ್ನು ಹೊರಗೆಡುವುದನ್ನು

ಕಾಣಬಹುದು. ಕವಿಯ ರಕ್ತ ಕಣಕಣಗಳಲ್ಲಿ ಇಡೀ ವಿಶ್ವ ರಹಸ್ಯಗಳು, ವಾಸ್ತವಿಕ ಸಮಸ್ಯೆಗಳ ಸರಮಾಲೆಯು ಈ ಕವನದಲ್ಲಿ ಹೊರಹೊಮ್ಮಿದೆ.

''ನನ್ನ ರಕ್ತದ ತುಂಬಾ ವಿಶ್ವ ರಹಸ್ಯಮುದ್ರಗಳ ತಂತಿವಾದ್ಯಗಳು
ನನ್ನ ವೀರ್ಯದಲ್ಲೆಲ್ಲಾ ರೇಡಿಯೋ ಧಾರ್ಮಿಕ ಕಿರಣಗಳು
ಕಾಲಕಾಂತೆಯ ಸರಸದಲ್ಲಿ
ಇಪ್ಪತ್ತನೇ ಶತಮಾನದ ಬಿಸಿಲ ಮಂಚದಲ್ಲಿ
ಸಂಕ್ಲಿಷ್ಟ ಸಮಸ್ಯೆಗಳ ಪರಿಮಳವನ್ನು ಆಘ್ರಾಣಿಸುತ್ತಾ
ಕ್ಷಣ ಕ್ಷಣ ಸಂಘರ್ಷಣದಲ್ಲಿ ರಮಿಸುತ್ತಾ
ಶುಕ್ರೇತರ ಸರ್ವಗ್ರಹ ಸಂಕೇತಗಳನ್ನು ಕೇಳಿಸುತ್ತೇನೆ.
ಪ್ರಳಯ ಪೊರೆಗಳ ಕೆಳಗಿನ ನಿಶ್ಯಬ್ದವನ್ನು
ತೆಲುಗು ಮಾಡುತ್ತೇನೆ.''[70]

ನಗ್ನಮುನಿಯ ಅನೇಕ ಕವನಗಳಲ್ಲಿ ವಿಡಂಬನಾತ್ಮಕವಾದ ಅಸಭ್ಯ ಪದಗಳನ್ನು ಬಳಸಿದ್ದಾರೆ. ಮುಖ್ಯವಾಗಿ 'ದೃಷ್ಟಿಸೂತ್ರ', 'ಕುಷ್ಠರೋಗಿ,' 'ದಿಗಂಬರವಾಗಬೇಕು.' ಈ ಕವನಗಳಲ್ಲಿ ಸಹ ಅಸಭ್ಯ ಪದಗಳನ್ನು ಬಳಸಿದ್ದಾರೆ. ಜನರ ಮನೋಭಾವನೆಗಳನ್ನು ಅಸಭ್ಯ ಪದಗಳಿಂದ ಹೊರಹೊಮ್ಮಿಸಿದರು. ಅಶ್ಲೀಲ ಪದಗಳನ್ನು ಬಳಸಲೇಬೇಕೆಂಬ ನಿಯಮವೇನು ಹಾಕಿಕೊಂಡಿರಲಿಲ್ಲ. ಆದರೆ ಈ ಪದಗಳನ್ನು ಬಳಸಲೇ ಬೇಕಾದ ಸಂದರ್ಭ ಬಂದಾಗ ಮಾತ್ರ ಸಂದರ್ಭಕ್ಕೆ ತಕ್ಕಂತೆ ಬಳಸಿದ್ದಾರೆ. ಪ್ರತಿಯೊಬ್ಬ ದಿಗಂಬರ ಕವಿಗಳಾಗಲಿ, ಮತ್ತಾರೋ ಕವಿಗಳಾಗಲಿ, ತಮ್ಮದೇ ಆದ ಭಾಷೆ ಬಳಕೆಯನ್ನು ಕಂಡು ಕೊಂಡಿರುತ್ತಾರೆ. ಆದರೆ ಇವರ ಭಾಷಾ ಶೈಲಿಯು ವಾಸ್ತವತೆಯ ವಿಚಾರಗಳ ಮೇಲೆ ರಚಿತವಾಗಿದೆ. ನಗ್ನಮುನಿ ತಮ್ಮ ಕವನಗಳಲ್ಲಿ ದೇಶದ ಸಮಾಜದ ನಿರ್ಗತಿಕರ, ಜನತೆಯ ಇಂದಿನ ವಾಸ್ತವಿಕ ಬದುಕನ್ನು ಆವರ ಸ್ಥಿತಿಗತಿಗಳನ್ನು ಕವನದ ಮುಖಾಂತರ ಚಿತ್ರಿಸಿದ್ದಾರೆ.

ನಗ್ನಮುನಿಯು 'ಹಳ್ಳಿಗಳು' ಕವನದಲ್ಲಿ ಹಳ್ಳಿಗಳ ಇಂದಿನ ವಾಸ್ತವಿಕ ಸ್ಥಿತಿಗತಿಯನ್ನು ಕುರಿತು ಮನಮಿಡಿಯುವಂತೆ ಚಿತ್ರಿಸಿದ್ದಾರೆ. ಇಲ್ಲಿ ಹೊದ್ದುಕೊಳ್ಳಲು ರಸ್ತೆಗಳೂ ಇಲ್ಲ. ಮುಳುಗಿದರೆ ಮೈಗೆ ಸುತ್ತಿಕೊಳ್ಳುವುದು ಹಾವೋ ಹಗ್ಗವೋ ತಿಳಿಯಲು ದೀಪಗಳೂ ಇಲ್ಲ. ಅಧಿಕಾರದ ದಾಹ ಉಪನ್ಯಾಸವನ್ನು ಸೃಷ್ಟಿಸುತ್ತಿದೆ. ರಕ್ತ ಮಾಂಸಗಳನ್ನು ವಾಗ್ದಾನಗಳ ಗೊಟ್ಟಗಳಿಂದ ಹೀರಿದ ಮೇಲೆ ತಿನ್ನಲು ಉಳಿದದ್ದು ಹಸಿವು ಅಜ್ಞಾನಗಳೇ ಅಲ್ಲವೆ... ಇದು ಸುಟ್ಟು ಹೋದ ಕರಕಾದ ನಾತ ಹೊಡೆಯುವ ದೇಶ. ಪತ್ರಿಕೆಗಳ ಮುಖ ಪುಟಗಳ ಮೇಲೆ ಗುಣಗಾನ, ವೇದಿಕೆಗಳ ಮೇಲೆ ಭಾಷಣಗಳು ಇವು ರಾಜಕೀಯ ಮುಖಂಡರ ಆಶ್ವಾಸನೆಗಳು ಮಾತ್ರ ಇವೆ. ಬಡಜನರ, ಹಳ್ಳಿಗಳ ಸ್ಥಿತಿಗತಿ ಮುಂತಾದವುಗಳು ಈ ಕವನದಲ್ಲಿ ಇಂದಿನ ಸ್ಥಿತಿಗತಿಯು ಮೂಡಿಬಂದಿದೆ.

''ಇಲ್ಲಿ ಹೊದೆಯಲು ಬೀದಿಗಳಿಲ್ಲ
ಇಲ್ಲಿ ದೀಪಗಳಿಲ್ಲದ ಕಾರಣ
ಮೈಗೆ ಹೆಡಯುರಿಕೆ ಸುತ್ತಿದ್ದು
ಹಾವೋ? ಹಗ್ಗವೋ?
ಗೊತ್ತಿಲ್ಲ.
ಚರ್ಮವು ಮಾತ್ರ
ಹೊಡೆಯುವ ಗಾಳಿಗೆ ಬರಿದು
ಬಣ್ಣವಿಲ್ಲದ ರಕ್ತವು ಒಸರುತ್ತಿರುತ್ತದೆ.
...........................
...........................
...........................
ಒಣಗಿಹೋದ ಸಂತಾನ
ತಿಂದು ಹಾಕಲ್ಪಟ್ಟ ಸಂತಾನ
ಸುಟ್ಟು ಕರುಕಾದ ಸಂತಾನ
ಕಮರಿ ಹೋದ ಸಂತಾನ
ನಾತವಾದ ಸಂತಾನವೂ
ಹೇಡಿತನಕ್ಕಲ್ಲದೇ
ಬೇರಾವುದಕ್ಕೆ ಜನ್ಮ ನೀಡಬಲ್ಲದು ? ''[೧೧]

ಹೀಗೆ ಇಂದಿನ ಹಳ್ಳಿಗಳ ಸ್ಥಿತಿಗತಿಗಳು ಅತ್ಯಂತ ಮಾರ್ಮಿಕವಾಗಿ ಚಿತ್ರಿತವಾಗಿದೆ. ಬಡವರ ಸ್ಥಿತಿಗತಿ, ಹಳ್ಳಿಯ ಸ್ಥಿತಿಗತಿ ಕರುಣಜನಕವಾಗಿದೆ. ಜನರ ಬದುಕು ಬವಣೆ, ಇನ್ನೂ ಗಂಭೀರವಾಗಿದೆ. ಐದು ವರ್ಷಗಳಿಗೊಮ್ಮೆ ಮಾತ್ರ ಕಾರಿನ ಸದ್ದು ಕೇಳುವ ಧ್ವನಿ, ಆದರೆ ಬಡವರಿಗೆ ತಿನ್ನಲು ಅನ್ನವಿಲ್ಲ, ಇರಲು ಸೂರೂ ಇಲ್ಲ. ಹಸಿವು, ಬಡತನ, ಇನ್ನು ಹಾಗೆಯೆ ಇದೆ. ರಾಜಕೀಯ ಮುಖವಾಡಗಳು ಅವರ ಮೊಸಳೆ ಕಣ್ಣೀರಿನ ಭಾಷಣಗಳು ಮುಂತಾದವು ಈ ಕವನದಲ್ಲಿ ಕಾಣಬಹುದು.

ಇನ್ನು ಶ್ರೀ ಸಾಮಾನ್ಯರ ಮಧ್ಯಮ ವರ್ಗ ಸಮಾಜವು ಅತ್ಯಂತ ವ್ಯಾಪಕವಾಗಿದೆ. ಮಧ್ಯಮ ವರ್ಗದ ವಿಚಾರಗಳು, ಕ್ರಾಂತಿಯ ಆಲೋಚನೆಗಳು, ಬೌದ್ಧಿಕ ಜಾಗೃತಿ ಹಾಗೂ ಮಾನವನು ಬೆಳೆಸಿಕೊಂಡು ಬಂದ ವೃತ್ತಿ, ಪಂಗಡ, ಕುಲ, ಮತ ವೈವಿಧ್ಯತೆ ಮೇಲ್ವರ್ಗವನ್ನು ಅನುಸರಿಸುವ ಎಡಬಿಡಂಗಿತನ ಈ ವರ್ಗದ ಜನರ ಜೀವನ ವಿಧಾನ ಮುಂತಾದವು ಹೇಗೆ ಮೂಡಿಬಂದಿದೆ ಎಂಬುದನ್ನು ನಗ್ನಮುನಿಯ ಕೆಲವು ಕವನಗಳಲ್ಲಿ ಕಂಡುಕೊಳ್ಳಬಹುದು.

ಹಾಗೆಯೇ ಹಸಿವು ನಿರುದ್ಯೋಗ ಸಮಸ್ಯೆಗಳು ನಗ್ನಮುನಿ ಕವನಗಳಲ್ಲಿ ಎದ್ದು ಕಾಣುತ್ತವೆ. 'ಕುಷ್ಠರೋಗಿ' ಎಂಬ ಕವನದಲ್ಲಿ ಧನಿಕರ ವೈಭವ, ಹಣವನ್ನು ಆಧರಿಸಿ ಬದುಕುವ ರೀತಿ, ಯಾರು ಧನವನ್ನು ಹೆಚ್ಚು ಪ್ರೀತಿಸಿ ಬದುಕುತ್ತಾರೋ ಅವರು ರೋಗಿಗಳಂತೆ ಬದುಕುತ್ತಾರೆ. ಧನಿಕನು ಕೆಟ್ಟ ಕೆಲಸವನ್ನು ಮಾಡಬೇಕಾದರೆ ಯಾವುದಕ್ಕೂ ಹೇಸುವುದಿಲ್ಲ. ಅವನಿಗೆ ಹಣವು ಮುಖ್ಯವಾಗಿರುತ್ತದೆ ಹೊರತು ಮಾನ ಮರ್ಯಾದೆ ಮುಖ್ಯವಾಗಿರುವುದಿಲ್ಲ. ಅಧಿಕಾರದ ಅಮಲಿನಲ್ಲಿಹೇಗೆ ತನ್ನ ಅಧಿಕಾರ ಚಲಾಯಿಸುತ್ತಾನೆ ಎಂಬುದು ಈ ಕವನದಲ್ಲಿ ಮೂಡಿಬಂದಿದೆ. ಸ್ವರಾಜ್ಯ ಎಂಬ ಹೆಸರಿನಲ್ಲಿ ಸಂಪಾದಿಸಿದ್ದು, ಎಷ್ಟು ಜನಗಳ ಚಿತೆಗೆ ಬೆಂಕಿ ಇಟ್ಟಿದ್ದಿಯೆಂದು ಪ್ರಶ್ನಿಸುವ ಈ ಕವನದಲ್ಲಿ ಪ್ರಜಾಪ್ರಭುತ್ವದ ವ್ಯವಸ್ಥೆಯೇ ಮೂಡಿಬಂದಿದೆ.

''ಇನ್ನೂ ಎಷ್ಟು ಪರ್ಮಿಟ್‌ಗಳು ಬೇಕು
ಇನ್ನೂ ಎಷ್ಟು ಹೊಸ ವ್ಯಾಪಾರದ ಬೋನು ತೆರೆಯುತ್ತೀ?
ಇನ್ನೆಷ್ಟು ಹೊಸಬೋರ್ಡ್ ಬರೆಸಬೇಕು ?
ಇನ್ನೂ ಎಷ್ಟು ಷೇರು ಕೊಳ್ಳುವೆ ?
ಇನ್ನೆಷ್ಟು ದ್ರಾಕ್ಷಿ ತೋಟಗಳು ?
ನಿನ್ನ ಹೆಸರಿನಲ್ಲಿ
ನಿನಗಿನ್ನೂ ಹುಟ್ಟಲಿರುವವರ ಹೆಸರಿನಲ್ಲಿ ?
ಎಷ್ಟು ಮಹಡಿಗಳ; ಗೋಡೆಗಳ ಕಟ್ಟಬೇಕು ?
ಎಷ್ಟು ಕಾರುಗಳ; ಅಳಿಯಂದಿರ, ಕಂಪನಿಗಳ ಕೊಳ್ಳಬೇಕು ?
ಇನ್ನೂ ಎಷ್ಟು ವಿದೇಶಿ ಸೀಸೆಗಳನ್ನು ?
ಬಿಚ್ಚಿಕೊಡಲು ಜನರನ್ನು ಸಾಕುತ್ತೀ ?
ಇನ್ನೆಷ್ಟು ತರದ ವಿನಯ ವಿಧೇಯತೆಗಳನ್ನು?
ಪಕ್ಷಗಳನ್ನು ಮರ್ಯಾದೆ ಮನ್ನಣೆಗಳನ್ನು?
ಆಶ್ರಯಗಳನ್ನು ಅಳವಡಿಸಿಕೊಳ್ಳುತ್ತಿ?''[೮]

ಹೀಗೆ ಅಧಿಕಾರದ ದಾಹದಲ್ಲಿ ಇನ್ನೂ ಗಳಿಸಬೇಕೆಂಬ ಆಸೆ ತಾನು ಮಾಡುವ ಪಾಪ, ತನಗೆ ಹತ್ತಿದ ರೋಗ ಇನ್ನೊಬ್ಬರಿಗೆ ಹರಡಿಸುವುದನ್ನು ತಪ್ಪಿಸಲು ಇಂಥವರನ್ನು ನಾಶಮಾಡಲು ಹಿಂದೆ ಮುಂದೆ ನೋಡಬಾರದೆಂಬುದು ಕವನದ ಆಶಯ. ಬಡಜನರು, ಕೆಳವರ್ಗದ ಜನರು ಒಂದು ತುತ್ತಿಗೆ ಅನ್ನವಿಲ್ಲದಾಗ, ಈ ವರ್ಗದ ಜನರ ಶ್ರಮವೆಂಬ ರಕ್ತವನ್ನು ಹೀರುವ ಇಂಥಾ ವ್ಯಕ್ತಿಗಳನ್ನು ಕವಿಯು ಖಂಡಿಸುತ್ತಾರೆ. ಈ ಕವನದಲ್ಲಿ ಪ್ರಜಾಪ್ರಭುತ್ವದಲ್ಲಿ ಹೇಗೆ ಅಧಿಕಾರ ಇದ್ದಾಗ ಹಣವನ್ನು ಗಳಿಸುತ್ತಾರೆ. ಯಾವ ರೀತಿ ಕುಟುಂಬದ ಹೆಸರಿನಲ್ಲಿ ತಮ್ಮ ಬಂಧುಗಳ ಮತ್ತೊಬ್ಬರ ಹೆಸರಿನಲ್ಲಿ ಸಂಪತ್ತನ್ನು ಕೊಳ್ಳೆ ಹೊಡೆಯುತ್ತಾರೆ ಎಂಬ ವಾಸ್ತವತೆಯು ಈ ಕವನದಲ್ಲಿ ಒಡಮೂಡಿದೆ.

'ದಿಗಂಬರವಾಗಬೇಕು' ಕವನದಲ್ಲಿ ಗತಕಾಲದ ದೃಷ್ಟಿಯನ್ನು ಇಟ್ಟುಕೊಂಡು ಇಲ್ಲಿಯವರೆಗೆ ಸಾಗಿಬಂದ ನಾಗರಿಕತೆ ಸುಳ್ಳು. ಮಾನಸಿಕ ದಿಗಂಬರವಾಗಬೇಕೆಂಬುದು ಈ ಕವನದಲ್ಲಿದೆ. ಆತ್ಮವಿಶ್ವಾಸದಿಂದ ಪ್ರತಿರೋಮ ರೋಮವು ದಿಗಂಬರವಾಗಬೇಕು ಇಡೀ ವ್ಯವಸ್ಥೆಯೇ ದಿಗಂಬರವಾಗಬೇಕೆಂಬುದು ಈ ಕವನದಲ್ಲಿ ಮಾರ್ಮಿಕವಾಗಿ ಚಿತ್ರಿತವಾಗಿದೆ.

''ಸೊಕ್ಕಿನಿಂದ ನಿಗುರಿದ ಪ್ರತಿ ಶಿರದ ಮೇಲಿನ
ಪ್ರತಿ ರೋಮ ರೋಮವೂ

ದಿಗಂಬರವಾಗಲಿ
..................
..................
ಸುಳ್ಳಿಗೆ ಜೋತಾಡುವ ಬಾವಲಿಗಳೂ
ಕಣ್ಣಾಲಿಗಳೂ
ದಿಗಂಬರವಾಗಲಿ'' [೧೩]

ಎಂದು ಹೇಳಿ ಸುಳ್ಳನ್ನು ಹೇಳಿ ಹೊಟ್ಟೆಯನ್ನು ತುಂಬಿಸಿಕೊಳ್ಳುವ ಮನಸ್ಸುಗಳು ದಿಗಂಬರವಾಗಲಿ, ಎಂದು ಹೇಳುತ್ತಾರೆ. ಮುಂದುವರಿದು ಅಡ್ಡದಾರಿ ತೋರಿಸಿ ಬದುಕುವ ಕಲೆಯನ್ನು ಕರಗತ ಮಾಡಿಕೊಂಡಿರುವ, ಅದನ್ನು ಕಂಡು ಪರಿತಪಿಸಿಯಾದರೂ ದಿಗಂಬರವಾಗಲಿ ಎಂದು ಹೇಳುತ್ತಾರೆ. ಈ ಕವನದಲ್ಲಿ ಇಡೀ ಮನುಷ್ಯನ ದುರ್ನಡತೆಗಳನ್ನು ಹೊರಗೆಡುವುತ್ತಾ ಎಲ್ಲವನ್ನೂ ತ್ಯಾಗಮಾಡುತ್ತಾ, ಇಂದಿನ ವಾಸ್ತವತೆಯನ್ನು ಅಳವಡಿಸಿಕೊಂಡು ಮಾನವನಾಗಿ ಬದುಕಬೇಕೆಂಬ ಆಶಯವಿದೆ. ಇನ್ನು ಮುಂದುವರಿದು ಈ ರೀತಿ ಹೇಳಿದ್ದಾರೆ.

''ಮದುವೆಗಳೂ ಸಾವುಗಳೂ ರೋಗರುಜಿನಗಳೂ
ದಿಗಂಬರವಾಗಲಿ
ಪರಿಸರಗಳು ದಿಗಂಬರವಾಗಲಿ
ಪ್ರಪಂಚವೇ ದಿಗಂಬರವಾಗಲಿ
ವಿಶ್ವವೇ ದಿಗಂಬರವಾಗಲಿ
ಓ ಪಶುವೇ
ಮೊಟ್ಟಮೊದಲು
ತುದಿಕೊಂಬೆಯ ಮೇಲಿರುವ
ಮನಸು ದಿಗಂಬರವಾಗಲಿ'' [೧೪]

'ಈ ದೇವರುಗಳು' ಕವನದಲ್ಲಿ ರಾಜಕೀಯ ಮುಖಂಡತ್ವದಲ್ಲಿ ಜನ ಹೇಗೆ ಜೀವನ ಸವೆಸುತ್ತಾರೆ. ಅವರು ಪ್ರತಿಭಟಿಸಿದರೆ ಅವರನ್ನು ಹೇಗೆ ಕಟ್ಟಿ ಹಾಕುತ್ತಾರೆ. ಈ ದೇವರುಗಳು ಎಂಬ ದೊಡ್ಡ ಮನುಷ್ಯರು ಮನಸ್ಸು ಮಾಡಿದರೆ ಏನು ಬೇಕಾದರೂ ತರಿಸಬಹುದು. ಅವರಿಗೆ ಸಿಟ್ಟು ಬಂದರೆ ಶಿವನ ಮೂರನೇ ಕಣ್ಣು ತೆರೆದು ಸುಟ್ಟು ಬೂದಿ ಮಾಡಿದ ಹಾಗೆ ಇವರ ಸಿಟ್ಟಿನಿಂದ ಅತೀ ಕೆಳಗಿನ, ಸಾಮಾನ್ಯ ಜನರ ಜೀವನದ ನರಕ ಯಾತನೆ ಪಡೆಯಬೇಕಾಗುತ್ತದೆ. ಇವರ ಜೀವನ ಸಾವುಬದುಕಿನ ನಡುವಿನ ಸ್ಥಿತಿಯಲ್ಲಿ ನೂಕುತ್ತಾರೆ. ಹಾಗಾಗಿ ದೇವರುಗಳು ಎಂಬ ಈ ದೊಡ್ಡ ಮನುಷ್ಯರ ಹೆಸರನ್ನು ಹೇಳಿಕೊಂಡು ನೆನೆದರೆ ಮಾತ್ರ ಸಾಮಾನ್ಯ ಜನರ ಬದುಕು ಬಂಗಾರ. ಇಲ್ಲದಿದ್ದರೆ ಮಸಣವಾಗುವುದು ಎಂದು ಈ ಕವನದಲ್ಲಿ ಮೂಡಿಬಂದಿದೆ.

''ನಾವೆಂದಿಗೂ ಪ್ರತಿಭಟಿಸಲಾರೆವು
ಪ್ರತಿಭಟಿಸುವುದು ನಮ್ಮ ಕೈಲಾಗದು
ನಮ್ಮ ಧಮನಿಗಳಲ್ಲಿ ಪ್ರವಹಿಸುತ್ತಿರುವುದ ಜಾತಿಮತ ಮೂತ್ರ ಕಲುಷಿತ ರಕ್ತ
ನಾವು ಹೇಡಿ ಹಂದಿಗಳು, ನಾಯಿಗಳು
ಅದ್ದರಿಂದ
ನಮ್ಮ ಬದಕುಗಳನ್ನು ಕೊಂದು ಪಾಲಿಸುತ್ತಿರುವ
ನಾನಾವಿಧ ದೇವರುಗಳ ಅರ್ಚನ - ಪೂಜನಗಳಿಗೇ ಅಂಕಿತವಾಗೋಣ'' [೧೫]

ಎಂದು ಹೇಳುತ್ತಾ ಮುಂದುವರಿದು ಈ ದೇವರುಗಳು ನಾನಾ ರೀತಿಯಿಂದ ದೊಡ್ಡವರು ಎಂದು ರಾಜಕೀಯದ ವಿಡಂಬನಾತ್ಮಕವಾದ ಶೈಲಿಯಲ್ಲಿ ಮೂಡಿಬಂದಿದೆ. ಅವರ ದಯಾ ದಾಕ್ಷಿಣ್ಯದಿಂದಲೇ ನಾವು, ಜೀವಚ್ಛವಗಳಾಗಿಯಾದರೂ ಉಳಿದೇವು .... ಪ್ರಜಾಪ್ರಭುತ್ವ ಎಂಬ ಹೆಸರಿನಲ್ಲಿ ಎಷ್ಟು ಜನರ ಜೀವ ತೆಗೆಯುತ್ತಾರೋ, ಎಷ್ಟೋ ಜನರು ಹೀನಾಯವಾಗಿ ಬದುಕುತ್ತಿದ್ದಾರೆ. ಅದು ಲೆಕ್ಕಕ್ಕೇ ಇಲ್ಲವಾಗಿದೆ. ಇವರು ಉಳಿಯಬೇಕಾದರೆ, ಈ ದೇವರುಗಳು ನಿಯಮಗಳನ್ನು ಪಾಲಿಸಬೇಕು, ಅವರು ಪ್ರತಿಭಟಿಸುವ ಹಾಗಿಲ್ಲ, ಪ್ರತಿಭಟಿಸಿದರೆ, ಯಾವುದೋ ನೆಪದಲ್ಲಿ ಅವರ ಎಲುಬುಗಳು ಪುಡಿ ಪುಡಿ ಆಗುವವು. ದೊಡ್ಡವರ ಸುಖಕ್ಕಾಗಿ ಸಾವಿರ ಸಮಸ್ಯೆಗಳು ಬಂದರೂ ಅವು ಈ ಸಾಮಾನ್ಯ ದುಡಿವ ವರ್ಗದ ಶ್ರಮಜೀವಿಗಳ ಮುಖಾಂತರ ಆ ಸಮಸ್ಯೆಗಳು ಪರಿಹಾರವಾಗಬೇಕು. ಈ ದೇವರುಗಳೆಂಬ ದೊಡ್ಡವರ ನಾನಾ ಮುಖಗಳು ಅವರ ನಾನಾ ವೇಷಗಳು ಈ ಕವನದಲ್ಲಿ ಮೂಡಿಬಂದಿವೆ.

ನಗ್ನಮುನಿಯ ಕವನಗಳಲ್ಲಿ ಸಾಮಾಜಿಕ ಕಳಕಳಿ, ಶೋಷಿತವರ್ಗದ ಶ್ರಮಜೀವಿಗಳ, ಢಂಭಾಚಾರಿ ರಾಜಕಾರಣಿಗಳ, ಧನಿಕರ, ಸಂಪ್ರದಾಯ ವ್ಯವಸ್ಥೆ ಮುಂತಾದವುಗಳ ಬಗೆಗೆ ವಿರೋಧ ವ್ಯಕ್ತವಾಗಿದೆ. ಒಟ್ಟಾರೆ ಇವರದು ಸಾಮಾಜಿಕ ಬದಲಾವಣೆ ಇವರ ಗುರಿ. ವಾಸ್ತವಿಕತೆಯ

ನೆಲೆಯಲ್ಲಿ ನಿಂತು ಸಾಮಾಜಿಕ ಇಡೀ ಸ್ಥಿತಿಯನ್ನು ಅವರ ಕಾವ್ಯದಲ್ಲಿ ಒಡಮೂಡಿಸಿದ್ದಾರೆ. ಇವರ ಕಾವ್ಯ ಮಾತ್ರ ಶೋಷಿತ ವರ್ಗದ ಪರವಾಗಿ, ಸಮಾಜದ ಬದಲಾವಣೆಗಾಗಿ ಕಂಕಣ ಬದ್ಧವಾಗಿದೆ.

**ನಿಖಿಲೇಶ್ವರ**

ದಿಗಂಬರ ಕಾವ್ಯ ಉದಯಿಸಲು ನಿಖಿಲೇಶ್ವರ ಕವಿಯ ಪಾತ್ರವು ಸಹ ಮಹತ್ವದ್ದಾಗಿದೆ. ನಿಖಿಲೇಶ್ವರ ತೆಲಂಗಾಣದ ನಲ್ಗೊಂಡ ಜಿಲ್ಲೆಯ ವೀರಪಲ್ಲಿಯಲ್ಲಿ ಜನಿಸಿದರು. ಹುಟ್ಟಿದಾಗ ಅಳದೇ ಇದ್ದುದನ್ನು ಕಂಡು, ಆ ಮಗು ಸಾಯುವ ಸ್ಥಿತಿಯಲ್ಲಿ ಇದೆಯೆಂದು ನೋಡಿ, ಕಸದಲ್ಲಿ ಎಸೆದಂತಹ ಮಗುವೇ ಈ ನಿಖಿಲೇಶ್ವರ. ನಂತರ ಹೇಗೋ ಬೆಳೆದು ದೊಡ್ಡವನಾದ, ಮೊದಲು ಹಳ್ಳಿಯಲ್ಲಿ ವಿದ್ಯಾಭ್ಯಾಸ ಮಾಡಿದ ಬಳಿಕ ಹೈದರಾಬಾದ್ ರಸ್ತೆಗಳಲ್ಲಿ ಓದಲಾರಂಭಿಸಿದರು. ಇವರಿಗೆ ಇಷ್ಟವಾದದ್ದು 'ರವಿಶಂಕರರ ಸಿತಾರ್'. ಜೀವನವು ಒಂದು ಪ್ರಯೋಗಾಲಯ ಎಂದು ನಂಬಿದವರು. ಹೊಸ ತಲೆಮಾರಿಗೆ, ಹೊಸದಾದ ಸಮಾಜ ವ್ಯವಸ್ಥೆಯನ್ನು ಕಟ್ಟಿಕೊಡಬೇಕಾದರೆ ಪ್ರತಿಯೊಬ್ಬರಲ್ಲಿ ವೈಯಕ್ತಿಕ ತ್ಯಾಗ ಮನೋಭಾವನೆ ಇರುವುದು ಅವಶ್ಯಕ ಎಂದು ತಿಳಿದವರು. ಇತರರು ಹಿಂದಿ ಮತ್ತು ಇಂಗ್ಲಿಷ್ ಭಾಷೆಯಲ್ಲಿ ಬರವಣಿಗೆ ಮಾಡಿದ್ದಾರೆ. ಹೈದರಾಬಾದಿನ ಶಾಲೆಯೊಂದರಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿ ಕೆಲಸ ನಿರ್ವಹಿಸಿದ್ದಾರೆ.

ನಿಖಿಲೇಶ್ವರರು ದಿಗಂಬರ ಕವಿಗಳ ಜೊತೆ ಸೇರಿ ಪರಿಣಾಮಕಾರಿಯಾಗಿ ಕವನಗಳನ್ನು ರಚಿಸಿದರು. ಇವರ ಕವನಗಳಲ್ಲಿ ಇಂದಿನ ಸಾಮಾಜಿಕ ಸ್ಥಿತಿಗತಿಗಳು ಮೂಡಿಬಂದಿವೆ. ದಿಗಂಬರರ ಎಲ್ಲಾ ಕವಿಗಳಂತೆ ಇವರ ಕವನಗಳಲ್ಲಿ ಅಶ್ಲೀಲವೆಂಬ ಅಸಭ್ಯ ಪದಗಳನ್ನು ಕಾಣಬಹುದು. ಇವರದು ಸಮಕಾಲೀನ ಜೀವನದ ಬಗೆ ಇವರ ಕಾವ್ಯದಲ್ಲಿ ದೃಷ್ಟಿಹರಿಸುವುದನ್ನು ಕಾಣಬಹುದು. ಜೀವನದ ಪ್ರಾಮಾಣಿಕತೆ, ಸರಳತೆ, ಅನುಭವಗಳ ಅಭಿವ್ಯಕ್ತಿಯನ್ನು ಇವರ ಕವನಗಳಲ್ಲಿ ಕಂಡುಕೊಳ್ಳಬಹುದು. ಸಂಪ್ರದಾಯದ ವಿರುದ್ಧ ಪ್ರತಿಭಟನೆಯು ಸಹ ಇವರ ಕವನಗಳಲ್ಲಿ ಆವಿರ್ಭವಿಸಿದೆ.

ನಿಖಿಲೇಶ್ವರರ 'ಆತ್ಮಯೋನಿ' ಕವನದಲ್ಲಿ ಹಿಂದಿನ ಪ್ರಾಚೀನ ಸಾಹಿತ್ಯ ಪರಂಪರೆಯನ್ನು ಅಲ್ಲಗಳೆದು ಹೊಸ ಸೃಷ್ಟಿಯಾಗಬೇಕೆಂದು ಹೊಸತನವನ್ನು ಕಂಡುಕೊಳ್ಳಬೇಕೆಂದು ಒತ್ತಿ ಒತ್ತಿ ಹೇಳುತ್ತಾರೆ.

''ನನ್ನಯನು ರಾಜ ರಾಜ ನರೇಂದ್ರನು
ಗೂಡಿನಲ್ಲೇ
ಮಲಗಿರಲಿ
ಎಚ್ಚರಿಸಬೇಡ
ಬೆನ್ನು ಚಪ್ಪರಿಸಿ ಗುಂಡಿಗೆ ಎಳೆಯುತ್ತಾನೆ

ಪ್ರಬಂಧಾಂಗನೆಯರ ತೊಡೆಯ
ತಾಳೆ ಛಂತಿಯ
ಮುಟ್ಟಿದರೇ ಕಾಲು ಮುರಿದುಬಿಡು,
ತಲೆ ಒಡೆದುಹಾಕು
ಪಂಡಿತವರ್ಯಾ
ಆ ಮೊಲೆಗಳು ಯಾರೂ ಏರದ
ಶಿಖರಗಳು.
ಗ್ರಾಮಫೋನ್ ಪ್ಲೇಟಿನಂತೆ ತಲೆಯಾಡಿಸಬೇಡ
ನವಸೃಷ್ಟಿಯನ್ನು ತುಚ್ಛೀಕರಿಸಬೇಡ
ರೊಮ್ಯಾಂಟಿಕ್ ಕವಿಯ ನಪುಂಸಕರು ಹಾವಭಾವಗಳಿಗೆ ಸವಾಲು
ಹಾಕುತ್ತೇನೆ.
ಮತ್ತಿನ ಔಷಧಿ ತಿಂದು ಮಲಗಿದ
ನವ್ಯ ಕವಿಯೇ?
ನೀನು ನಯಾಗರಾ ಜಲಪಾತದಲ್ಲಿ
ಹಾರಬಲ್ಲೆಯಾ...? ಹಾರದೇ ಇದ್ದರೂ
ನಿಮಗೆಲ್ಲಾ ಅಭಿನಂದನೆ''[೨]

ಪ್ರಾಚೀನ ಕವಿಗಳು ರಾಜಮಹಾರಾಜರ ಆಶ್ರಯದಲ್ಲಿ ಇದ್ದುಕೊಂಡು ತನ್ನ ಆಶ್ರಮದಾತನಿಗೆ ಹೆಚ್ಚು ಮನ್ನಣೆ ಕೊಟ್ಟಿರುವುದನ್ನು ನನ್ನಯ್ಯನು ರಾಜರಾಜನರೇಂದ್ರನ ಗುಡಿಯಲ್ಲೇ ಮಲಗಿರಲಿ ಎಂದು ನೆನಪಿಸಿರುತ್ತಾರೆ. ಪಂಡಿತವರ್ಯಾ! ಆ ಮೊಲೆಗಳು ಯಾರು ಏರದ ಶಿಖರಗಳು. ಪಂಡಿತವರ್ಯರ ಮಾತುಗಳಿಂದ ಹೊರಬರಬೇಕು. ಅವರ ಮಾತುಗಳಿಗೆ ತಲೆಯಾಡಿಸಬೇಡವೆಂದು ಹೇಳಿ, ಹೊಸ ಸೃಷ್ಟಿಯನ್ನು ತುಚ್ಛಭಾವನೆಯಿಂದ ನೋಡದೆ, ಹೊಸತನ್ನು ಸ್ವೀಕರಿಸಬೇಕೆಂಬುದು ಕವಿಯ ಆಶಯ. ಭಾವಕವಿಗಳ ನಪುಂಸಕ ಹಾವಭಾವಗಳಿಗೆ ಸವಾಲು. ಪ್ರಗತಿಶೀಲ ಸಾಹಿತಿಗಳು ಮತ್ತಿನ ಔಷಧಿ ತಿಂದು ನಿದ್ರಿಸಿದ್ದಾರೆ. ಈ ಕವಿಗಳು ಜನ ಸಮೂಹದಿಂದ ದೂರ ಉಳಿದು ಕಾವ್ಯ ರಚಿಸಿರುವುದನ್ನು ಖಂಡಿಸುತ್ತಾರೆ. ಹಾಗೂ ಇಂದಿನ ನಾಗರಿಕತೆಯಿಂದ, ಯಾಂತ್ರಿಕತೆಯಿಂದ ಉಂಟಾದ ನಿರಾಶೆ, ಆವೇಶ, ಮನಸ್ಸಿನ ಉದ್ವೇಗ, ಹೊಸ ಸೃಷ್ಟಿಯ ಬಗೆಗಿನ ಕುತೂಹಲ ಆತ್ಮಯೋನಿ ಕವನದಲ್ಲಿ ಪ್ರಕಟವಾಗಿದೆ. ಮಾನವನ ಬದುಕು ಹೇಗೆ ಇದೆ, ಅವರ ಅಭಿವ್ಯಕ್ತಿ ತಿಳಿಯುವುದು ಆವಶ್ಯ. ಹೊಸ ಸೃಷ್ಟಿಯ ಆಶಾಭಾವನೆಯು ಈ ರೀತಿ ವ್ಯಕ್ತಪಡಿಸಿದ್ದಾರೆ.

''ವಚನೆ ರಚನೆಯಿಲ್ಲ
ಕವಿತಾ ಸ್ವಾರಸ್ಯವಿಲ್ಲ
ಚಪ್ಪಟಿಸಿದ ಚಪಾತಿಯಂತೆ

ಕಡತದ ನಡುವಿನ
ಕಾಗದದ ಭೂತವಾಗಿ
ನೀನು ಆರೋಹಿಸಿರುವೆ
ಬಿಗ್ ಬೆನ್ ಅಗ್ನಿಪರ್ವತವನ್ನು
ಇನ್ನು ಸ್ಫೋಟಿಸಲಿ!
ಆ ಜ್ವಾಲಾಮುಖಿಯ ದಾವಾನಲದಲ್ಲಿ
ಸಕಲವೂ ಭಸ್ಮವಾಗಲಿ!
ಸ್ಮಶಾನ ಎನಿಸಲಿ
ಆತ್ಮಯೋನಿಯಿಂದ
ದಿಗಂಬರ ಕಾವ್ಯದಲ್ಲಿ
ಮತ್ತೊಬ್ಬ ಮತ್ತೊಬ್ಬ
ಎದೆತುಂಬ ಹಗುರವಾಗಿ
ಉಸಿರಾಡಿ
ಹುಟ್ಟಿಬರಲಿ
ಹುಟ್ಟಿ ಬರಲಿ.'' [೭೭]

ನಿಖಿಲೇಶ್ವರರಿಗೆ ದೇಶದ ಬಗ್ಗೆ ಜನರ ಬಗ್ಗೆ ತುಂಬ ಅಭಿಮಾನ, ಅಪಾರ ಪ್ರೀತಿ 'ನನ್ನ ದೇಶದಲ್ಲೇ ನಾನು ಏಕಾಂಗಿ' ಕವನದಲ್ಲಿ ಸಾಮಾಜಿಕ ಕಳಕಳಿಯು ವ್ಯಕ್ತವಾಗಿದೆ. ಅತೀ ಕೆಳವರ್ಗದ ಜನರು ಸಮಸ್ಯೆಗಳ ಮಧ್ಯ ಹೇಗೆ ಸಿಕ್ಕಿಹಾಕಿಕೊಂಡು ನರಳುತ್ತಿದ್ದಾರೆ ಎಂಬುದು ವ್ಯಕ್ತವಾಗಿದೆ. ನನ್ನ ದೇಶವು ನನಗಾಗಿ ಮೀಸಲಿರಿಸಿದ ಮಹಾಸಮಸ್ಯೆಗಳ ನೇಣು ಪಾಶವು, ಅನುಕ್ಷಣ ತಲೆ ಮೇಲೆ ಹುರಿ ತಿರುಗುತ್ತದೆ. ದೇಶ ಉಳಿಸಿದ ಮಹಾಸಮಸ್ಯೆಗಳ ನೇಣಿನ ಕುಣಿಕೆಗೆ ಜನರು ಸಿಕ್ಕಿ ಹೇಗೆ ಈ ಸಂಕೋಲೆಗಳಲ್ಲಿ ಒದ್ದಾಡುತ್ತಿದ್ದಾರೆಂಬುದು ಮುಖ್ಯ ವಿಚಾರ. ಮುಂದುವರಿದು ಹಸಿವು ನಿರುದ್ಯೋಗ ಮೊದಲಾದ ಅನೇಕ ಸಮಸ್ಯೆಗಳು ಹೇಗೆ ಹುರಿಗೊಂಡಿವೆ ಎಂಬುದನ್ನು ತಿಳಿಸಿ; ದೇಶದಲ್ಲಿ ಸ್ವಾರ್ಥಭರಿತ ವಾತಾವರಣದಲ್ಲಿ ಪ್ರತಿಯೊಬ್ಬರು ಪರಕೀಯರಂತೆ ಬಾಳುವೆ ಮಾಡುತ್ತಿದ್ದಾರೆ. ಈ ಕವನದಲ್ಲಿ ಇಡೀ ದೇಶದ ಪರಿಕಲ್ಪನೆಯು ಮೂಡಿಬಂದಿದೆ.

'' ದಟ್ಟವಾಗುತ್ತಿರುವ ಹಸಿವು ನಿರುದ್ಯೋಗದ
ಮುಳ್ಳುಕಂಟೆಗಳಲ್ಲಿ
ಅಂದವಾದ ಹೂಗಳು
ಅರಳಿದ ಹೂಗಳ ದಳಗಳ ನಡುವೆ
ರೆಕ್ಕೆ ಮುರಿದಿರುವ ಅಸಹಾಯ ಸ್ಥಿತಿಯ
ವಿಷಾದ!

.........................

.........................

.........................

ಕೋಳಿ ಪಂದ್ಯಾಟ
ಕೋಳಿಗಳಂತೆ ಕಾದಾಡಿದ ವೀರರ ಹುಚ್ಚಾಟಗಳು
ನೀರಿನಲ್ಲಿ ಒಬ್ಬರ ತಲೆ ಒಬ್ಬರು ಕಡಿದ
ಬೊಬ್ಬಿಲಿ ಶೂರರಾಟಗಳು
ಗಾಳಿಗೆ ಆರಿಹೋದ ನೀಲಾಂಜನಗಳು
ಆಮೇಲಿನ ಆಯೋಮಯದ ಅಂಧಕಾರದಲ್ಲಿ
ಸಾಲಾಗಿ ನಿಂತ ಕರೆಂಟು ದೀಪಗಳಲ್ಲಿ
ನಾನು ನನ್ನ ದೇಶದಲ್ಲಿಯೇ ಪರದೇಶಿ!
ಕುಡಿಯುತ್ತಿರುವ ಏಕಾಂಗಿ!
ಸ್ನೇಹ ನೀಡದ ದೇಶದಲ್ಲಿ
ಸ್ನೇಹವಿಲ್ಲದ ಪ್ರತಿಜೀವಿಯೂ
ಒಂದೊಂದು ದ್ವೀಪ''[66]

ಈ ಕವನದಲ್ಲಿ ದೇಶದ ಬಗ್ಗೆ ನಿರಾಶೆಯು ವ್ಯಕ್ತವಾಗಿದೆ.

ನಿಖಿಲೇಶ್ವರರ ಕವನಗಳು ಸಾಮಾಜಿಕ ಕಳಕಳಿಯನ್ನು ಪ್ರತಿಬಿಂಬಿಸುತ್ತವೆ. ಸ್ವಾತಂತ್ರ್ಯಾನಂತರ ದೇಶದ ಪರಿಸ್ಥಿತಿಯು, ಶೋಚನೀಯವಾಗಿತ್ತು. ಸಮಾಜದ ಅತಿ ಕೆಳವರ್ಗದ ಜನರ ಸ್ಥಿತಿಗತಿಗಳು ಹಾಗೂ ಅವರ ಸಮಸ್ಯೆಗಳು ಇನ್ನೂ ಹೆಚ್ಚಿಗೆ ಹದಗೆಟ್ಟಿ ಹೋದವು. ಇಂಥ ಸಂದರ್ಭದಲ್ಲಿ ಅವರು ಕವನಗಳ ಮೂಲಕ ಸಾಮಾಜಿಕ ಕ್ರಾಂತಿ ಮಾಡಿದರು. ಮುಖ್ಯವಾಗಿ ಹದಗೆಟ್ಟಿದ ದೇಶದ ಪರಿಸ್ಥಿತಿಯನ್ನು ಅವರ ತೀಕ್ಷ್ಣ ದೃಷ್ಟಿಯಿಂದ ಪರಿಗ್ರಹಿಸಿ, ಅಷ್ಟೇ ತೀಕ್ಷ್ಣವಾದ ಕಾವ್ಯದ ಮುಖಾಂತರ ಅವರು ಸಮಾಜದ, ದೇಶದ ಚಿತ್ರಣವನ್ನು ಎತ್ತಿ ತೋರಿಸಿದ್ದಾರೆ.

'ಹುಚ್ಚಾಸ್ಪತ್ರೆಯೆಲ್ಲಾ ಖಾಲಿ' ಕವನದಲ್ಲಿ ಧನಿಕರ ವೈಭವವು ಹಾಗೂ ಶೋಷಿತರನ್ನು, ಶ್ರಮಜೀವಿಗಳನ್ನು ಹೇಗೆ ಬಳಸಿಕೊಳ್ಳುತ್ತಾರೆಂಬುದು ವ್ಯಕ್ತವಾಗಿದೆ. ಹಾಗೂ ಜನರು ಹೇಗೆ ಧನಿಕರಿಗೆ ದಾಸರಾಗುತ್ತಾರೆಂಬ ವಾಸ್ತವತೆಯು ಈ ಕವನದ ಮುಖ್ಯ ತಿರುಳು.

'ಕೆಲವು ಕೋಟೀಶ್ವರರ ಪಾನಪಾತ್ರೆಯಲ್ಲಿ ಕೋಟ್ಯಾನುಕೋಟಿ ಸಾಮಾನ್ಯರ ಮಂಜುಗಡ್ಡೆ' ನಾಗರಿಕರು. ಎಷ್ಟೋ ವರ್ಷಗಳಿಂದ ಹಾಗೂ ಅವರ ಬೆವರಿನ ರಕ್ತದ ಹನಿಗಳು ಧನಿಕರ ಪಾತ್ರೆಯಲ್ಲಿ ಲೀನವಾಗಿವೆ ಎಂದು ಕವಿಯು ಹೇಳುತ್ತಾರೆ. ಸಾಮಾಜಿಕ ಸ್ಥಿತಿಯನ್ನು ಕೆಳವರ್ಗದ ಜನರನ್ನು ದುಡಿಸಿಕೊಳ್ಳುವ ರೀತಿಯು ಇಲ್ಲಿ ವ್ಯಕ್ತವಾಗಿದೆ.

''ಕರ್ಮಮಂತ್ರವು ಜೊಲ್ಲು ಸುರಿಸುತ್ತಿರುವಾಗ
ಕರ್ಮಶೂರರನ್ನು ಮೊಸಳೆಗಳ ಪಾಲಿಗೆ ಬಿಟ್ಟ
ವಾದ್ಯ ಸಂಗೀತದ ಮುಂದೆ ಉಣ್ಣೆಯ ಕೋಟುಗಳ ಕುಣಿತ
ಎನಿತು ವರ್ಷಗಳ ಕಣ್ಣೀರು, ನೆತ್ತರ ಹನಿಗಳು ಸೇರಿ
ಈ ನಾಗರಿಕ ಬೀದಿ ಷೋ ಕೇಸುಗಳಲ್ಲಿ
ಮಜವಾಗಿ; ಮನಿಪರ್ಸಿನ ದಾಸರಾಗಿ
ನೆಲದ ಮೇಲೆ ಗೇಣೆತ್ತರದಲ್ಲಿ ನಡೆವ
ಅದೃಷ್ಟವಂತರ ನಡುವೆ
ನೀನು-ನಾನು ನಾಲಿಗೆ ಚಾಚಿ ಕೂತಿರುವ ಹುಚ್ಚು ನಾಯಿಗಳು
ನಿಜಾಂ ನವಾಬನಂತಹ ಫಕೀರ ಜೀವನದಲ್ಲಿ
ನಿಜವಾಗಿ ನಾವೆಲ್ಲ ವಾರಸುದಾರರು.''

ಎಂದೂ ದೊಡ್ಡವರ ವೈಭವದ ಜೀವನದಲ್ಲಿ ಜೊಲ್ಲು ಸುರಿಸುವ ನಾಯಿಗಳಂತೆ ಜನರು ಕಾಣಿಸುತ್ತಾರೆ. ಆದರೆ ನಿಜವಾಗಿ ಐಶ್ವರ್ಯವನ್ನು ಅನುಭವಿಸುತ್ತಿರುವುದು ಈ ಧನಿಕರದು ಶ್ರಮಜೀವಿಗಳ ದುಡಿಮೆಯ ಫಲ. ಈ ದುಡಿವ ವರ್ಗದ ಜನರು ಬೀದಿಯಲ್ಲಿ ಮಿಠಾಯಿ ಅಂಗಡಿ ಎದುರಿನಲ್ಲಿ ಒಬ್ಬೊಬ್ಬರು ಮತ್ತೆ ಮತ್ತೆ ಬಂದು ನಾಯಿಗಳಂತೆ ನಾಲಿಗೆ ಚಾಚುವರು; ಆದರೆ ಈ ವರ್ಗದ ಜನರು ಧನಿಕರ ಸೇವೆಯಲ್ಲೇ ಮಗ್ನರಾಗುತ್ತಾರೆ. ಈ ಕವನದಲ್ಲಿ ಧನಿಕರ ವೈಭವ, ಸಾಮಾನ್ಯ ಜನರ ದುಡಿಮೆ, ಕೆಳವರ್ಗದ ಸ್ಥಿತಿಗತಿ, ಸಾಮಾಜಿಕ ಕಳಕಳಿ ಮೂರ್ತಗೊಂಡಿವೆ.

ನಿಖಿಲೇಶ್ವರ ಕವನಗಳಲ್ಲಿ ವಾಸ್ತವತೆಯ ಚಿತ್ರಣವು, ಶೋಷಿತ ವರ್ಗದ ಚಿತ್ರಣ, ಶೋಷಿತ ವ್ಯವಸ್ಥೆಯ ವಿಭಿನ್ನವಾದ ರೂಪಗಳನ್ನು ವಿಡಂಬನಾತ್ಮಕವಾಗಿ ಕಾಣಬಹುದು. ಹಾಗೂ ಅವರ ಸಾಮಾಜಿಕ ಆಶಯಗಳನ್ನು ಕಂಡುಕೊಳ್ಳಬಹುದು. ವಾಸ್ತವತೆಯನ್ನು ಬಯಲಿಗೆಳೆಯುವುದು, ವಿಷಮತೆಗಳ ಬಗ್ಗೆ ಕೆರಳುವುದು, ಒಟ್ಟಾರೆ ಸಮಾಜ ಸುಧಾರಿಸಬೇಕೆನ್ನುವುದು ಈ ಕವಿಯ ಮುಖ್ಯ ಆಶಯವಾಗಿದೆ. ಹಾಗೂ ಯುವಜನರಿಗೆ ಸುಂದರ ಸಮಾಜ ನಿರ್ಮಿಸಲು ಆಹ್ವಾನವನ್ನು ನೀಡುತ್ತಾರೆ.

'ಶವಭೋಗಿ' ಕವನದಲ್ಲಿ ರಾಜಕೀಯ ವ್ಯಕ್ತಿಗಳ ಗೋಸುಂಬೆತನವನ್ನು ಹೊರಗೆಳೆದಿದ್ದಾರೆ. ಆರ್ಷೇಯ ತಮ್ಮ ಧರ್ಮವೆಂದು ಕುಲಧರ್ಮವನ್ನು ಭೋದಿಸುವ ಆಚಾರ್ಯರು, ಬುದ್ಧಿಜೀವಿಗಳು ತಮ್ಮ ನಿಜರೂಪವನ್ನು ತೋರಿಸದೆ ದುರ್ನಡತೆಗಳ, ಹೊಲಸಿನ ಸುತ್ತ ತಮ್ಮ ಗೋಸುಂಬೆತನವನ್ನು ಪ್ರದರ್ಶಿಸುವ ಬೆನ್ನು ಮೂಳೆ ಇಲ್ಲದ ಬುದ್ಧಿ ಜೀವಿಗಳು, ಹಾಲಿನಲ್ಲಿ ವಿಷಹಾಕುವ ನಾಯಕರು ಇವರೆಲ್ಲಾ ಮಾನವ ಸೌಂದರ್ಯದೊಂದಿಗೆ ರಮಿಸುವ ಶವಭೋಗಿಗಳೆಂದು, ನಿಖಿಲೇಶ್ವರ ಆಕ್ರೋಶವನ್ನು ವ್ಯಕ್ತಮಾಡಿದ್ದಾರೆ.

''ಹೆಣದ ಬಟ್ಟೆಗಳ
ಬಿಚ್ಚುತ್ತಿರುವ ನಾಯಕರು
ಆರ್ಷಧರ್ಮವೆಂದು ಕುಲಧರ್ಮವನ್ನು ಬೋಧಿಸುತ್ತಾ
ಅರಣ್ಯ ತತ್ವ ಪ್ರತಿಪಾದಿಸುವ ಆಚಾರ್ಯರು
..............................
..............................
ಅಸೀಮ ಮಾನವಾತ್ಮದಲ್ಲಿ
ಘನೀಕೃತ ಸೌಂದರ್ಯದೊಂದಿಗೆ
ರಮಿಸುವ ಶವಭೋಗಿಗಳು.''[20]

ಎಂದು ಬುದ್ಧಿಜೀವಿಗಳು, ನಾಯಕರುಗಳು, ಆಚಾರ್ಯರುಗಳ ವಿಚಾರಗಳನ್ನು ಖಂಡಿಸಿ ತಮ್ಮ ಆಕ್ರೋಶವನ್ನು ವ್ಯಕ್ತಪಡಿಸಿದ್ದಾರೆ.

ನಗರಜೀವನದ ಬಗೆಗೆ ನಿಖಿಲೇಶ್ವರರ ಕವನದಲ್ಲಿ ಹಾಸ್ಯವಾಗಿ ಮೂಡಿಬಂದಿವೆ. ಕವಿಗಳಿಗೆ ವಾಸ್ತವತೆಯ ಚಿತ್ರಣವನ್ನು ಕೊಡಲು ಅದಕ್ಕೆ ಕೊನೆಯಿಲ್ಲವೆಂಬುದಾಗಿದೆ. ನಗರಗಳು ಆಧುನಿಕತೆಯ ತವರುಗಳು. ಮಾನವನು ವಿಜ್ಞಾನ-ತಂತ್ರಜ್ಞಾನ ಕ್ಷೇತ್ರಗಳಲ್ಲಿ ತುಂಬ ಸಾಧನೆ ಮಾಡಿದ್ದಾನೆ. ಈ ತಾಂತ್ರಿಕತೆಯು ನಗರಗಳು ಬೆಳೆಯಲು ಕಾರಣ. ನಗರಗಳಲ್ಲಿ ಅನೇಕ ಕಾರ್ಖಾನೆಗಳು ಹುಟ್ಟಿಕೊಂಡು, ಜನರನ್ನು ಹಳ್ಳಿಯಿಂದ ನಗರದೆಡೆಗೆ ಸೆಳೆದುವು. ನಗರಗಳಿಗೆ ಅಂತರರಾಷ್ಟ್ರೀಯ ಕೇಂದ್ರಗಳೊಡನೆ ಸಂಪರ್ಕ, ವಾಣಿಜ್ಯ ವ್ಯವಹಾರ, ವಿದ್ಯೆ, ಮನೋರಂಜನೆ, ವೈದ್ಯಕೀಯ, ಆಡಳಿತ ವ್ಯವಸ್ಥೆ ಕಚೇರಿಗಳು, ಕಲೆಗಳಿಗೆ ಪ್ರೋತ್ಸಾಹ, ಸಾರಿಗೆ ಸಂಪರ್ಕ ಸೌಲಭ್ಯಗಳು, ಉದ್ದಿಮೆಗಳ ಸ್ಥಾಪನೆ ಮುಂತಾದವುಗಳಿಂದ ನಗರಗಳು ರಭಸದಿಂದ ಬೆಳೆಯಲು ಕಾರಣಗಳೆನಿಸಿದುವು. ನಿಖಿಲೇಶ್ವರರ ದಿಗಂಬರ ಕಾವ್ಯದ 'ನೀನು ಹೇಳಿದ್ದು ಸುಳ್ಳಲ್ಲ' ಎಂಬ ಕವನದಲ್ಲಿ ನಗರ ಜೀವನ ಅದರ ಪರಿಣಾಮದ ಮುಖ್ಯ ಆಶಯವಾಗಿದೆ.

''ಹೌದು ನಿಜ,
ನೀನು ಹೇಳಿದ್ದು ಸುಳ್ಳಲ್ಲ
ಈ ದೇಶದ ಪ್ರತಿ ನಗರವೂ ರಸಿಗೆ ರಸಿಗೆಯಾದ ಮಹಾಗಾಯ!
ದೂರದಿಂದ ಅದೊಂದು ಕೆಂಪು ಗುಲಾಬಿ
ಹತ್ತಿರ ಹೋದರೆ ಅದೊಂದು ನೆತ್ತರು ಸುರಿವ ಗಾಯ.''[21]

ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ ಎನ್ನುವ ಹಾಗೆ ದೂರದಿಂದ ತುಂಬ ಆಕರ್ಷಕವಾಗಿ ಕೆಂಪು ಗುಲಾಬಿಯಂತೆ ಕಾಣುವ ನಗರವೂ, ಆದರೆ ಅದರ ಒಳಗೆ ಹೊಕ್ಕು ನೋಡಿದರೆ, ಅದರ ಅನುಭವ

ಕಂಡರೆ ರಕ್ತ ಸ್ರಾವವಾಗುವ ವ್ರಣದಂತೆ ಮನಸ್ಸಿಗೆ ಜಿಗುಪ್ಸೆ ಬರುತ್ತದೆ. ಈ ಕವನದಲ್ಲಿ ವಾಸ್ತವತೆಯ ಚಿತ್ರಣವನ್ನು ಕೊಟ್ಟಿದ್ದಾರೆ. ಕವನದಲ್ಲಿ ಜನರ ಪರಿಸ್ಥಿತಿ ಸಾಮಾನ್ಯ ಬದುಕು, ಬವಣೆ ಇತ್ಯಾದಿಯಾಗಿ ಬೆಳೆಯುತ್ತಾ ಹೋಗುತ್ತದೆ.

ಈ ದೇಶದಲ್ಲಿ ತಿನ್ನಲು ಅನ್ನವಿಲ್ಲದಾಗ, ಬಡವರು, ಭಿಕ್ಷುಕರು, ಉಪವಾಸ ಸಾಯುತ್ತಿರುವಾಗ, ಈ ಮುಗ್ಧರು ನಾಡಿನ ತೋಳಗಳಿಗೆ ಬಲಿಯಾಗುತ್ತಿದ್ದಾರೆ. ನಾಯಕರು ಹಣದ ಗುಲಾಮರಾಗಿ ತುಂಬು ಜೀವನ ನಡೆಸುತ್ತಿದ್ದಾರೆ. ಅವರು ಮಠಕ್ಕಾಗಿ, ದೇವರಿಗಾಗಿ ಮತ್ತು ರಾಜರ ಸಮಾಧಿಗಳಿಗಾಗಿ ದುಂದುವೆಚ್ಚವನ್ನು ಮಾಡುತ್ತಾರೆ. ಆದರೆ ದೀನರಿಗೆ ತುತ್ತು ಅನ್ನ ನೀಡಲು ಅಸಹಾಯಕರು. ಆದರೆ ಬಂಗಾರದ ಗೋಡೆಗಳನ್ನು ಕಿರೀಟಗಳನ್ನು ಸ್ಥಾಪಿಸುತ್ತಾರೆ. ಆದರೆ ಬಡವರ ಅಭಿವೃದ್ಧಿ ಅಲ್ಲ.

''ಯಾರಪ್ಪಕ್ಕೆ ಅವರು ಹಣದ ಗುಲಾಮರಾಗಿದ್ದಾಗ
ಭಿಕ್ಷುಕರು - ಬಡವರು - ಉಪವಾಸ ಸಾಯುತ್ತಿರುವವರು
ಈ ಕಾಡಿನಲ್ಲಿ ತೋಳಗಳಿಗೆ ಬಲಿಯಾಗುತ್ತಿರುವಾಗ
ನಿಜ ಹೇಳು, ಮತ್ತೊಮ್ಮೆ ನಿಜ ಹೇಳು?
ದೇವರಿಗಾಗಿ ರಾಜ ಸಮಾಧಿಗಾಗಿ
ಬಂಗಾರದ ಗೋಡೆಗಳ ಕಟ್ಟುವ ಈ ದೇಶದಲ್ಲಿ
ಮಣ್ಣಿನ ಗೋಡೆಗಳ ಗೋಳು
ಕೇಳುವವರಾರು? ''[31]

ದಿಗಂಬರ ಕಾವ್ಯವು ಸಂಪ್ರದಾಯ, ಪರಂಪರೆ, ಗತಕಾಲದ ವೈಭವ ಅಂಧವಿಶ್ವಾಸಗಳನ್ನು ಖಂಡಿಸುತ್ತದೆ. ಇಂಥ ಪರಂಪರೆಯನ್ನು ವಿಮರ್ಶಿಸುತ್ತಾ 'ನಮಸ್ಕಾರ 'ಕವನದಲ್ಲಿ ಪ್ರತಿಭಟನೆಯನ್ನು ವ್ಯಕ್ತ ಪಡಿಸಿದ್ದಾರೆ.

''ನಾನೇ ಎಲ್ಲರಿಗಿಂತ ಎತ್ತರದವನು
ಆದರೆ ನನ್ನ ಹಿಂದೆ
ನನಗಿಂತ ದೊಡ್ಡ ನೆರಳು
ನೆರಳಿನಲ್ಲಿ ಪ್ರತಿಫಲಿಸಿದ
ಬೆಳಕಿನ ಪ್ರವಾಹದಲ್ಲಿ ಮೂರು ಆಕಾರಗಳು
ಶೇಷ ಚರಿತ್ರೆಯ ನೆರಳು,
ಕ್ಷಣಕಾನಂದರ ಆವೇಶ
ಆದರ್ಶದ ಬೆಳಕಿನೊಳಗಿನ ವಿಷಾದ''[32]

ಚರಿತ್ರೆ ಉಳಿಸಿದ ಭಾರ; ಕ್ಷಣಿಕಾನಂದದ ಆವೇಶ; ಮೌಲ್ಯಗಳ ಬೆಳಕಿನಲ್ಲಿ ವಿಷಾದ, ಉಳಿಸಿದ ಗತಕಾಲದ ನೆನಪುಗಳನ್ನು ಮೆಲುಕು ಹಾಕುತ್ತಾರೆ. ಬದುಕಿನ ವಿವಿಧ ಹಂತಹಂತಗಳಲ್ಲಿ ನಿಗೂಢವಾದ ರಹಸ್ಯಗಳು ಅಡಗಿರುತ್ತವೆ. ವಾಸ್ತವತೆಯೇ ಗೊತ್ತಿಲ್ಲದ ನಾನೆಂಬ ಅಹಂಕಾರದಿಂದ ಬೀಗುವ ಮೇಧಾವಿಗಳ ಸಾಹಿತ್ಯವು ವ್ಯರ್ಥವೆಂದು ಹೇಳಿ, ಅವರು ಕೇವಲ ಶಿಲಾಶಾಸನದಂತೆ ನಿಂತಿದ್ದಾರೆ. ಅದರಿಂದ ಪ್ರಯೋಜನವಿಲ್ಲ. ಅಂಥವರು ತೊಲಗಿದರೆ, ಭವಿಷ್ಯತ್ತಿನ ಮಾರ್ಗ ಸುಗಮವಾಗಿ ಸಾಗುತ್ತದೆಂಬುದು ಕವಿಯ ಅಭಿಪ್ರಾಯ.

''ನಾನೆಂಬ ಅಹಂಕಾರದಿಂದ
ಬೀಗುವ ಮೇಧಾವಿಗಳೇ
ನೀವೊಂದು ಶಿಲಾಶಾಸನದಂತೆ ನಿಂತರೇನು ಸಾರ್ಥಕ
ನಿಮಗೂ ನಮಸ್ಕಾರ
ಅವರಿಗೂ ನಮಸ್ಕಾರ'' [೩೪]

'ಭಿಕ್ಷಾಟನೆ' ಕವನದಲ್ಲಿ ಹಳೆಯ ಗೊಡ್ಡು ಅಭ್ಯಾಸಗಳನ್ನೇ ಸಂಪ್ರದಾಯ ಮಾಡಿಕೊಂಡ ನಾಡಿನಲ್ಲಿ ಸಂಪ್ರದಾಯವನ್ನು ಖಂಡಿಸುತ್ತಾರೆ. ವಂದಿಮಾಗದ ನಪುಂಸಕ ಸಾಹಿತ್ಯ, ಒಂದು ವರ್ಗದ ವಿಶೇಷವನ್ನು ಹೊಗಳಿ ಜೇಬು ತುಂಬಿಕೊಳ್ಳುವ ಸಾಹಿತಿ ಭಿಕ್ಷುಕರು, ಅನಾಗರಿಕರನ್ನು ತುಚ್ಛೀಕರಿಸಿ, ತನಗೆ ಉನ್ನತವನ್ನು ನೀಡುವುದನ್ನು ಬಯಸಿದ್ದರೆ ಅದು ಎಂದಿಗೂ ಹೃದಯಬಲ ನೀಡದು ಎಂದು ಕವಿಗಳು ಹೇಳುತ್ತಾರೆ.

''ಒಂದು ವರ್ಗ ವಿಶೇಷವನ್ನು ಮುಗಿಲೆತ್ತರ ಮಾಡಿ
ಜೇಬು ತುಂಬಿಕೊಂಡ ಸಾಹಿತಿ ಭಿಕ್ಷುಕರು
ಸುಸಂಸ್ಕೃತರೆಂದೂ, ಸಂಸ್ಕೃತವೆಂಬ ಆಭರಣ ಧರಿಸಿ
ಅನಾಗರಿಕರನು ತುಚ್ಛೀಕರಿಸಿ
ಕೆಲರನು ಧೂಳೀ ಪಟ ಮಾಡಿ
ತನ್ನ ಉನ್ನತಿಯಲ್ಲಿ ಸಾಗುವ ನೀತಿ
ಭಿಕ್ಷೆ ಎತ್ತುವ ವರವ ನೀಡಬಹುದು; ಆದರೆ
ಎಂದೆಂದೂ ಹೃದಯಬಲ ನೀಡದು.'' [೩೫]

ಒಂದು ವರ್ಗದ ಮಹತ್ವವನ್ನು ಹೇಳುವ ಸಾಹಿತಿಗಳನ್ನು ಭಿಕ್ಷುಕ ಸಾಹಿತಿ ಎಂದು ಜರಿಯುತ್ತಾರೆ. ಅಂಥವರ ಸಾಹಿತ್ಯವನ್ನು ನಪುಂಸಕ ಸಾಹಿತ್ಯವೆಂದು ಜರಿದು ಹೃದಯಾಂತರದಿಂದ ಬರಬೇಕು. ವಾಸ್ತವತೆಯಲ್ಲಿ ಸಾಮಾಜಿಕ ಪರಿವರ್ತನೆಗೆ ಇಂದಿನ ಸ್ಥಿತಿಗನುಗುಣವಾಗಿ

ಸಾಹಿತ್ಯವಿರಬೇಕೆಂಬುದು ಕವಿಯ ಅಭಿಪ್ರಾಯ. ಸಂಪ್ರದಾಯ ಬಿಟ್ಟು ಹೊರಗೆ ಬಂದು, ಕಾವ್ಯ ರಚನೆ ಮಾಡಬೇಕೆಂದು ಕವಿ ಕಿವಿ ಮಾತು ಹೇಳುತ್ತಾರೆ.

'ಆಹ್ವಾನ' ಎಂಬ ಕವನದಲ್ಲಿ ಪ್ರಜಾಪ್ರಭುತ್ವದ ಹೆಸರಿನಲ್ಲಿ ರಾಜಕೀಯ ವ್ಯಕ್ತಿಗಳ ಪ್ರಲಾಪ, ಡೊಂಬಿ ಮಠಾಧೀಶರುಗಳ ಚಿಂತನೆಗಳು ಈ ದೇಶದಲ್ಲಿ ಪ್ರತಿಯೊಬ್ಬರಿಗೆ ಸಮಬಾಳು ಸಿಗಲು ನವಭಾರತ ಉದಯಿಸಲು ಎಲ್ಲರಿಗೆ ಆಹ್ವಾನ ನೀಡಿದ್ದಾರೆ ಕವಿ ನಿಖಿಲೇಶ್ವರರು.

ದಿಗಂಬರ ಕವಿಗಳು ಸ್ವಾತಂತ್ರ್ಯ ಬಂದ ನಂತರದ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಸಾಮಾಜಿಕ ದುಸ್ಥಿತಿಯನ್ನು ಚೆನ್ನಾಗಿ ನಿಂದಿಸಿ ಬರೆದಿದ್ದಾರೆ. ದಾರಿದ್ರ್ಯ, ಅಜ್ಞಾನ, ಧಾಸ್ಯಭಾವಗಳಲ್ಲಿ ಒದ್ದಾಡುತ್ತಿರುವ ಪ್ರಜೆಗಳನ್ನು ಎಲ್ಲರನ್ನೂ ಕುರಿಗಳಂತೆ ಮಾಡಿ ಓಟು ಪಡೆಯಲು, ಜನರಿಗೆಲ್ಲ ಆಶೆ ಪ್ರಲೋಭನೆಗಳನ್ನು ತೋರಿಸಿ, ಜನರನ್ನು ತಮ್ಮತ್ತ ಸೆಳೆಯಲು ಪ್ರಯತ್ನಿಸುವ, ಜನರನ್ನು ಗುಲಾಮರನ್ನಾಗಿ ಮಾಡುವ ಈ ದೇಶದ ದುಸ್ಥಿತಿಯನ್ನು ಈ ಕವನದಲ್ಲಿ ವ್ಯಕ್ತಮಾಡಿದ್ದಾರೆ.

''ಲಾರಿ ಲಾರಿಗಳ ತುಂಬ ತತ್ವ ಚಿಂತನೆಗಳ ಬರೆದು
ಬುಸುಗುಡುವ ಮುದಿಲಾರಿಯಂತೆ ಕಾವ್ಯಖಂಡಗಳ
ಎಡೆಬಿಡದೆ ಒದೆದು
ಮೆರೆವ ಕುಲಕುಲದ ಜಗದ್ಗುರುಗಳ
ಕುತರ್ಕಗಳ ಪ್ರಹರಿಸಲು ಬಾರಾ'' [31]

ಲಾರಿಲಾರಿಗಳ ಇವರ ತತ್ವ ಚಿಂತನೆಗಳು ಬೂರ್ಜ್ವಾ ಚಿಂತನೆಗಳು. ಜನರನ್ನು ಎಳೆಯಲು ಈ ಡೊಂಬಿ ಮಠಾಧೀಶರುಗಳು, ಮುದಿಲಾರಿಯಂತೆ ಪ್ರವಚನವನ್ನು ಮಾಡುತ್ತಾರೆ. ಈ ಮಠಾಧೀಶರು ಒಳಗಿರುವ ಕುತರ್ಕಗಳು ಜಾತಿ ವೈಷಮ್ಯಗಳು ತಮ್ಮ ಕುಲ, ನಿಮ್ಮ ಕುಲವೆಂದು ವಿಭಾಗಿಸುವ ಡೊಂಬ ಜಗದ್ಗುರುಗಳು ಇವರು. ಇದರ ನಿಜವಾದ ತರ್ಕಗಳನ್ನು ಹೊರಗೆಳೆಯಲು ಬರಬೇಕೆಂದು ಜನರಲ್ಲಿ ಎಚ್ಚರಿಕೆಯ ಭಾವನೆಗಳನ್ನು ಕವಿಗಳು ಪ್ರಚೋದಿಸುತ್ತಾರೆ. ಇನ್ನು ಮುಂದುವರಿಯುತ್ತಾ,

''ಐದು ವರ್ಷಕ್ಕೊಮ್ಮೆ ಅದೊಂದು ಚಣಮಾತ್ರ
ಉದಯಿಸುವ ಓಟಿನ ಹಕ್ಕಿನಿಂದ
ಐದಾರು ವರ್ಷ ಗುಲಾಮರಾಗಿ
ರಾಜರಥದ ಕಿಗ್ಗಾಲಿಗೆ ಸಿಕ್ಕ
ಬಲಿ ಪಶುಗಳಂತೆ

ಕೆಲ ವಾದಿಗಳ ಹಿಂದೆ ಕಪ್ಪುನಾಗರ ಹೆಡೆಯ
ಕೆಳಗೆ ಸಿಲುಕಿ ನಲುಗುವ
ಆ ಜೀವಗಳನು ಒಂದೇ ಬಾರಿ
ರಕ್ತಾರ್ಚನೆಯಿಂದ ರಕ್ಷಿಸಲು ಬಾರಾ
ಈ ದಾರುಣ ದರಿದ್ರ ಭೀಕರ ವಿಷಖಂಡದಲ್ಲಿ
ಈ ಕತ್ತು ಕೊಯ್ಯುವ ವ್ಯವಸ್ಥೆಯಲ್ಲಿ
ಈ ಬಾರಿ ಈ ಮನೆಮುರುಕರೊಡನೆ
ಸಮಬಾಳಿಗಾಗಿ ನವಭಾರತ ರಣದುಂದುಭಿ ಮೊಳಗಿಸಲು ಬಾರಾ ಬಾರಾ'' [೨]

ಈ ದೇಶದಲ್ಲಿ ನಡೆಯುವ ರಾಜಕೀಯ ದುರ್ನಡತೆಗಳು ಇಲ್ಲಿ ವ್ಯಕ್ತವಾಗಿವೆ. ಈ ರಾಜಕೀಯ ನಾಯಕರು ಐದು ವರ್ಷಗಳಿಗೊಮ್ಮೆ ಜನರ ಮನೆತನಕ ಬಂದು ಹೋಗುತ್ತಾರೆ. ಆ ಐದು ವರ್ಷಕ್ಕೊಮ್ಮೆ ಬರುವುದು ಕ್ಷಣಿಕ ಮಾತ್ರವಾಗಿರುತ್ತದೆ. ಇವರು ಜನರನ್ನು ತನ್ನ ಗುಲಾಮರನ್ನಾಗಿ ಮಾಡಿಕೊಂಡು ಅವರಿಗೆ ಆಶೆ, ಆಮಿಶಗಳನ್ನು ತೋರಿಸಿ ಓಟನ್ನು ಪಡೆಯುತ್ತಾರೆ. ಇಂಥವರ ಮಧ್ಯದಲ್ಲಿ ಸಿಕ್ಕ ಜನರಿಗೆ ಎಚ್ಚರಿಕೆಯನ್ನು ಕೊಡಬೇಕು. ಅವರು ಗುಲಾಮತನದಿಂದ ಹೊರಬರಬೇಕು. ಅಂಥವರನ್ನು ಸಮಾಜದಿಂದ ಹೊರದೂಡಬೇಕಾದರೆ ಕ್ರಾಂತಿಯಾದರೂ ಪರವಾಗಿಲ್ಲ ರಕ್ತ ಚಲ್ಲಿಯಾದರೂ ರಕ್ಷಿಸಲು ಪಣತೊಡಬೇಕೆಂದು ಆಹ್ವಾನ ನೀಡುತ್ತಾರೆ. ಈ ದೊಂಬಿ ರಾಜಕೀಯ ವ್ಯಕ್ತಿಗಳ ಪುಂಡಾಟಗಳನ್ನು ಹೊರಗೆಳೆದು ಈ ಭೀಕರ ದರಿದ್ರ ವ್ಯವಸ್ಥೆಯಲ್ಲಿ ಸಾಮಾನ್ಯ ಜನರನ್ನು ಕತ್ತು ಕೊಯ್ಯುವ ಈ ರಾಜಕೀಯ ಸಂಸ್ಕೃತಿಯನ್ನು ಕೊನೆಗೊಳಿಸಬೇಕು. ನೂತನ ಸಮಾಜ ನಿರ್ಮಿಸಬೇಕು ಎಲ್ಲರೂ ಸಮಬಾಳಿಗಾಗಿ, ನವಭಾರತ ಉದಯಿಸಲು ರಣಕಹಳೆಯನ್ನು ಮೊಳಗಿಸಬೇಕು ಎಂದು ಪ್ರತಿಯೊಬ್ಬ ಭಾರತೀಯ ಪ್ರಜೆಗಳಿಗೂ ಕವಿ ಆಹ್ವಾನವನ್ನು ನೀಡುತ್ತಾರೆ.

'ಜಿಜ್ಞಾಸೆ' ಎಂಬ ಕವನದಲ್ಲಿ ನಾವು ನಾಗರಿಕರು ಎಂದು ಹೇಳಿಕೊಳ್ಳುವ ದೇಶಗಳಲ್ಲಿ ಜನರಲ್ಲಿ ಜಿಜ್ಞಾಸೆ ಹೇಗೆ ಮೂಡಿದೆ ಎಂಬುದು ವ್ಯಕ್ತವಾಗಿದೆ. ಸಭ್ಯನಡತೆಯ ದೇಶವನ್ನು ನೋಡಿ ಈ ಅಸಭ್ಯರು ನಾಚಿಕೆ ಪಟ್ಟುಕೊಳ್ಳುತ್ತಿದ್ದಾರೆ.

''ಈಗ ನಾಗರಿಕ ದೇಶಗಳ ನರನಾಡಿಗಳಲ್ಲಿ
ಜಿಜ್ಞಾಸೆ ಪ್ರವಹಿಸುತ್ತಿದೆ
ಸಭ್ಯರ ನಡತೆಯ ನೋಡಿ
ಬರ್ಬರು ನಾಚುತ್ತಿದ್ದಾರೆ.
ಯಾರನ್ನೋ ಉದ್ಧರಿಸುವ ನೆಪದಲ್ಲಿ
ಭೂಗೋಳದ ಎದೆಯನ್ನು
ರಕ್ತದುಗುರುಗಳು ಸೀಳುತ್ತಿವೆ'' [೩]

ಹೀಗೆ ನಾಗರಿಕರೆಂದು ಬೀಗುವ ದೇಶಗಳಲ್ಲಿ ಯುದ್ಧ, ನಡೆದು ಅಲ್ಲಿನ ಜನರಲ್ಲಿ ಜಿಜ್ಞಾಸೆ ಮೂಡಿಸಿದೆ. ಇವರು ತಮ್ಮ ಬೇಳೆ ಬೇಯಿಸಿಕೊಳ್ಳಲು, ತಾವು ಸೂಪರ್ ಪವರ್ ಎನಿಸಿಕೊಳ್ಳಲು, ಯಾರನ್ನೋ ಉದ್ಧರಿಸುತ್ತೇವೆಂದು ಹೇಳುತ್ತಾ ಇದೇ ಭೂಗೋಳದ ಜನರಲ್ಲಿ ಭಯದ ವಾತಾವರಣ ಸೃಷ್ಟಿಸುತ್ತಾರೆ. ಈಗ ತಮ್ಮಲ್ಲೆ ವಿರೋಧದ ನಡುವೆ ಜನರಲ್ಲಿ ಈ ನಾಯಕರಲ್ಲಿ ಇಟ್ಟಿರುವ ಅವಿಶ್ವಾಸವು ಸಭ್ಯ ನಡತೆಯ ದೇಶಗಳನ್ನು ನೋಡಿ ಇವರು ತಮ್ಮ ಖಡ್ಗಧ್ವನಿಯಿಂದ ಹೊರಬರಲು ಪ್ರಯತ್ನಿಸಬೇಕು. ಇನ್ನೂ ಮುಂದುವರಿಯುತ್ತಾ ಕವಿಯು ಈ ಪ್ರಪಂಚದಲ್ಲಿ ಅಮಾನುಷವಾಗಿ ದೇಶದೇಶಗಳಲ್ಲಿ ಹೇಗೆ ವೈರತ್ವ ಮೂಡಿವೆ. ಅದನ್ನು ಯಾವ ರೀತಿಯಾಗಿ ಪರಿವರ್ತಿಸುತ್ತಾರೆ ಎಂಬುದನ್ನು ನೋಡಬಹುದು.

'' ಅಮೇರಿಕಾದಿಂದ ವಿಯತ್ನಾಂವರೆಗೆ
ಆಯುಧಗಳ ಶವಗಳು ವಿಜೃಂಭಿಸುತ್ತಿರುವಾಗ
ಶವ ಪೂಜೆಗೆ ಹೆಸರಾದ
ಸಾಮ್ರಾಜ್ಯ ದಾಹದ ಸುತ್ತ ಕೆನ್ನಾಲಿಗೆ ಚಾಚಿವೆ.
.........................
.........................
ದೇವರೊಂದಿಗೆ ಶೂನ್ಯದಲ್ಲಿ ಲೀನವಾಗಿದ್ದಾರೆ
ಈಗ ಬೆತ್ತಲಾಗಿ
ಮೃಗ ನರ್ತನ ನಡೆದಿದೆ
ತನ್ನತಾ ನೋಡಿಕೊಂಡು ಮರುಳಾಗಿ
ಸುಡುಗಾಡ ಸುತ್ತುತ್ತಿದ್ದಾರೆ.
ನರನರದಲ್ಲಿ ಮಡುಗಟ್ಟಿದ ಹತ್ಯಾಪ್ರವೃತ್ತಿ
ಆಯುಧಗಳ ಎದೆಯಲ್ಲಿ ದಟ್ಟೈಸಿ
ವಿಯತ್ನಾಂ ಮೇಲೆ ನೆತ್ತರು ಸುರಿದರೂ, ಜನರೇ ಆಯುಧಗಳ ಮಣಿಸಿ
ಜಿಜ್ಞಾಸೆಯ ಸಮಾಧಿಗೆ ಮುಡಿಸುತ್ತಾರೆ '' [8]

ನಾಗರಿಕ ಎಂದು ಕರೆಸಿಕೊಳ್ಳುವ ದೇಶಗಳು ದೊಡ್ಡಣ್ಣನೆಂದು ಕರೆಸಿಕೊಳ್ಳುವ ದೇಶ. ಅಮೇರಿಕಾದಿಂದ ವಿಯತ್ನಾಂವರೆಗೆ ಆಯುಧಗಳು ವಿಜೃಂಬಿಸುತ್ತಿವೆ. ಕೊಲ್ಲುವುದಕ್ಕೆ ಹೆಸರುವಾಸಿಯಾದ ನಿರಂಕುಶ ಸಾಮ್ರಾಜ್ಯದ ಈ ದೇಶವು ತನ್ನ ಸುತ್ತಾ ಕೆನ್ನಾಲಿಗೆ ಚಾಚಿದೆ. ಸಾಮ್ರಾಜ್ಯವನ್ನು ವಿಸ್ತರಿಸುವ ದಾಹದಿಂದ ಎಲ್ಲಾ ದಿಕ್ಕುಗಳಿಗೆ ಕೆನ್ನಾಲಿಗೆಯಂತೆ ಪಸರಿಸಿದೆ. ಇದರಿಂದ ಹೊರಬರಬೇಕೆಂದು ಹೇಳುತ್ತಾ, ಇಂಥ ಅಮಾನುಷ ರೀತಿಯಿಂದ, ಅಧಿಕಾರದಾಹದಿಂದ ಹಾತೊರೆಯುವ ನಾಯಕರು ಎಲ್ಲಾ ಕಡೆಗೆ ಕಾಣುತ್ತಾರೆ. ಹಾಗಾಗಿ ಅಂತಹ ಸ್ಥಿತಿಯಿಂದ ಹೊರಬಂದು ಪ್ರಪಂಚದ ಬಂಧುತ್ವದ ಸಾಮ್ರಾಜ್ಯ ಕಟ್ಟಬೇಕೆಂಬುದು ಕವಿಯ ಆಶಯ.

ನಗರಗಳಲ್ಲಿ ಮಡುಗಟ್ಟಿದ ವಾತಾವರಣ, ಹತ್ಯಾಪ್ರವೃತ್ತಿ, ಮೃಗನರ್ತನ, ಮತಾಂಧ ಮುಂತಾದವುಗಳಿಂದ ವಿಯತ್ನಾಂ ಮೇಲೆ ರಕ್ತದ ಓಕುಳಿ ಮಾಡಿದರೂ, ಆ ಜನರೇ ಆಯುಧಗಳನ್ನು ಮಣಿಸಿ ಜಿಜ್ಞಾಸೆಯ ಸಮಾಧಿಗೆ ಮುಡಿಸುತ್ತಾರೆ ಎಂದು ಕವಿ ಹೇಳುತ್ತಾ ಪ್ರತಿಯೊಬ್ಬರು ವಿಯತ್ನಾಂ ಪ್ರಜೆಗಳಂತೆ ಎದೆಕೊಟ್ಟು ಮುನ್ನುಗ್ಗಬೇಕೆಂದು ಕವಿ ಆಶಿಸುತ್ತಾರೆ.

ಹೀಗೆ ನಿಖಿಲೇಶ್ವರ ಕವಿಯ ಕವಿತೆಗೆ ಗ್ರಾಮೀಣ ನೆಲೆಯ ಅಸಮಾನತೆಯೇ ಕಾರಣ. ನಗರದ ದುಸ್ಥಿತಿ ದೇಶದೇಶಗಳ ನಡುವೆ ಹೋರಾಡಬೇಕಾದ ಮಾನವತೆಯ ಬಂಧುತ್ವದೆಡೆಗೂ ವ್ಯಾಪಿಸುತ್ತದೆ. ಕವಿ ವಿಶ್ವಾತ್ಮಕವಾಗಿ ತನ್ನ ವಿಚಾರಗಳನ್ನು ಹರಿಯಬಿಟ್ಟಿರುವುದನ್ನು ಕವಿತೆಗಳಲ್ಲಿ ಕಾಣಬಹುದು.

**ಜ್ವಾಲಾಮುಖಿ**

ದಿಗಂಬರ ಕವಿಗಳಲ್ಲಿ 'ಜ್ವಾಲಾಮುಖಿ' ಯು ಸಹ ಮುಖ್ಯರಾದವರು. ಇವರು ಹೆಸರಿಗೆ ತಕ್ಕಂತೆ ಬೆಂಕಿಯನ್ನು ಕಾರುವ ಕವಿ. ಇವರ ಬಾಯಿ ಕಟುವಾದರೂ ಸಹ ಮೃದು ಹೃದಯವುಳ್ಳವರು. ಜ್ವಾಲಾಮುಖಿಯ ಮೂಲ ಹೆಸರು 'ವೀರರಾಘವಾಚಾರ್ಯುಲು'. ಇವರು ಹೈದಾರಾಬಾದಿನಲ್ಲಿ ಜನಿಸಿದರು. ಇಲ್ಲೇ ಬೆಳೆದರು ಇಲ್ಲೇ ಅವರು ವಿದ್ಯಾಭ್ಯಾಸವನ್ನು ಮಾಡಿದರು.

ಇವರು ಮಾನವ ಕಲ್ಯಾಣಕ್ಕಾಗಿ, ಜನರ ಏಳಿಗೆಗೋಸ್ಕರ ಶ್ರಮಿಸುವ ಲೇಖಕರು ಒಂದಾಗಬೇಕೆಂಬ ಅಭಿಪ್ರಾಯವುಳ್ಳವರು. ಇವರು ಮನುಷ್ಯನನ್ನು ನಾಶಮಾಡುತ್ತಿರುವ ಮತವನ್ನು ನಾಶಮಾಡುವ ಬಯಕೆಯನ್ನು ಇಟ್ಟುಕೊಂಡವರು. ಜ್ವಾಲಾಮುಖಿಯವರು ಲೇಖಕರೆಲ್ಲರೂ ಒಟ್ಟುಗೂಡಿ ದುಷ್ಟಶಕ್ತಿಗಳ ವಿರುದ್ಧ ದಾಳಿ ಮಾಡಬೇಕೆಂದು ಸೂಚಿಸುತ್ತಾರೆ. ಇವರು ಯಾವುದೇ ಅತಿಮಾನುಷ ಶಕ್ತಿಯಲ್ಲೂ ವಿಶ್ವಾಸವಿಲ್ಲದವರು. ಆದರೆ ಮಾನವನ ಅಂತಃಶಕ್ತಿಯಲ್ಲಿ ತುಂಬ ವಿಶ್ವಾಸವುಳ್ಳವರು. ಇವರಿಗೆ ಮಾನವೀಯ ಮೌಲ್ಯಗಳ ಮೇಲೆ ಮಾನವತೆಯ ಮೇಲೆ, ತುಂಬ ವಿಶ್ವಾಸವಿದ್ದು ವೈಚಾರಿಕ ನೆಲೆಯಲ್ಲಿ ವಾಸ್ತವತೆಯನ್ನು ನೇರವಾಗಿ ಹೇಳುವ ಮನೋಧರ್ಮವುಳ್ಳವರು.

ಜ್ವಾಲಾಮುಖಿಯು 'ಸೂರ್ಯಸ್ನಾನ' ಎಂಬ ಕವನದಲ್ಲಿ ಭಾರತೀಯ ಚರಿತ್ರೆಯಲ್ಲಿ ವೈಭವೀಕರಿಸುವ ಅಭ್ಯಾಸವು ಇನ್ನೂ ಇದೆ; ಇಂಥ ಚರಿತ್ರೆಯು ರಾಜರ ಮತಗಳನ್ನು, ಆಚರಣೆಗಳನ್ನು, ದೇವರನ್ನು, ಮತ ಗುರುಗಳನ್ನು ರಾಜರಂತೆ ಸರ್ವ ಅಲಂಕಾರಗಳಿಂದ ವೈಭವೀಕರಿಸುತ್ತದೆ ಎಂದು ಹೇಳಿದ್ದಾರೆ.

ಈ ಸಂಪ್ರದಾಯ, ಚರಿತ್ರೆಗಳು ಒಬ್ಬರ ವೈಯಕ್ತಿಕ ಕಾರಣಕ್ಕಾಗಿ ಬಳಕೆಗೆ ಬಂದಂಥಹವು. ಧರ್ಮದ ನೀತಿ ನಿಯಮಗಳು ಇಂದು ವಾಸ್ತವಿಕವಾಗಿ ಮನುಷ್ಯರ ಜೀವನಕ್ಕೆ ಉಪಯುಕ್ತವಾಗುವ

ಬದಲು ತುಂಬ ನೋವನ್ನುಂಟು ಮಾಡುವಂತಹವು. ಇಂದು ಸಾಮಾನ್ಯರ ಬದುಕು ಧರ್ಮ, ಸಂಪ್ರದಾಯ, ಶೋಷಣೆಗಳಲ್ಲಿ ಲೀನವಾಗಿದೆ. ಇಂದು ಸಮಾಜದಲ್ಲಿ ಸಂಪ್ರದಾಯ, ಮೂಢನಂಬಿಕೆ ಆಚಾರ - ವಿಚಾರಗಳು ಮುಂತಾದವುಗಳ ಸಮಸ್ಯೆಗಳಿಗೆ ಸಂಪ್ರದಾಯವಾದಿಗಳೇ ಪ್ರಮುಖ ಕಾರಣ. ಹಾಗಾಗಿ ಸುಳ್ಳು ಕಥೆ, ಮತಮೀಮಾಂಸೆಗಳನ್ನು ಬೆಳಸಿದವರ ವಿರುದ್ಧ ಜ್ವಾಲಾಮುಖಿ ಕೆಂಡ ಕಾರುತ್ತಾರೆ.

''ಇಂದಿನ ಮೋಹಾಂಕಿತ ಪತಿತ ಸಂತತಿಗೆ
ಕೆಡಿಸಿ ಕಣ್‌ತೆರೆಸಬೇಕೆನಿಸಿದೆ.
ಜಾಗರಣಕೆಂದು ಪ್ರಳಯಕಾಹ್ವಾನ
ನೀಡಬೇಕೆನಿಸಿದೆ.
ಸತ್ತ ರಾಜರುಗಳ ಗಬ್ಬು ಕತೆಗಳ
ಕಥನ ಮಾಡುವ ಜೀವಚ್ಛವದ ಇತಿಹಾಸಕಾರರನ್ನು
ಕಿವಿ ಮೂಗು ಕೊಯ್ದು ಕೀಳಬೇಕೆನಿಸಿದೆ.''[೩೦]

ಇಂದಿನ ಮೋಹಾಂಕಿತ ಪತಿತ ಸಂತತಿಗೆ, ಜಾಗರಣಕ್ಕೆಂದು ಪ್ರಳಯ ಆಹ್ವಾನ ಮಾಡಬೇಕಾಗಿದೆ, ರಾಜರ ಸುಳ್ಳು ಕಥೆಗಳನ್ನು ಬರೆಯುವ ಚರಿತ್ರೆಕಾರರನ್ನು ಮೂಗು, ಕಿವಿ ಕೊಯ್ಯಬೇಕೆಂದು, ಮತ, ಮೌಢ್ಯಗಳ, ಗತ ಕಾಲವನ್ನು ಖಂಡಿಸುತ್ತಾರೆ. ಇನ್ನು ಮುಂದುವರಿದು :

''ಸಮಸ್ಯೆಗಳಿಗೆ ಗುಂಡಿತೋಡಿ
ಸಾಮಾನ್ಯರ ಗೋರಿಮಾಡಿ
ನಿರ್ಲಿಪ್ತವಾಗಿ ಉರಿಹಚ್ಚಿ
ಕಾಲವನ್ನೇ ಒಲೆಮಾಡಿ
ಅನಂತ ಅಮಾಯಕ ಜೀವಲೋಕವನ್ನು
ಅನಾದಿಯಾಗಿ ಅಧ್ವಾನ ಪರಿಪಾಲನೆ ಮಾಡುತ್ತಿರುವ
ಬೆರಳೆಣಿಕೆಯ ಮೇಧಾವಿಗಳಿಗೆ
ಪಿರಮಿಡ್ಡುಗಳ ಕಟ್ಟಬೇಕೆನಿಸಿದೆ''[೩೧]

ಸಮಸ್ಯೆಗಳನ್ನು ಹುಟ್ಟಿಸಿ ಅದರೊಳಗೆ ಸಾಮಾನ್ಯರನ್ನು ಆ ಸಮಸ್ಯೆಯೊಳಗೆ ದಬ್ಬಿ ಯಾವುದೇ ಭಯಭೀತಿಯಿಲ್ಲದೆ ನಿರ್ಲಿಪ್ತವಾಗಿ ಬೆಂಕಿಹಚ್ಚಿ ಅವರ ಅಮಾಯಕ ಜೀವಲೋಕವನ್ನು ಮಾಡುವ ಮೇಧಾವಿ ಗಳನ್ನು ಖಂಡಿಸುತ್ತಾ, ಕೆಲವರು ಮುಕ್ತ ಮೇಧಾವಿಗಳಿಗೆ ಪಿರಮಿಡ್ಡುಗಳು ಕಟ್ಟಬೇಕೆಂದು ಕವಿಗಳು ತಿಳಿಸುತ್ತಾರೆ.

''ಜಾತಿಯುತ ಮೀಮಾಂಸೆಯಲ್ಲಿ ಕೋರೆ ಬೆಳೆಸಿದ
ಮತಾಂಧರ ಕಿವಿಹಿಡಿದು ಕೆನ್ನೆ ಬಾರಿಸಿ
ಭೂ ನಾಭಿಯ ಮೇಲೆ ಮಾನವ ಕುಲದ
ಮಹಾಕಲ್ಪವೃಕ್ಷದ ಕ್ರೂರ ಸಂಹಾರವನ್ನು
ತೋರಿಸಬೇಕೆನಿಸಿದೆ.'' [31]

ಮತ ಮೀಮಾಂಸೆಗಳ ಕೋರೆಗಳನ್ನು ಬೆಳೆಸಿದವರ, ಕಿವಿಹಿಡಿದು ಕೆನ್ನೆ ಬಾರಿಸಿ, ಭೂ ನಾಭಿಯೆಂಬ ಮಾನವ ಕುಲದ ಮಹಾವೃಕ್ಷದ ಕ್ರೂರ ಸಂಹಾರವನ್ನು ಮಾಡಬೇಕೆಂದು ಕವಿಗಳು ಹೇಳುತ್ತಾರೆ.

ದೇವರು ದೇವರೆಂದು ಧ್ಯಾನಮಾಡುವ ಆಧ್ಯಾತ್ಮಿಕ ಸೋಮಾರಿಗಳ ಕಣ್ಣು ಕಿತ್ತಿ ತೋರಿಸಬೇಕು ಎಂದು ಗತಕಾಲ ಮತ್ತು ಮತದ ಮೇಲೆ ಬೆಂಕಿ ಕಾರಿದ್ದಾರೆ. ಕನಸಿನ ಪ್ರೇಯಸಿಯ ಎಷ್ಟೋ ಜಾಲ ನೋಟಕ್ಕೆ ಮರುಳಾದ ಕವಿ ಕಾಮುಕರನ್ನು ಹೊರಗೆಳೆದು ಹೀನವಾಗಿ ಚಿತ್ರಣಗೊಂಡ ಆ ಕಾವ್ಯ ಕನ್ನಿಕೆಯನ್ನು ತೋರಿಸಬೇಕು ಎಂದು ಕವಿಗಳನ್ನು ಜರಿಯುತ್ತಾರೆ.

ಕವನ ಬೆಳೆಯುತ್ತಾ ಹೋದಂತೆಲ್ಲಾ ಸಮಾಜದ ವ್ಯವಸ್ಥೆಯ ವಾಸ್ತವತೆಯು ಅನಾವರಣಗೊಳ್ಳುತ್ತದೆ. ಇಂದು ಸಮಾಜದಲ್ಲಿ ತಾಂಡವಾಡುತ್ತಿರುವ ಭೀಕರ ಸಮಸ್ಯೆಗಳಿಗೆ ಮೂಲಕಾರಣ. ಇಂಥ ಕಾಮುಕ ಕವಿಗಳ, ಸಂಪ್ರದಾಯವಾದಿಗಳ ವಿಚಾರಗಳನ್ನು ದಿಗಂಬರ ಕವಿಗಳು ಹೊರಗೆಳೆದಿದ್ದಾರೆ. ಹಾಗೆ ನಿಖಿಲೇಶ್ವರರು ಇಂದಿನ ವ್ಯವಸ್ಥೆ ಬಗ್ಗೆ ಕಿಡಿ ಕಾರುತ್ತಾರೆ. ಗತದ ವೈಭವ, ಅವರ ಆಚಾರ - ವಿಚಾರಗಳು ಜನರ ಪ್ರಜ್ಞೆಯನ್ನೇ ಹೊಸಕಿ ಹಾಕಿವೆ. ಇಂಥವರು ಮಾನವ ಬದುಕನ್ನು ಕಲಿಸದೆ ಸೋಮಾರಿತನವನ್ನು ಬೆಳೆಸುತ್ತಿದ್ದಾರೆ ಎಂದು ಕವಿಗಳು ಮರುಕ ಪಡುತ್ತಾರೆ.

'ಅವಲೋಕನ' ಈ ಕವನದಲ್ಲಿ ಇಡೀ ಸಾಮಾಜಿಕ ವಾತಾವರಣ ವ್ಯಕ್ತವಾಗಿದೆ. ರಾಜಕೀಯ ವಿಡಂಬನೆ, ಮನುಷ್ಯನೆಂಬ ಮಾಂಸವನ್ನು ತಿನ್ನುವ ಭೀಭತ್ಸ ವ್ಯಂಗ್ಯಗಳಿಂದ ಜ್ವಾಲಾಮುಖಿ ವರ್ಣಿಸಿದ್ದಾರೆ.

''ಮಾನವತೆಯ ಧ್ವಂಸ ಮಾಡಿ
ಮನುಷ್ಯನು ಮಾಂಸದಂತೆ ಕೊಯ್ದು
ಬಿಸಿ ಬಿಸಿ ನಿಟ್ಟುಸಿರಿನ ಮೇಲೆ
ಕುದಿನೀರಿಗೆ ಎಸರಿಟ್ಟು
ಅಶ್ರುರಸದಲ್ಲಿ ''ಫೋರ್ಬಾ'' ಕಾಚನ್ನು

ನಾವೆಲ್ಲ ಆರೋಗಿಸುತ್ತೇವೆ
ಧರ್ಮದೇವತೆಯ
ಚರ್ಮ ಸುಲಿದು
ಕರ್ಮ ಕಡಾಯಿಯಲಿ
ಮರ್ಮವಾಗಿ ಗೋಲಿಸಿ
ಕರಕರ ವಡೆಗಳನು
ಚರ ಚರ ನಮುಲುತ್ತೇವೆ.'' [೨೨]

ಮನುಷ್ಯನ ಮಾನವತೆಯನ್ನು ಧ್ವಂಸ ಮಾಡಿ, ಮನುಷ್ಯನನ್ನು ಮಾಂಸದಂತೆ ಕೊಯ್ದು ತಿನ್ನುವ ಈ ವ್ಯವಸ್ಥೆ, ಕಣ್ಣೀರ ರಸದಲ್ಲಿ ಘೋರ್ಬಾ ಕಾಚನ್ನು ಅಲಂಕರಿಸಿಕೊಳ್ಳುತ್ತಿದ್ದೇವೆ. ಧರ್ಮವೆಂಬ ದೇವತೆಯ ಚರ್ಮ ಸುಲಿದು ಕರ್ಮವೆಂಬ ಕಡಾಯಿಯಲ್ಲಿ ಕುದಿಸಿ ಕರಕರ ಎಂಬ ವಡೆಗಳನ್ನು ಚರಚರ ತಿನ್ನುತ್ತೇವೆ. ಅಂದರೆ ಇದು ಧರ್ಮದ ಹೆಸರಿನಲ್ಲಿ ನಡೆಯುವ ಘೋರ ಅನ್ಯಾಯ. ಇದು ಅಧರ್ಮ ಪರಂಪರೆಯನ್ನು ಖಂಡಿಸುತ್ತವೆ ಹಾಗೂ ಭೋಜನಪ್ರಿಯದ ನಾಲಗೆ ತೀಟೆಯ ಹಿನ್ನೆಲೆಯಲ್ಲಿ ಮಾನವತೆಯಿಂದ ಧ್ವಂಸಮಾಡಿ; ಮನುಷ್ಯನನ್ನು ಮಾಂಸದಂತೆ ಕೊಯ್ದು... ಎಂಬ ಇದರ ನೈಜಕತೆ ಇನ್ನು ಸ್ಪಷ್ಟವಾಗಿ ಕಾಣುತ್ತದೆ.

ಇಲ್ಲಿ ಕವಿ ಇನ್ನೊಂದು ಮುಖದಲ್ಲಿ ಸಮಾಜದ ಚಿತ್ರಣವನ್ನು ಕೊಡುತ್ತಾನೆ.
'' ಭಾರತ ಭಾಗವತ ರಾಮಾಯಣ
ಪಾರಾಯಣ ಅಂಡದಂಡಗಳಲ್ಲಿ
ಪ್ರಾಚೀನತ್ವಕ್ಕೆ
ಪತಾಕೆಯನ್ನೆತ್ತಿ
ನಿತ್ಯ ಜೀವನದಲ್ಲಿ ನೈತಿಕ ಪತನವನ್ನು
ನಿತ್ಯ ಸತ್ಯವಾಗಿ ಜರುಗಿಸುತ್ತಿದ್ದೇವೆ
ನಾವೆಲ್ಲಾ ಜಗನ್ನಾಟಕದ ಸೂತ್ರಧಾರಿಗಳು
ನಾವೆಲ್ಲಾ ಬೃಹನ್ನಾಟಕ ಪಾತ್ರಧಾರಿಗಳು
ನಾವೆಲ್ಲಾ ಗತಪುರಾಣೆತಿಹಾಸ ಕಾಲಗಳಿಗೆ ಚಿಹ್ನೆಗಳು
ನಾವೆಲ್ಲಾ ಜಗತ್ಕಾಲ್ಯಾಣ ಭಾವಗಳಿಗೆ ಪ್ರಾಣಗಳು.'' [೨೪]

ಸಮಾಜವನ್ನು ವಿಡಂಬಿಸುತ್ತಾ ಭಾರತ ಭಾಗವತ ರಾಮಾಯಣ ಪಾರಾಯಣದ ಬೆಂಬಲದಿಂದ ಪ್ರಾಚೀನ ಪರಂಪರೆಯನ್ನು ಮೆಲುಕು ಹಾಕುತ್ತಾ ನಿತ್ಯದ ಬದುಕಿನಲ್ಲಿ ನೈತಿಕ ಪತನವನ್ನು ನಿತ್ಯಸತ್ಯವಾಗಿ ಮಾಡುತ್ತಿದ್ದೇವೆ. ಇಂಥ ವ್ಯವಸ್ಥೆಯಲ್ಲಿ ಪ್ರಗತಿ ಪಥದಲ್ಲಿ ಸಾಗಲಾರೆವು. ಕೊಳೆತು ಹೋದ ಮತದ ಚರಂಡಿಗಳೇ ಮೋಕ್ಷ ಮಾರ್ಗವೆನ್ನುತ್ತ ಆತ್ಮದ ಒಳಗಿನ ಅಂತರಂಗವನ್ನು

ಅರಿಯಲಾರೆವು. ಜ್ವಾಲಾಮುಖಿ ಆತ್ಮನಿವೇದನ ಶೈಲಿಯಲ್ಲಿ ಈ ದೇಶದ ದುರಂತಗಳ ಬಗ್ಗೆ ಅತೀವ ಕಳವಳ ವ್ಯಕ್ತಪಡಿಸಿದ್ದಾರೆ. ನಾವೆಲ್ಲಾ ಜಗದಲ್ಲಿ ಆಡುವ ನಾಟಕದ ಸೂತ್ರಧಾರಿಗಳು. ಗತಕಾಲದ ಇತಿಹಾಸದ ಕಾಲಗಳಿಗೆ, ಸಂಪ್ರದಾಯಗಳಿಗೆ ಶರಣುಹೋಗುವವರಿಗೆ, ವಾಸ್ತವತೆಯ ಅರಿವು ಬರುವುದಿಲ್ಲ. ಜಗತ್ತಿನ ಕಲ್ಯಾಣದ ಬಗ್ಗೆ ನೂತನ ಭಾವನೆಗಳು ಇನ್ನೂ ಕಂಡುಬರುವುದಿಲ್ಲ. ಆದ್ದರಿಂದ ಕವಿ ಇಂಥ ಅವ್ಯವಸ್ಥೆಯನ್ನು ಕಂಡು ಮರುಗುತ್ತಾರೆ.

'ಶೃಂಗಾರ ವಿಲಾಸ' ಎಂಬ ಕವನದಲ್ಲಿ ನಿರ್ಗತಿಕ, ಶೋಷಿತರ, ಶೋಷಣೆ ಈ ಕವನದಲ್ಲಿ ಮೂಡಿಬಂದಿದೆ. ಜಾತಿದರ್ಪದಿಂದ ಮಹಾತ್ಮರ ತ್ಯಾಗ ಬದಲಾವಣೆಗಳು ನಿಷ್ಫಲ. ಸ್ವಾತಂತ್ರ್ಯ ಬಂದ ಕಾಲದಲ್ಲೇ ಬಂಜೆಯಂತೆ ಈ ದೇಶದ ಪರಿಸ್ಥಿತಿ ಹದಗೆಟ್ಟಿತು. ಈ ಸಮಾಜದಲ್ಲಿ ಸದಾ ಹೊಲಸನ್ನೆ ಕಕ್ಕುವ ವ್ಯವಸ್ಥೆ ಹಾಗೂ ಇಡೀ ದೇಶದ ವ್ಯವಸ್ಥೆ ಅತ್ಯಂತ ಸ್ಪಷ್ಟವಾಗಿ ಈ ಕವನದಲ್ಲಿ ಮೂಡಿಬಂದಿದೆ.

''ಪುಡಿಯಾಗುತ್ತಿರುವ ಜಾತಿ ದರ್ಪಣದಲ್ಲಿ
ಮಹಾತ್ಮರ ತ್ಯಾಗಫಲವು
ವಿಫಲವಾಗಿ ಸೋರುತ್ತಿದೆ
ವೈಪರೀತ್ಯದ ಸರೋವರದಲ್ಲಿ
ಅರಳಿದ ಪರಿತಾಪ ಕುಸುಮಗಳು
ಆರ್ಭಟದ ಕಪ್ಪೆ ಚಿಪ್ಪುಗಳೊಳಗೆ
ಕರುಣೆಯಿಂದ ನಕ್ಕು ಜಾರಿಹೋಗುತ್ತಿವೆ'' [39]

ಜಾತಿಯನ್ನು ಮುಂದಿಟ್ಟುಕೊಂಡು ದೇಶವನ್ನು ಸಮಾಜವನ್ನು ವಿಭಜಿಸುವ ವ್ಯವಸ್ಥೆಯು ಮಹಾತ್ಮರು ಮಾಡಿದ ತ್ಯಾಗದ ಫಲವು ನಿಷ್ಫಲವಾಗಿ ಹೋಯಿತು. ವಾತಾವರಣದ ವೈಪರೀತ್ಯದಿಂದ ಸರೋವರದಲ್ಲಿ ಅರಳಿರುವ ಹೂವುಗಳು ಪರಿತಪಿಸುವಾಗ ಅದನ್ನು ಕಂಡ ಕಪ್ಪೆಚಿಪ್ಪಿನೊಳಗೆ ನಕ್ಕು ನಲಿಯುತ್ತವೆ. ಅಂದರೆ ನಿರ್ಗತಿಕರ ಸಾಮಾಜಿಕ ವ್ಯವಸ್ಥೆಯನ್ನು ಕಂಡು, ನಾಯಕರು ಅದನ್ನೇ ಬಂಡವಾಳ ಮಾಡಿಕೊಂಡು ಗುಲಾಮರನ್ನಾಗಿ ಮಾಡಿಕೊಳ್ಳುತ್ತಾರೆ. ಈ ದೇಶದಲ್ಲಿ ವಾಸ್ತವತೆಯ ದೃಷ್ಟಿಯಲ್ಲಿ ಹೆಚ್ಚಿನ ಮಟ್ಟದಲ್ಲಿ ಹಸಿವು, ಬರಿಮೈ ಬಟ್ಟೆ, ಜೀವ ಕಲೆಗಳ ವಸ್ತುಗಳಿಂದ ತುಂಬ ದೂರ ಉಳಿದಿದ್ದಾರೆ. ಇಂಥಾ ಸಾಮಾಜಿಕ ವ್ಯವಸ್ಥೆಗೆ, ದುಸ್ಥಿತಿಗೆ ರಾಜಕೀಯ ನಾಯಕರನ್ನು ಹೊಣೆ ಮಾಡಬೇಕಾಗುತ್ತದೆ. ನಿರ್ಗತಿಕರ ಬಗೆಗೆ ಕಾಳಜಿ ಇರಬೇಕಾದರೆ ಅವರಿಗೆ ಸಾಮಾಜಿಕ ಪ್ರಜ್ಞೆ ಅವಶ್ಯ ಬೇಕಾಗುತ್ತದೆ.

ನಿರ್ಗತಿಕರಿಗೆ ಯಾವುದೇ ವ್ಯವಸ್ಥೆ ಇರುವುದಿಲ್ಲ. ಇರಲು ಸೂರು ಇಲ್ಲ, ತಿನ್ನಲು ಅವರ ದುಡಿಮೆಯನ್ನೇ ನಂಬಿಕೊಂಡವರು. ಸಮಾಜದ ಬಗ್ಗೆ ಕಳಕಳಿಯನ್ನು ಹೊಂದಿರುವ ಕವಿಗಳಿಗೆ ಇಂಥವರ ಬಗ್ಗೆ ತುಂಬ ಕಾಳಜಿ ಸಹಾನುಭೂತಿ ಇರುತ್ತದೆ. ಹಾಗಾಗಿ ಇಲ್ಲಿ ಜ್ವಾಲಾಮುಖಿಯು ನಿರ್ಗತಿಕರ ಜೀವನ ಚಿತ್ರಣವನ್ನು ನೀಡಿದ್ದಾರೆ.

''ಮಳೆಯಲ್ಲಿ ಸ್ನಾನಮಾಡಿ ಬಿಸಿಗಾಳಿಯಲ್ಲಿ ಮೈಯೂರಿ
ಹಸಿವನ್ನೇ ತಿಂದು ಕಣ್ಣೀರನ್ನು ಕುಡಿದು
ಚಳಿಯನ್ನೇ ಹೊದ್ದು
ಆಳೆಯ ಎಲೆಗಳು ಉದುರಿದ ಮರಗಳ ಕೆಳಗೆ
ಬಿಕ್ಕುಗಳ ಲಾಲಿ ಹಾಡಿನಲ್ಲಿ
ಕೋಪಭೆಗಳ, ನಿರಾಶೆಗಳ ತಲೆದಿಂಬು ಮಾಡಿ
ಅಲೆ ಅಲೆಯಾಗಿ ಕನಸು ಕಾಣುತ್ತಿದ್ದಾರೆ'' [51]

ಇಲ್ಲಿ ನಿರ್ಗತಿಕರ ಚಿತ್ರಣ ಮಳೆಯಲ್ಲಿ ಸ್ನಾನ ಮಾಡಿ ಬಿಸಿಗಾಳಿಯಲ್ಲಿ ಮೈಯೂರಿ ಹಸಿವನ್ನೇ ತಿಂದು ಕಣ್ಣೀರನ್ನು ಕುಡಿದು, ಅಂದರೆ ಇವರ ಸ್ಥಿತಿಗತಿಯನ್ನು ಮನಃಪೂರ್ವಕವಾಗಿ ಚಿತ್ರಿಸಿದ್ದಾರೆ.

'ಶಸ್ತ್ರ ಚಿಕಿತ್ಸೆ' ಎಂಬ ಕವನದಲ್ಲಿ ಭಾರತ ಮಾತೆಯನ್ನು ರಾಜಕೀಯ ನಾಯಕರು ನಡೆಸಿಕೊಂಡ ಬಗೆಯನ್ನು, ಭಾರತ ಮಾತೆಯ ವೇದನೆಯನ್ನು ಚಿತ್ರಿಸಿದ್ದಾರೆ. ಸ್ವಾತಂತ್ರ್ಯ ಬಂದ ಮೇಲೆ ಈ ಮಾತಿಗೆ ಇನ್ನೂ ಹೆರಿಗೆಯೇ ಆಗಿಲ್ಲ. ಇನ್ನೂ ಪಶ್ಚಿಮದ ಕಡೆಗೆ ರಾಜಕೀಯ ನಾಯಕರು ಮುಖ ಮಾಡಿದ್ದಾರೆಂಬುದನ್ನು ಕವಿಗಳು ವಿಡಂಬನಾತ್ಮಕವಾಗಿ ಚಿತ್ರಿಸಿದ್ದಾರೆ.

''ಇಪ್ಪತ್ತು ವರುಷವು ಗರ್ಭವು
ಹೆರಿಗೆಯಾಗದೆ
ಜಡವಾಗಿ ಬೆಳೆಯುತ್ತಿದೆ
ಜನರ ನಡುವೆ
ನಗೆ ಪಾಟಲಾಗಿ
ತಿರುಗುತಿದೆ
ಗರ್ಭ ನಿಂತಿದ್ದು
ನೀತಿ ತಪ್ಪಿದಂತಾಗಿದೆ
ಭರತ ಮಾತೆಯ ಬದುಕು
ಪಶ್ಚಿಮ ಪ್ರವಾಸ ದ್ವೀಪವಾಗಿದೆ'' [52]

ಇಲ್ಲಿ ರಾಜಕೀಯದ ದುಸ್ಥಿತಿಯು ಕಂಡುಬರುತ್ತದೆ. ಸ್ವಾತಂತ್ರ್ಯ ಬಂದು ಇಷ್ಟು ವರ್ಷಗಳಾದರೂ ಸಹ ಇನ್ನೂ ಪಶ್ಚಿಮ ದೇಶದ ಕಡೆಗೆ ನೋಡುವ ಪರಿಪಾಠವನ್ನೆ ಇಟ್ಟುಕೊಂಡ ಧುರೀಣರನ್ನು ಕವಿಗಳು ಖಂಡಿಸುತ್ತಾರೆ.

ನೀತಿ ನಡವಳಿಕೆ ಇಲ್ಲದ ನೇತಾರರು ಈ ದೇಶದ ವಾಸ್ತವತೆಯನ್ನು ಅರ್ಥಮಾಡಿಕೊಳ್ಳಲೇ ಇಲ್ಲ. ಈ ಕವನದಲ್ಲಿ ಇಡೀ ದೇಶದ ವ್ಯವಸ್ಥೆಯು ಒಡಮೂಡಿದೆ. ಸಮಕಾಲೀನ ಸಮಾಜದ ರೋಗ ರುಜಿನಗಳ ಸ್ವರೂಪವನ್ನು ಎತ್ತಿ ತೋರಿಸಲು ಇಲ್ಲಿ ಪ್ರಯತ್ನಿಸಿದ್ದಾರೆ. ಈ ಸಮಾಜಕ್ಕೆ ಅಂಟಿರುವ ರೋಗ ವಿಚಿತ್ರವಾಗಿದೆ. ಅದು ವಿಕಾರವಾಗಿ ಕಾಣುವಂತಹ ರೋಗವಾಗಿದೆ.

''ವಿಶ್ವವಿದ್ಯಾಲಯಗಳ ನಿದ್ರಾಮಾತ್ರೆ ಪ್ರಸಾರಗಳು
ಪುಣ್ಯ ಕ್ಷೇತ್ರಗಳ ವ್ಯಾಪಾರೀ ಹುಡಿಯ ದರೋಡೆ ಮುಡುಪುಗಳು
ಮಠಾಧಿಪತಿಗಳ ಶಾಶ್ವತ ರೋಗಿಯನ್ನಾಗಿಸಿ ಬಿಟ್ಟವು!
ಹತ್ತು ಜನರ ಪರಿಶೀಲನೆಯಿಂದ ಕೊನೆಯುಸಿರು ಅಳೆಯಲ್ಪಡುತ್ತಿದೆ.
ಪ್ರಾಣ ಮಾನಗಳು ಬಹಿರಂಗವಾಗಿ ಹರಾಜಾಗುತ್ತಿವೆ
ಕಾಲುಚಾಚಿದ
ಭಾರತ ಮಾತೆಗೆ
ಬದುಕು ಭಾರವಾಗಿದೆ
........................
........................
ಮುಂದೆ ಮೌನವಾಗಿ ಮಿಂಚುತ್ತಿರುವ
ಶಸ್ತ್ರವೈದ್ಯನ ಹದವಾದ ಆಯುಧಗಳು
ಅನಿವಾರ್ಯವಾಗಿ ಆಹ್ವಾನಿಸುತ್ತಿವೆ
ಮಿಂಚುವ ಕತ್ತಿಗಳು
ಹೆರಿಗೆಯ ಕಾಣಿಕೆಗಳು
ರಕ್ತ ಕ್ರಾಂತಿಗೆ ಸೂಲಗಿತ್ತಿ
ರಕ್ತ ಕ್ರಾಂತಿಗೆ ಸೂಲಗಿತ್ತಿ'' [೨೮]

ಇಲ್ಲಿ ಭಾರತ ಮಾತೆಯ ಬದುಕು ಭಾರವಾಗಿದೆ. ಗರ್ಭಾಯಾಸದ ಪರಿಣಾಮದಿಂದ ದುರ್ಭರವಾಗಿದೆ. ಈ ಭಾರತಮಾತೆಯನ್ನು ಬದುಕಿಸಬೇಕಾಗಿದೆ. ಈ ಮಾತೆಯನ್ನು ರಕ್ಷಿಸಲು ಹಿಂಸೆಯ ದಾರಿಯನ್ನು ಹಿಡಿಯಬೇಕಾಗು ತ್ತದೆ. ಹಾಗಾಗಿ ರಕ್ತ ಕ್ರಾಂತಿಯ ಸೂಲಗಿತ್ತಿಯಾಗಬೇಕೆಂದು ಕವಿ ಸೂಚಿಸುತ್ತಾನೆ.

**ಬಿದ್ದವನು ಎದ್ದಾಗ** ಎಂಬ ಕವನದಲ್ಲಿ ಶೋಷಿತ ವರ್ಗದ ಜನತೆ, ಬಹಿಷ್ಕೃತರ ಶೋಷಣೆ ದೇಶದ ರಾಜಕೀಯ ವಿಡಂಬನೆಯು ಈ ಕವನದಲ್ಲಿ ಮೂಡಿಬಂದಿದೆ. ಇಲ್ಲಿ ನಿರ್ಗತಿಕನು ಕರ್ಮ ಸಿದ್ಧಾಂತದ ಗುಲಾಮನಾಗಿ ದುಡಿಯುವನು. ಅವನು ಪ್ರಜಾಪ್ರಭುತ್ವದ ದರೋಡೆಗಾರರ ನಂದನವನದಲ್ಲಿ ವಸ್ತುವಾಗಿದ್ದಾನೆ. ಅವನು ಸಮಾಜದ ದುಷ್ಟ ವ್ಯವಸ್ಥೆಗೆ ಬಲಿಯಾದವನು.

ರಾಜಕೀಯ ವ್ಯವಸ್ಥೆಯಲ್ಲಿ ಜನರು ಭಯದ ನೆರಳಲ್ಲಿ ಜೀವನ ಸಾಗಿಸುವಂತಾಗಿದೆ. ದರೋಡೆಯಿಂದ ಬೊಜ್ಜು ಬೆಳೆಸಿಕೊಂಡ ರಾಜಕೀಯ ವ್ಯಾಭಿಚಾರದ ಇಡೀ ಸಾಮಾಜಿಕ ವ್ಯವಸ್ಥೆ, ದೇಶದ ದುಸ್ಥಿತಿ ನಿರ್ಗತಿಕ ಶೋಷಿತರ ಶೋಷಣೆ ಮೊದಲಾದುವು ಸ್ಪಷ್ಟವಾಗಿ ಈ ಕವನದಲ್ಲಿ ಮೂಡಿಬಂದಿದೆ.

'' ಭೋದಿವೃಕ್ಷವು ಹಿಡಿಯಗಲ ನೆರಳನ್ನೀಯಲಿಲ್ಲ
ಗಾಂಧೀ ಪಥವು ಚಿಪ್ಪಿನಷ್ಟು ಗಂಜಿ ಕುಡಿಸಲಿಲ್ಲ
ವೇದ ಪುರಾಣ ಧರ್ಮಶಾಸ್ತ್ರಗಳು ತಲೆ ಕಾಯಲಿಲ್ಲ
ಆದರೆ, ಕರ್ಮ ಸಿದ್ಧಾಂತದ ಗುಲಾಮನಾಗಿ
ಡೋಕುವನು '' [೫೯]

ಈ ಶೋಷಿತವರ್ಗಕ್ಕೆ, ಬಹಿಷ್ಕೃತ ಜನಕ್ಕೆ ಬೋಧಿವೃಕ್ಷವು ಒಂದು ಹಿಡಿ ಅಗಲ ಜಾಗ ನೀಡಲಿಲ್ಲ. ಗಾಂಧೀ ಪಥವು ಗಂಜಿ ಕುಡಿಸಲಿಲ್ಲ. ಶೋಷಿತರು ಇಂಥವರಿಗೆ ಗುಲಾಮನಾಗಿ, ತನ್ನ ಕಾಯಕವನ್ನು ನಿರ್ವಹಿಸುವನು. ಇಡೀ ಸಮಾಜದ ದುಸ್ಥಿತಿ, ರಾಜಕೀಯವನ್ನು ವಿಡಂಬನಾತ್ಮಕವಾಗಿ ಈ ರೀತಿ ನೀಡಿದ್ದಾನೆ.

''ಏಟರು ಬೀದಿ ನಾಟಕಕಾರರು
ನಟರು, ನಗರಕ್ಕೆ ಮೂಲರಾದವರು
ಖಾದೀ ಟೋಪಿಧಾರಿಗಳು
ಲೀಡರುಗಳು
ಬಡ್ಡೀ ಮಕ್ಕಳು
ದುರ್ಮಾರ್ಗರು, ದಮ್ಮಡಿಗೆ ಹುಟ್ಟಿದವರು
ದೇವಾಲಯದ ಧೂರ್ತರು
ಮಸೀದಿಯ ಮೂರ್ಖರು
ಗುರುದ್ವಾರದ ಗೂಂಡಾಗಳು
ಚರ್ಚಿನ ಪಾಪಿಷ್ಟರು.
ಶಾಂತಿದೂತರು, ವಾರ್ತಾಚೋರರು
ಪತ್ರಿಕಾಶೂರರು, ರಾಗಿ-ರೋಗಿ-ಬೈರಾಗಿಗಳು
ಎಲ್ಲ ತರದ ಬದ್ಮಾಷರು'' [೬೦]

ಈ ರೀತಿಯಾಗಿ ಕವನದಲ್ಲಿ ವ್ಯವಸ್ಥೆಯ ಚಿತ್ರಣ ಮೂಡಿಬಂದಿದೆ. ಈ ಕವನವು ಬೆಳೆಯುತ್ತಾ ಹೋದಂತೆ ಇಡೀ ಸಮಾಜದ ದುಷ್ಟ ವ್ಯವಸ್ಥೆಯನ್ನು ಕಂಡುಕೊಳ್ಳಬಹುದು. ರಾಜಕೀಯ ವಿಡಂಬನವು ಮನಮುಟ್ಟುವಂತೆ ಚಿತ್ರಿತವಾಗಿದೆ.

ಹೀಗೆ ಜ್ವಾಲಾಮುಖಿಯವರ ಕವನಗಳು ಪ್ರಜ್ವಲಿಸುವ ಜ್ವಾಲಾಮುಖಿಯಂತೆ ಹೊರಹೊಮ್ಮಿದೆ. ಸಾಮಾಜಿಕ ಶೌರ್ಯದ ವಿರುದ್ಧ ಬಿಚ್ಚುಮನಸ್ಸಿನ ಚಾಟಿಯೇಟು ನೀಡುವ ಇವರ ಕವಿತೆಗಳು ನಿಜಕ್ಕೂ ಕ್ರಾಂತಿಕವಿತೆಗಳು. ವೈಚಾರಿಕ ನೆಲೆಯಿಂದ ಸಾಮಾಜಿಕ ವಸ್ತು ಸ್ಥಿತಿಯನ್ನು ನೇರವಾಗಿ ಕಟುಮಾತುಗಳಿಂದ ಹೇಳುವ ಮನೋಭಾವನೆ ಇವರದು. ಮಾನವೀಯ ಮೌಲ್ಯಗಳ ಮೇಲೆ ತುಂಬ ವಿಶ್ವಾಸವುಳ್ಳವರು. ಸಂಪ್ರದಾಯ, ಸುಳ್ಳು, ಮೋಸ, ಮತ ಮೀಮಾಂಸೆಗಳ ವಿರುದ್ಧ ತುಂಬ ಕೆಂಡಕಾರುತ್ತಾರೆ ಜ್ವಾಲಾಮುಖಿ.

**ಚೆರಬಂಡರಾಜು**

ದಿಗಂಬರ ಕವಿ ಚೆರಬಂಡರಾಜು ಇವರ ಮೂಲ ಹೆಸರು 'ಬದ್ದಂ ಭಾಸ್ಕರರೆಡ್ಡಿ.' ದಿಗಂಬರ ಕವಿಯಾಗಿ ಅಲ್ಲದೆ, ಅನಂತರ ಕಾಲದಲ್ಲಿ ಅತ್ಯಂತ ಕ್ರಾಂತಿಕಾರಿ ಕವಿಯಾಗಿ, ಅಷ್ಟೇ ಪ್ರಮಾಣಿಕರಾಗಿ ಬರಹದಲ್ಲಿ ತಮ್ಮನ್ನು ತಾನು ತೊಡಗಿಸಿಕೊಂಡವರು. ಇವರದು ಮಿತಭಾಷೆ ಮೃದು ಸ್ವಭಾವ. ದೃಢವಾದ ಮನಸ್ಸುಳ್ಳ ಇವರು ಮೃದುಹೃದಯದವರಾದರೂ ರಚನೆಯಿಂದ ನೇರವಾಗಿ ಜನರ ಮನಸ್ಸನ್ನು ಸೆಳೆಯುವಂತಹ ವ್ಯಕ್ತಿತ್ವವನ್ನು ಪಡೆದಿದ್ದರು. ಚೆರಬಂಡರಾಜು ಹೈದರಾಬಾದಿನ ಹತ್ತಿರದ ಅಂಕುಶಾಪುರವೆಂಬ ಗ್ರಾಮದಲ್ಲಿ ಜನಿಸಿದರು. ತನ್ನ ತಾಯಿ ಹದಿನೈದು ದಿನಗಳ ಪ್ರಸವವೇದನೆಯನ್ನು ಅನುಭವಿಸಿ ಕೊನೆಗೆ ತಾಯಿ ಸಾಯುವ ಸ್ಥಿತಿಗೆ ಬರುವಾಗ ತಾನು ಜನಿಸಿ ತಾಯಿ ಮೃತ್ಯುವಿಗೆ ಕಾರಣನಾದನು. ಈತನಿಗೆ ಮಾನವ ಅಸ್ತಿತ್ವದ ಬಗ್ಗೆ ತುಂಬ ಕಾಳಜಿ. ಮನುಷ್ಯನಾಗಿ ಸಾಯಲು ಸಿದ್ಧ. ದೇವರಲ್ಲಿ ನಂಬಿಕೆಯಿಲ್ಲ, ಸಂಪ್ರದಾಯ, ಗೊಡ್ಡು ಸಂಪ್ರದಾಯ. ದೇವರ ಮೇಲೆ ದ್ವೇಷ. ಈತನಿಗೆ ಒಂಟಿಯಾಗಿ ಕಡಲು ತೀರದ ಮರಳಿನಲ್ಲಿ ಕುಳಿತುಕೊಳ್ಳುವುದೆಂದರೆ ತುಂಬ ಇಷ್ಟ. ಹಾಗೂ ನೈಸರ್ಗಿಕವಾದ ಮಳೆಯಲ್ಲಿ ನೆನೆದು ಸಂತೋಷ ಪಡುವುದು ಈತನ ಅತ್ಯಂತ ಇಷ್ಟದ ಸಂಗತಿಗಳು. ಮಾನವತೆಗಾಗಿ ಮನುಷ್ಯರ ಒಳಿತಿಗಾಗಿ, ಸಮಾಜ ಒಳಿತಿಗಾಗಿ ಒಳ್ಳೆಯದನ್ನು, ಮಾಡಿ ಸಾಧಿಸಬೇಕೆಂಬ ಆಸೆ ಮನದಲ್ಲಿ ತುಂಬಿಕೊಂಡಿದ್ದರು.

ಚೆರಬಂಡರಾಜು ಬರೆದ ಪ್ರತಿಯೊಂದು ಕವನಗಳು ಒಂದಲ್ಲ ಒಂದು ರೀತಿಯಲ್ಲಿ ವೈಶಿಷ್ಟ್ಯವನ್ನು ಪಡೆದಂತವು. ನೇರವಾಗಿ, ನಗ್ನವಾಗಿ, ಸತ್ಯ ಹೇಳುವ ಛಲ, ಒಮ್ಮಿಂದೊಮ್ಮೆಲೆ, ನೋಡು ನೋಡುತ್ತಲೆ ತಾರಸ್ಥಿತಿಗೇರುವ ಮನೋಭಾವ. ಬಯ್ಗುಳಗಳ ಸರಮಾಲೆ, ಆವೇಶ, ಆಕ್ರೋಶ ಮುಂತಾದವುಗಳು ಇವರ ಕವನಗಳಲ್ಲಿ ಕಾಣಬಹುದು. ಆದರೆ ಸಂಯಮಕ್ಕೊಳಪಟ್ಟು ಬಂದ ಕೆಲವು ಭಾಗಗಳಲ್ಲಿ ನಾ ಹತ್ತುವೆನು ನ್ಯಾಯಾಲಯ ಎಂಬ ಕವನದಲ್ಲಿ ಕಾಣುವ

ಭಾವತೀವ್ರತೆ, ನಾಟಕೀಯತೆ ಮಾತಿನ ವಿವಿಧಾರ್ಥಗಳು ಅತ್ಯಂತ ಪರಿಣಾಮಕಾರಿಯಾಗಿ ಬಂದಿವೆ. ಸಂಯಮಪೂರ್ಣ ಕವನಗಳಲ್ಲಿ ಈ ಕವನವೂ ಒಂದಾಗಿದೆ.

''ಒಂದು ದೇಶದ
ಒಂದು ಕೋರ್ಟಿನ
ಕಪ್ಪು ಕೋಟಿನ
ನೀಲಿ ಕೋಟಿನ ಬುಡದಲ್ಲಿ
ಫೈಸಲಾಗುವುದೇ ನನ್ನ ಕೇಸು?
ಬಿಡಿ ನನ್ನ,
ನಾ ಹತ್ತುವೆನು ನ್ಯಾಯಾಲಯವ
ಹುಟ್ಟಿಸಿದವನನ್ನೇ ಅಣಕಿಸಿದವನು
ನಾಕು ಜನರ ಮಾತಿನಂತೆ
ಅಮ್ಮಾ? ಎನ್ನುವುದೇ ಹೊರತು
ನವಮಾಸಗಳ ಹೊತ್ತವರು ಯಾರೋ?
ಯಾರಿಗ್ಗೊತ್ತು?
..............................
..............................
ಬಿಡಿ ನನ್ನ
ಪೆನ್ನು, ಪೇಪರು ಸರಿಮಾಡಿಕೊಳ್ಳಿ
ಲಾ ಪುಸ್ತಕದಲ್ಲಿ ನನ್ನ ಅನುಮಾನಗಳು.'' [೮]

ಹೀಗೆ ಇವರ ಕವನದಲ್ಲಿ ವ್ಯಂಗ್ಯಾತ್ಮಕವಾದ, ಭಾವಮಯ, ನಾಟಕೀಯ ವಿವಿಧ ಧಾಟಿಗಳಿಂದ ಕಾವ್ಯವಾಗುವ ಭಾಗಗಳು ತಕ್ಷಣ ಬೈಗುಳಗಳಾಗಿ, ರೋಷ, ಆವೇಶಗಳಾಗಿ ತಿರುಗಿ ಬಿಡುವುದು ಅವರ ಕಾವ್ಯದ ವೈಶಿಷ್ಟ್ಯವಾಗಿದೆ.

ದಿಗಂಬರ ಕಾವ್ಯ ಸಮಾಜದ ಕೆಳವರ್ಗದ ಜನರ ಅಭಿವೃದ್ಧಿಯನ್ನು ದೃಷ್ಟಿಯಿಟ್ಟುಕೊಂಡು ರಚಿತವಾದ ಕಾವ್ಯವಾಗಿದೆ. ಅವರ ಕನಸುಗಳ ದಾರಿಯನ್ನು ಅನೇಕ ಭಾವನುಭಾವಗಳ ಸಂಕೀರ್ಣತೆಯನ್ನು ಅನೇಕ ವಿಧಗಳಲ್ಲಿ, ಅನೇಕ ಮುಖಗಳಲ್ಲಿ ಕವ್ನಗಳಲ್ಲಿ ಹಿಡಿದಿಡಲಾಗಿದೆ. ಇವರದು ವಾಸ್ತವತೆಯ ಚಿತ್ರಣ. ಶೋಷಿತ, ದೀನದಲಿತರ ಚಿತ್ರಣ, ಶೋಷಕ ವ್ಯವಸ್ಥೆಯ ವಿಭಿನ್ನ ರೂಪಗಳ ವಿಡಂಬನೆ ಮುಂತಾದವುಗಳು ಇವರ ಕವನಗಳಲ್ಲಿ ಮುಖ್ಯವಾಗಿ ಗಮನಸೆಳೆಯುತ್ತದೆ.

‘ಇನ್ನು ನೀನಿನ್ನೂ ಗುಲಾಮ’ ಎಂಬ ಕವನದಲ್ಲಿ ದಾಸ್ಯ-ನೀಚ-ಸ್ವಾರ್ಥ ಗುಣಗಳು ಮನುಷ್ಯನಲ್ಲಿ ಹೇಗೆ ಬೆಳೆದಿವೆ, ಬೆಳೆಯಲು ಕಾರಣಗಳೇನು ಎಂಬುದನ್ನು ಕುರಿತು ಚೆರಬಂಡ ರಾಜು ಅವರು ಆಳವಾಗಿ ವಿಚಾರ ಮಾಡಿದ್ದಾರೆ. ಸ್ವತಂತ್ರ ಭಾರತದ ಪ್ರಜೆಯು ಎಂಥ ದಮನಕಾರಿ ವಿಷಯದಲ್ಲಿ ಸಿಕ್ಕಿಕೊಂಡು ನರಳುತ್ತಿರುವನೆಂಬ ಪರಿಸ್ಥಿತಿಯು ಚಿತ್ರಿತವಾಗಿದೆ. ಇದು ಇಡೀ ಭಾರತೀಯ ಕೆಳ ವರ್ಗದ ಜನರ ಗುಣ ಸ್ವಭಾವಗಳ ವಾಸ್ತವ ಚಿತ್ರಣವಾಗಿದೆ. ನಾಗರಿಕತೆಯ ಕತ್ತಲೆ ಕೂಪದಲ್ಲಿ ಬಿದ್ದವರು, ದಾರಿದ್ರ್ಯಕ್ಕೆ ವಾರಸುದಾರರು, ಭಾವ ದಾರಿದ್ರ್ಯದಿಂದ ನೀರಸರು, ನೆರೆ ಹೊರೆಯವರನ್ನು ಮೃಗಗಳಂತೆ ಬೇಟೆಯಾಡುವ ಮನೋಧರ್ಮವುಳ್ಳವರು, ಮುಂತಾದವರ ದುಷ್ಟ ಗುಣಗಳ ರೂಪಗಳು ಇಲ್ಲಿ ಕಂಡು ಬರುತ್ತವೆ. ಶತ ಶತಮಾನಗಳ ದಾಸ್ಯ ವ್ಯವಸ್ಥೆಯು ವಿವಿಧ ಕಾರಣಗಳಿಂದ ಇನ್ನೂ ಮುಂದುವರೆದಿದೆ. ಮನುಷ್ಯರಲ್ಲಿ ಇನ್ನೂ ದಾಸ್ಯ ಮನೋಭಾವವೇ ಹಾಗೆಯೇ ಬೆಳೆದುಕೊಂಡು ಬಂದಿದೆ. ಸ್ವಾತಂತ್ರ್ಯ ಬಂದರೂ ಸಹ, ರಾಜಕೀಯ ಡೊಂಬರಾಟದಿಂದ ಅದು ಬದಲಾಗಿಲ್ಲ ಎಂಬ ವಿಚಾರಗಳನ್ನು ಚೆರಬಂಡರಾಜು ಹೇಳುತ್ತಾರೆ.

‘‘ಕಣ್ಣೀರಿಗೆ ಕಟ್ಟು ಬಿದ್ದು
ನೆರೆಯುವನ ಎದೆಯ ಅಗ್ಗಿಷ್ಟಕ್ಕೆ ಆರಿಸಲೆಂದು
ಜೀವದಿಂದ
ಹೃದಯದಿಂದ
ಸುತ್ತ ತಿರುಗುವ ಮನುಷ್ಯರಲ್ಲಿ
ಮನುಷ್ಯರನ್ನೇ ಹೀರಿ
ಸ್ವಾಹಾ ಮಾಡುವ
ಕ್ಷಣ ಕ್ಷಣ ಕೈ ಬದಲಾಯಿಸುವ
ವೇಶ್ಯಂಶ ಧನ ಪಿಶಾಚಿಗೆ
ಇನ್ನೂ ಇನ್ನೂ ನೀನಿನ್ನು
ಗುಲಾಮ.’’ ೨೮

ಮನುಷ್ಯನು ಯಾವ ರೀತಿ ದಾಸ್ಯಕ್ಕೆ ಒಳಗಾಗಿದ್ದಾನೆಂಬುದನ್ನು ಹೇಳಿ, ಕ್ಷಣಕ್ಷಣಕ್ಕೂ ಬದಲಾವಣೆ ಹೊಂದುವ ವೇಶ್ಯೆಯಂತೆ ಧನ ಪಿಶಾಚಿಗೆ ನಾವು ಇನ್ನೂ ದಾಸರೇ, ವಂಶ ಪರಂಪರಾಗತವಾಗಿ, ಪರಂಪರೆಗಳಿಗೆ ಇನ್ನೂ ದಾಸರಾಗಿಯೇ ಇದ್ದೇವೆ. ಈ ಎಲ್ಲಾ ದಾಸ್ಯದಿಂದ ಯಾವಾಗ ಮುಕ್ತರಾಗುವುದು ಎಂದು ಕವಿಯ ಕಳವಳವಾಗಿದೆ.

ಇನ್ನೂ ಕವನ ಮುಂದುವರೆಯುತ್ತಾ ದಾಸ್ಯತ್ವದಿಂದ ಮುಕ್ತಿಹೊಂದಿ ಇನ್ನೂ ಮುಂದಾದರೂ ಪರಂಪರೆಯುನ್ನು ಅಳಿಸಿ ಹಾಕಿ ವಾಸ್ತವತೆಯಲ್ಲಿ ಜೀವನ ಸವೆಸಿ, ಮಾನವನಾಗಿ ಬಾಳಬೇಕೆಂಬುದು ಕವಿಯ ಆಶಯ.

ಚೆರಬಂಡರಾಜುರವರ ಕವನಗಳಲ್ಲಿ ವಂದೇ ಮಾತರಂ ಅತ್ಯಂತ ಪ್ರಮುಖವಾದುದು. ಈ ಕವನವು ಆಗ ಸರ್ಕಾರದ ನಿಷೇಧಕ್ಕೆ ಗುರಿಯಾಗಿತ್ತು. ಕಾರಣ ಈ ಕವನದಲ್ಲಿ ಭಾರತ ಮಾತೆಯ ಹೀನ ಸ್ಥಿತಿಯು ನೇರವಾಗಿ ಕಟುವಾದ ಶಬ್ದಗಳಿಂದ ಮೂಡಿದ ಪರಿಣಾಮವಾಗಿ, ಕವನವು ನಿಷೇಧಕ್ಕೆ ಒಳಗಾಯಿತು. ಆದ್ದರಿಂದ ಕವನದ ಮಹತ್ವವು ಗೊತ್ತಾಗುತ್ತದೆ.

''ಓ ನನ್ನ ಪ್ರಿಯವಾದ ಮಾತೃ ದೇಶವೇ
ತಂದೆಯೂ, ತಾಯಿಯೂ ಬಂಧುವೂ ದೈವವೂ ನೀನೇ!
ನಮ್ಮ ರೌಡಿಗಳ ಜೊತೆ ಕುಲುಕುವ ಶೀಲವತಿಯೇ,
ಅಂತರ್ಜಾತೀಯ ರಂಗದಲ್ಲಿ ಅಂಗಾಂಗ ಒತ್ತೆಯಿಡುವ ಅಂದವತಿಯೇ,
ಶ್ರೀಮಂತರ ವಶದಲ್ಲಿ ಮೈಮರೆತು ನಿದ್ರಿಸುವ ಜವ್ವನಿಯೇ'' [೪೩]

ಇದರಲ್ಲಿ ಮಾತೃಭೂಮಿಯ ಸಮಕಾಲೀನ ಸ್ಥಿತಿಯನ್ನು ಕವಿ ಬಯಲು ಮಾಡಿದ್ದಾನೆ. ಕವಿಗೆ ಮಾತೃಭೂಮಿಯ ಬಗ್ಗೆ ತುಂಬ ಅಭಿಮಾನ ತಂದೆ-ತಾಯಿ. ಬಂದು ಇಡೀ ಸರ್ವಸ್ವವೇ ಮಾತೃಭೂಮಿ ಎಂದು ಬಣ್ಣಿಸುತ್ತಾನೆ. ನಮ್ಮ ರೌಡಿಗಳ ಜೊತೆ ಕೈ ಕುಲುಕುವ ಶೀಲವಂತ ತಾಯಿ. ಅಂತಾರಾಷ್ಟ್ರೀಯ ಬಜಾರಿನಲ್ಲಿ ಅಂಗಾಂಗಳನ್ನು ಒತ್ತೆಯಿಡುವ ಸುಂದರ ಯೌವ್ವನ ನಿನ್ನದು. ಶ್ರೀಮಂತರ ತೆಕ್ಕೆಯಲ್ಲಿ ಮೈಮರೆತು ನಿದ್ರಿಸುವ ಯೌವ್ವನವು ನಿನ್ನದು. ನಿನಗೆ ಎಂಥ ಪರಿಸ್ಥಿತಿ ಬಂದಿದೆ ಎಂದು ಕಳವಳ ವ್ಯಕ್ತಪಡಿಸುತ್ತಾರೆ. ಈ ಮಾತೃಭೂಮಿಗೆ ಇಂಥ ಶೋಚನೀಯ ಸ್ಥಿತಿಗೆ ತಲುಪಿದೆ ಎನ್ನುವುದು ಕವಿಯ ಅನಿಸಿಕೆ. ಇನ್ನೂ ಕವಿ ಮುಂದುವರಿದು ಇಡೀ ಮಾತೃಭೂಮಿಯ ಪರಿಸ್ಥಿತಿಯನ್ನು ಆವಲೋಕಿಸುತ್ತಾನೆ. ವಿಡಂಬನಾತ್ಮಕವಾಗಿ ಭಾರತ ಮಾತೆಯ ಸ್ಥಿತಿಗತಿಯನ್ನು ಕವಿ ಚಿತ್ರಿಸಿದ್ದಾನೆ. ಅಂದರೆ ರಾಜಕಾರಣಿಗಳು ಅಂತರರಾಷ್ಟ್ರೀಯ ಮಟ್ಟದಲ್ಲಿ ಮರ್ಯಾದೆಯನ್ನು ತೆಗೆದಿದ್ದಾರೆ.

ಭಾರತ ಮಾತೆ ನಿದ್ರಿಸುತ್ತಿದ್ದಾಳೆ. ನಿನ್ನ ಒಡಲಲ್ಲಿ ಹುಟ್ಟಿದ ಬೆಳೆಯ ಪೈರನ್ನು ಇಲಿ - ಹೆಗ್ಗಣಗಳು ನಾಶಮಾಡುತ್ತಿವೆ. ಆದರೆ ಅದನ್ನು ನೋಡಿಯೂ ಸಹ ಸಹಿಸುತ್ತಿರುವ ತಾಯಿ ನಿನಗೆ ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ. ಬಾಯಿಗೆ ಬಾರದ ಸಸ್ಯ ಶ್ಯಾಮಲತೆ ನೀನು, ಸುಮ್ಮನೆ ಮಲಗಿಗೊಂಡಿದ್ದೀಯಾ, ಸಂಪತ್ತು ಲೂಟಿಯಾಗುತ್ತಿದ್ದರೂ, ಸುಮ್ಮನೆ ನೋಡುತ್ತಿರುವೆ ಎಂದು ರಾಜಕಾರಣಿಗಳ ಶೋಷಣೆಯನ್ನು ವ್ಯಂಗ್ಯವಾಗಿ ಭಯಾನಕತೆಯನ್ನು ಚಿತ್ರಿಸಿದ್ದಾನೆ. ಇನ್ನೂ ಮುಂದುವರೆದು ಹೇಳುತ್ತಾ,

''ಮೈಮೇಲಿನ ಬಟ್ಟೆಗಳಿಂದ ಪತಾಕೆಗಳ ಹೋಲಿಸಿ
ವಿವಸ್ತ್ರಳಾಗಿ ತಿರುಗುವ ಮಂಡತನವೇಕಮ್ಮಾ?
ಸಾಲಮಾಡಿ ಸಾಲು ಸಾಲು ಭವನಗಳ ಕಟ್ಟಿ
ಕಾಲು ಸುಟ್ಟ ಬೆಕ್ಕಿನಂತೆ ತಿರುಗುವ
ದೀನತನವೇಕಮ್ಮಾ?'' [೪೪]

ಇಲ್ಲಿ ರಾಜಕಾರಣಿಗಳು ರಾಷ್ಟ್ರದ ಹೆಸರಿನಲ್ಲಿ ಅವಳ ಮಾನ ಮರ್ಯಾದೆಯನ್ನು ಯಾವ ರೀತಿ ಹರಾಜಿಗೆ ಹಾಕಿದ್ದಾರೆಂಬುದು ಗೋಚರವಾಗುತ್ತದೆ. ಬೆತ್ತಲೆಯಾಗಿ ತಿರುಗುವ ನಿರ್ಗತಿಕರ ಚಿತ್ರಣ ನೆನಪಿಗೆ ಬರುತ್ತದೆ. ಬತ್ತಿಹೋದ ಮೊಲೆಯ ಹಾಲಿಗಾಗಿ ಅಳುವ ಕಂದಮ್ಮಗಳು, ಪೀಡಿಸುವ ಮಕ್ಕಳನ್ನು ಆ ಮಾತೆ ಸಂತೈಸಬೇಕು. ಆದರೆ ಕೇವಲ ಬೀದಿಯ ಶೃಂಗಾರ ಆಕೆಯನ್ನು ಮರೆಸುವುದು ಅಮ್ಮಾ ಭಾರತೀ ನಿನ್ನ ಗುರಿಯೇನು ತಾಯೇ? ಎಂದು ಕವಿ ಪ್ರಶ್ನಿಸುತ್ತಾರೆ. ಇನ್ನು ಮುಂದೆ ಎಷ್ಟು ದುರಂತಮಯವಾಗಿದೆ ಎನ್ನುವುದು ಈ ಸಾಲು ಸೂಚಿಸುತ್ತದೆ.

'ಕೆಸರು' ಕವನದಲ್ಲಿ ಕಾನೂನು ತನ್ನ ಅಂಕೆಯಲ್ಲಿ ಇಟ್ಟುಕೊಂಡ ನಾಯಕರು ಪಂಡಿತರ, ಯೋಗಿಗಳ ಖಾಲಿ ಬುರುಡೆ ಸಿದ್ಧಾಂತಗಳು, ದೇಶದ ವಸ್ತುಸ್ಥಿತಿ ಚಿತ್ರಿತವಾಗಿದೆ.

''ಜಡೆಗಟ್ಟಿದ ಶಿರೋಜಾಲ ತುದಿಗಳ
ಹಿಡಿದು ಜೋತಾಡುವ
ಸಿಡಿಯುವ ನಾಯಕರು,
ಹಣೆಯ ಮೇಲೆ ಬೈಗಳ ತಿಲಕ,
ಕಾನೂನು
ಇದ್ದಿಲ ತುಂಡಿನ ತುಟಿಗಳಿಂದ
ನಗು ನಗುತಾ ಮೈಮೇಲೆ ಉರುಳುವ
ಕಾಲ
ವೇಶ್ಯೆ
ಮೇಲೆದೆಯ ಸಾಮ್ರಾಜ್ಯದ ಮೇಲೆ
ಸಿಡಿದ ಕೋಟೆ
......................
......................
ಆದರೂ ಯೋಧಾನುಯೋಧರು, ಮೇಧಾವಿಗಳು, ಯೋಗಿಗಳು,
ಮೇಲುನೋಟಕ್ಕೆ ಮಹನೀಯರು, ಮಂದಿರಗಳು, ದೇವರುಗಳು
ಕವಿಗಳು, ಕಾವ್ಯದ ಲಾಲಿಗಳು, ನಟರು, ನಾಯಕರು'' [೪೪]

ಇಂದಿನ ಕೊಳೆತು ಹೋಗಿರುವ ಸಾಮಾಜಿಕ ವ್ಯವಸ್ಥೆಯಲ್ಲಿ ಮನುಷ್ಯನ ಸ್ಥಿತಿ ಯಾವ ರೀತಿ ಇದೆ ಎಂಬುದನ್ನು ಹೇಳುತ್ತಾ ಕೆಸರು ಗುಂಡಿಯಲ್ಲಿ ಕಾಲು ಮುರಿದು ಬಿದ್ದ ಹುಳಕ್ಕೆ ಕವಿ ಹೋಲಿಸಿದ್ದಾನೆ. ಇಂದಿನ ನಾಯಕರು ತನ್ನ ಕೈಯಲ್ಲಿ ಇದೆಯೆಂದು ತಿಳಿದು ಕೊಂಡು ಅವರು ಮಾಡುವುದೇ ಸರಿ ಎಂದು ಕೊಂಡಿದ್ದಾರೆ. ಈ ಭ್ರಷ್ಟತೆ ನಾಯಕರಿಗೆ ಅದೇ ಕಾನೂನು ಏನೂ ಮಾಡದು. ಆದರೆ ಕಾಲವು ವೇಶ್ಯೆಯಂತೆ ನಗುನಗುತ್ತಾ ಬೀಳುವ ಹಾಗೆ ಮೇಲೆದೆಯ ಸಾಮ್ರಾಜ್ಯದ

ಮೇಲೆ ಸೆರಗು ನಾಗರಿಕತೆ ಬೆಳಸಿಕೊಂಡು ಬಂದಿದೆ. ಮೇಧಾವಿಗಳು, ಯೋಧರು, ಯೋಗಿಗಳು ಮೇಲುನೋಟಕ್ಕೆ ದೊಡ್ಡವರಾಗಿ, ಮಹಾನ್ ವ್ಯಕ್ತಿಗಳಾಗಿ ಕಾಣುತ್ತಾರೆ. ಆದರೆ ಅವರ ವಿಚಾರಗಳು, ಭಾವನೆಗಳು ಸುಳ್ಳನ್ನೇ ಸತ್ಯವೆಂದು ನಂಬಿಸುತ್ತಾ ಬಂದು ಜನರನ್ನು ಅಡ್ಡ ದಾರಿಗೆ ಎಳೆಯುತ್ತವೆ. ಹಾಗೆ ಅವರು ಕೆಸರು ಗುಂಡಿಯಲ್ಲಿ ಬಿದ್ದುದು ಅಲ್ಲದೆ ಸಾಮಾನ್ಯ ಜನರನ್ನು ಬೀಳಿಸುತ್ತಿದ್ದಾರೆ. ಇವರ ಬೌದ್ಧಿಕ ಶೋಷಣೆಯು ಭಯಾನಕವಾಗಿದ್ದು, ದೇಶದ ಜನರ ಮಾನಸ ಪ್ರಪಂಚದಲ್ಲಿ ಹರಡಿದೆ. ಇಡೀ ಸಮಾಜದ ಸ್ಥಿತಿ, ಜನರ ಸ್ಥಿತಿ ಹೇಗೆ ಹರಡಿಕೊಂಡಿವೆ ಎಂಬುದನ್ನು ಈ ಕವನದಲ್ಲಿ ಕವಿ ಚಿತ್ರಿಸಿದ್ದಾರೆ.

ಈ ಕವನದಲ್ಲಿ ಚೆರಬಂಡರಾಜು ಸಮಾಜದ ಪರಿಸ್ಥಿತಿಯ ಪ್ರಕ್ರಿಯೆಯಲ್ಲಿ ವಾಸ್ತವಿಕತೆಯನ್ನು ನೂತನರೂಪಗಳಾಗಿ ವಿಡಂಬನಾತ್ಮಕವಾಗಿ ವ್ಯಾಖ್ಯಾನಿಸಿದ್ದಾರೆ. ಕಾನೂನು ನಾಯಕರ ಹಣೆಯ ನಿಂದೆಯ ತಿಲಕ; ಕಾಲ; ಇದ್ದಿಲ ತುಂಡು ತುಟಿಗಳಲ್ಲಿ ನಗುತ್ತ ನನ್ನ ಮೇಲೆ ಹೊರಳುವ ಕಾಲದ ವೇಶ್ಯೆ; ಹಸಿವು; ಹೊಟ್ಟೆ ಮಡುಪುಗಳ ಕೆಳಗೆ ಹಿಚುಕಿದ ಕಜ್ಜಿ ಹುಣ್ಣಿನ ಬೊಡ್ಡೆ; ಮನುಷ್ಯ; ಮಹಾರಣ್ಯ ಬರುಡೆ ಗುಂಡಿಯಲ್ಲಿ ಕಾಲು ಮುರಿದು ಬಿದ್ದ ನೊಣ; ಶಾಂತಿ; ಪ್ರಸವ ವೇದನೆ ಪಡುವ ಧರಣಿ ಗರ್ಭದಲಿ ಅಡ್ಡ ನರುಗಿದ ಸತ್ತ ಕೂಸು; ನಾಗರಿಕತೆ; ಸಿಫಿಲಿಸ್ಸಂಗೀತ, ಪ್ರತಿಮಾ ನಿರ್ಮಾಣದಲ್ಲಿ ಸ್ಪಷ್ಟತೆ, ವ್ಯಂಜನಕತೆಯಲ್ಲಿ ನಿಖರತೆಗಳನ್ನು ಸಾಧಿಸಿ ಹೇಳಬೇಕಾದುದನ್ನು ಎದೆಗೆ ನಾಟುವಂತೆ ಹೇಳುವುದು ಚೆರಬಂಡರಾಜು ಅವರ ವೈಶಿಷ್ಟ್ಯ.

'ಹೋಗಾಚೆ' ಕವನದಲ್ಲಿ ಪ್ರಪಂಚದ ಸಮಸ್ಯೆಗಳು ಮಾನವತೆಯ ತೊಳಲಾಟಗಳು ರಾಜಕಾರಣಿಗಳ ನಿರಂಕುಶ ಪ್ರಭುತ್ವ ಮುಂತಾದವುಗಳು ವ್ಯಕ್ತವಾಗಿವೆ. ಪ್ರಪಂಚದ ಪ್ರತಿಯೊಬ್ಬರು ಮಾನವತೆಯನ್ನು ಇಟ್ಟುಕೊಳ್ಳಬೇಕು, ಮಾನವೀಯತೆಯನ್ನು ಮರೆತರೆ ಏನು ಅನರ್ಥವಾಗುತ್ತದೆಂದು ಚೆರಬಂಡರಾಜು ಅವರು ಸೂಚಿಸುತ್ತಾರೆ.

'' ಹೆಜ್ಜೆ ಹೆಜ್ಜೆಯಲ್ಲಿ ಸಹರಾ ಮರಭೂಮಿ
ಪ್ರಪಂಚದಲ್ಲಿ ಪ್ರತಿಯೊಬ್ಬನ ತಲೆಯ ಮೇಲೆ
ಒಂದೊಂದು ಹಿಮಾಲಯ
ಉಸಿರು ಗಟ್ಟುವಂಥ ಯುದ್ಧ ಭಯದ ಜಲಪಾತದುರುಳು
ಭೂಗೋಳದ ಮೈಯೆಲ್ಲಾ ರಾಜಹುಟ್ಟು
ತಲೆಕೆಟ್ಟ ಹಕ್ಕಿಯಂತೆ ಹಾರಿಹೋಗಿ
ಭಾಷಣಗಳ ಹುಚ್ಚುಕಾಳುಗಳ ಹೆಕ್ಕಬೇಡ'' [೪೭]

ಇಲ್ಲಿ ಸಹರಾ, ಹಿಮಾಲಯಗಳು ಶೋಷಿತರ ದುಸ್ಥಿತಿಯನ್ನು ಸಂಕೇತಿಸುತ್ತವೆ. ಜನರಲ್ಲಿ ರಾಜಕಾರಣಿಗಳ ಸ್ವಹಿತಾಸಕ್ತಿಯಿಂದ, ಪ್ರಪಂಚದ ಜನರಲ್ಲಿ ಭಯದ ವಾತಾವರಣ,

ಮಾನವೀಯತೆಯಿಲ್ಲದ ನಿರಂಕುಶ ಪ್ರಭುತ್ವವಾದಿಗಳಿಂದ ಜನರ ಸ್ಥಿತಿಯು ಭಯಾನಕವಾಗಿದೆ. ಈ ಸಮಸ್ಯೆಗಳಿಂದ ಹೆದರಿ ಓಡಿದರೆ ಪರಿಹಾರವಾಗುವುದಿಲ್ಲ, ವ್ಯವಸ್ಥೆಯ ವಿರುದ್ಧ ಸಿಡಿದೆದ್ದು ಏಳಬೇಕೆಂದು ಜನರಿಗೆ ಸಂದೇಶ ಕೊಡುತ್ತಾನೆ.

''ರಾಜ ಬಂದುಗಳು
ಕೊಲ್ಲದಿದ್ದರೆ ಸಾಯುವುದಿಲ್ಲ
ಈ ಮಾತು ನೆನಪಿರಲಿ
....................
....................
ಸೂರ್ಯನನ್ನೇ ಹಿಡಿಯಲ್ಲಿ ಬಿಗಿಹಿಡಿಯುವುದು
ನಿನ್ನಾಶಯವಾಗಲಿ
ಪ್ರಾಣ ಪಣವಿಟ್ಟಾದರೂ ಈ ಲೋಕಕ್ಕೆ
ಮಾನವತಾ ಭಿಕ್ಷೆ ನೀಡು
ಹೋಗು! ಹೋಗಾಚೆ! '' [೬]

ಎನ್ನುವ ರೀತಿಯಲ್ಲಿ ರಾಜಕಾರಣಿಗಳನ್ನು ಕುರಿತು ಅವರ ನಿರಂಕುಶ ಅಧಿಕಾರದ ಹೆಗ್ಗಣಗಳನ್ನು ಸಾಯಿಸದಿದ್ದರೆ ಸಾಯುವುದಿಲ್ಲ. ಕೇವಲ ವೇದಿಕೆಯಾಗಬೇಡ ಸಿಡಿದೇಳಬೇಕೆಂದು ಹೇಳಿ ಜೀವನವೆನ್ನುವ ಭಯ ಗುಲಾಮತನದ ಬದುಕಲ್ಲಿ ನಿರ್ಲಿಪ್ತವಾಗಿ ನೋಡುತ್ತಿರುವ ಮೇಧಾವಿಗಳನ್ನು ಮನ್ನಿಸಬೇಡ ಎಂಬುದು ಚೆರಬಂಡರಾಜು ಅವರ ಸಲಹೆ. ಮಾನವತೆಯನ್ನು ಅಳವಡಿಸಿಕೊಳ್ಳಬೇಕೆಂದು ಹೇಳಿ ಸೂರ್ಯನೆಂಬ ಕ್ರಾಂತಿಯ ಕಿಡಿಯನ್ನು ತನ್ನ ಹಿಡಿತದಲ್ಲಿ ಹಿಡಿದುಕೊಂಡು ಮುನ್ನುಗ್ಗಬೇಕು. ಪ್ರಾಣ ಪಣವಿಟ್ಟಾದರೂ ಈ ಪ್ರಪಂಚಕ್ಕೆ ಮಾನವತೆಯ ಭಿಕ್ಷೆ ನೀಡಬೇಕೆಂದು, ಕ್ರಾಂತಿಯ ಆದರ್ಶತನವು ಮನಸ್ಸಿಗೆ ನಾಟುವಂತೆ ಸಾಂಕೇತಿಕವಾಗಿ ಈ ಕವನದಲ್ಲಿ ಮನಃಪೂರ್ವಕವಾಗಿ ಚಿತ್ರಿಸಿದ್ದಾರೆ.

'ಐವತ್ತುಕೋಟಿ ಅಗ್ನಿಕುಂಡಗಳು' ಈ ಕವನದಲ್ಲಿ ಐವತ್ತು ಕೋಟಿ ಜನರು ಕ್ರಾಂತಿಯ ಕಿಡಿಗಳಾಗಬೇಕು; ಇವರಲ್ಲಿ ಪ್ರತಿಭಟನೆಯ ಮನೋಭಾವನೆ ಇಲ್ಲ: ಅವರೆಲ್ಲ ಇರುವ ಸ್ಥಿತಿಗಳಿಂದ ಹೊರಬರಬೇಕೆಂಬುದು ಕವಿಯ ಆಶಯ. ಮೂಡನಂಬಿಕೆಯ ಒಡಲಿನಿಂದ, ಕಳ್ಳ ವೇಷಗಾರ, ಮೋಸಗಾರರಾದ ನಾಯಕರುಗಳ ಕಬಂಧಗಳಲ್ಲಿ ನರಳುತ್ತಿರುವ ಕೆಳವರ್ಗದ, ದೀನ ಜನರು ಹೊರಬೇಕೆಂದು ಕವಿಗಳು ಎಚ್ಚರಿಸುತ್ತಾರೆ.

''ಐವತ್ತು ಕೋಟಿ ಕಂಠಗಳು
ಪ್ರತಿಭಟನೆಯ ಪಂಜುಗಳಾಗಿ ಮಾರ್ಪಡಲೇಬೇಕು
ವಾಸ್ತವ ಬದುಕನ್ನು, ಸಾವಿರ ಮೈಲಿ ದೂರ

ಬಿಸಾಕಿದ
ವಿದ್ಯಾಲಯಗಳನ್ನು ಬಿಟ್ಟು,
..........................
..........................
..........................
ನರಳುತ್ತಿರುವ ದೀನ ಜನರು
ರೆಪ್ಪೆ ಹರಿದುಕೊಂಡು ಹೊರಗೆ ಬರಬೇಕು
ಮಹಾವ್ಯವಸ್ಥೆ ರೂಪಿಸಿದ ನಾಯಕರು
ಜನರನ್ನು ಮೂಕಜ್ಜಿಗಳಂತೆ
ಹುಳುಗಳಂತೆ, ಮೂರ್ಖರಂತೆ

ಹೇಗೆ ಮಾಡಿದ್ದಾರೋ ಎಂಬುದನ್ನು
ಒಮ್ಮೆ ಬೆನ್ನುತಟ್ಟಿ ಕಣ್ಣಾರೆ ತೋರಿಸಬೇಕು
ಐವತ್ತು ಕೋಟಿ ಕಂಠಗಳು ಪ್ರತಿಭಟನೆಯ
ಪಂಜುಗಳಾಗಿ ಮಾರ್ಪಡಬೇಕು'' [58]

ಈ ಕವನದಲ್ಲಿ ವಾಸ್ತವತೆಯ ಪ್ರಪಂಚಕ್ಕೆ ಜನರು ಬರಬೇಕೆಂದು ಕವಿಯ ಆಶಯ. ದೇಶದ ಐವತ್ತು ಕೋಟಿ ಜನರು ಪ್ರತಿಭಟನೆಯ ಕಿಡಿಗಳಾಗಿ ಮಾರ್ಪಡಬೇಕೆಬುಂದು ಕವಿಯು ಆಶಿಸುತ್ತಾನೆ. ಇಂದಿನ ವಿಶ್ವವಿದ್ಯಾಲಯಗಳು ವಾಸ್ತವಿಕತೆಯಿಂದ ಸಾವಿರ ಮೈಲಿ ದೂರವಿದೆ. ಹಾಗಾಗಿ ಯುವ ಪೀಳಿಗೆಗೆ ಕರೆಕೊಟ್ಟು ಹದಗೆಟ್ಟ ವ್ಯವಸ್ಥೆಯ ವಿರುದ್ಧ ಸಾಮಾಜಿಕ ಪರಿವರ್ತನೆಗಾಗಿ, ತಮ್ಮ ಬದುಕಿನ ಸುವ್ಯವಸ್ಥೆಗಾಗಿ ಪ್ರತಿಭಟಿಸಲೇಬೇಕು. ನಾಡು ಬೀದಿಯಲ್ಲಿ ಮೋಸಗಾರರಾದ ನಾಯಕರ ಬಂಡವಾಳವನ್ನು ಹೊರಗೆಡವಬೇಕೆಂದು ಕವಿಗಳು ಹೇಳುತ್ತಾರೆ. ಮೂಡನಂಬಿಕೆಯ ಒಡಲಲ್ಲಿ, ಮೋಸಗಾರ ನಾಯಕರ ಕಳ್ಳವೇಷಗಳಲ್ಲಿ ನರಳುತ್ತಿರುವ ದೀನರ, ಕೆಳವರ್ಗದ ಜನರು ಅಂಧಕಾರದಿಂದ, ಅವರ ಕಬಂಧಬಾಹುಗಳಿಂದ ಹೊರಬರಬೇಕೆಂದು ಹೇಳುತ್ತಾರೆ. ಅತೀ ಕೆಳಮಟ್ಟಕ್ಕೆ ಜನರನ್ನು ನೂಕಿದ ನಾಯಕರ ವಿರುದ್ಧ ಬಂಡೇಳುವಂತೆ ಪ್ರೇರೆಪಿಸುತ್ತಾರೆ. ತಮ್ಮನ್ನು ಮೂರ್ಖರನ್ನಾಗಿ, ಚರಂಡಿಯ ಹುಳುಗಳಂತೆ ಮಾಡಿದ್ದಾರೆ ಎಂಬುದನ್ನು ಹೊರಗೆಡವಿ ಅವರಲ್ಲಿ ಇರುವ ಮಾನವೀಯತೆಯ ಗುಣಗಳು, ಅವರಲ್ಲಿ ಇರುವ ರೋಷ, ಆವೇಶಗಳನ್ನು ತಮ್ಮ ಪ್ರತಿಭಟನೆಯ ಮೂಲಕ ತೋರಿಸಬೇಕೆಂಬುದು ಕವಿಯ ಮನೋಧರ್ಮ. ಸ್ಥಿತಿಯನ್ನು ನೋಡಿ ಕವಿ ಮರುಕ ಪಡುತ್ತಾರೆ.

ಚೆರಬಂಡರಾಜು ಕವನಗಳಲ್ಲಿ ಧಾರ್ಮಿಕ ವಿಡಂಬನೆಯನ್ನು ಕಾಣಬಹುದು. ಮಾನವ ಜನಾಂಗವನ್ನು ಹುಟ್ಟಿನಿಂದಲೇ ಹಿಡಿದುಕೊಂಡಿರುವ ಪೀಡೆಗಳು ಮೂರು. ಅವು ಮತ, ದೇವರು,

ಭಕ್ತಿ. ಇವು ಮನುಷ್ಯರನ್ನು ಯಾವ ವಿಧದಲ್ಲೂ ಬೆಳೆಯಲು ಬಿಡುವುದಿಲ್ಲ. ಕಾರ್ಲ್‌ಮಾರ್ಕ್ಸ್ ಧರ್ಮವನ್ನು ಒಂದು ಬಗೆಯ ಅಮಲು ಎಂದು ಕರೆದಿದ್ದುರಿಂದ ಸಾಮಾಜಿಕ ವಿಶ್ಲೇಷಣೆಗೆ ಒಂದು ಸೂತ್ರ ಸಿಕ್ಕಂತಾಗಿದೆ. ಸಮಾನತೆಯ ಸಮಾಜ ನಿರ್ಮಾಣ ಮಾಡಬೇಕೆಂಬುದು ಕವಿಯ ಗುರಿ. ಇದಕ್ಕೆ ಪ್ರತಿರೋಧ ಶಕ್ತಿಗಳು ಧರ್ಮ, ಮತ, ಪರಂಪರಾಗತ ಮೌಢ್ಯಗಳು. ಜನರ ಮನಸ್ಸು, ಮತಗಳಲ್ಲಿ ಪಾಚಿಗಟ್ಟಿ ಹೋಗಿರುವ ಮತೀಯ ಮೌಢ್ಯಗಳನ್ನು ತಿಕ್ಕಿ ತೊಳೆಯುವುದು ಕವಿಯ ಮುಖ್ಯ ಹೊಣೆ. ಕಾರಣ ಇಂಥ ಮೌಢ್ಯದಿಂದ ಅನೇಕ ಸಾಮಾಜಿಕ ಅಸಮಾನತೆ, ಅಸಂಬದ್ಧತೆ, ಅನ್ಯಾಯ ಅತ್ಯಾಚಾರ, ಶೋಷಣೆಗಳು ವ್ಯಾಪಕವಾಗಿ ನಡೆದಿರುವುದನ್ನು ಚೆರಬಂಡರಾಜು 'ಜಗದ್ಗುರುಗಳು ಬರುತ್ತಿದ್ದಾರೆ ಎಚ್ಚರಿಕೆ' ಎಂಬ ಕವನದಲ್ಲಿ ವಿಮರ್ಶಿಸಿದ್ದಾರೆ.

ಜಗದ್ಗುರುಗಳು ಬರುತ್ತಿದ್ದಾರೆ ಎಚ್ಚರಿಕೆ ಕವನದಲ್ಲಿ ವಿಷಯವು ಯುವ ಪೀಳಿಗೆಯ ಮೇಲೆ ತುಂಬ ಪ್ರಭಾವ ಬೀರಿವೆ. ಕವಿಗೆ ಭವಿಷ್ಯತ್ತಿನ ಮೇಲೆ ತುಂಬ ಕಳಕಳಿ ಇದೆ. ಜಗದ್ಗುರುಗಳ ಆಟಾಟೋಪಗಳನ್ನು, ದೊಂಬಿ ಧಾಂಬಿಕತೆಯನ್ನು ಬಯಲಿಗೆಳೆಯುವುದೇ ಈ ಕವನದ ಮುಖ್ಯ ಆಶಯ.

'' ಇವರು
ಪಲ್ಲಕ್ಕಿಗಳಲ್ಲಿ ಮಾತ್ರ ಪಯಣಿಸುತ್ತಾರೆ
ಇವರಿಗೆ
ಧನವಂತರ ಭವನಗಳಲ್ಲದೆ, ಬಡವರ ಮುರುಕು
ಗುಡಿಸಲು ನೆನಪಾಗದು
ಮನುಷ್ಯರ ಭುಜಗಳನ್ನು ಮಾತ್ರ ಹತ್ತುತ್ತಾರೆ
ಕಾಲಿದ್ದು ಕುಂಟರು
......................
......................
......................
ಕೊಬ್ಬಿದ ಗುಬ್ಬಿಗೂಡಿನ ತಲೆಚಂದದ ಬಾಬಾಗಳೇ?
ಚಕ್ರವರ್ತಿಗಳಂತೆ ಮೆರೆಯುವ ಜಗದ್ಗುರುಗಳೇ?
ಇವರೇ ಈ ಕುಷ್ಠ ವ್ಯವಸ್ಥೆಗೆ ಕಾರಣರು
ಕಾಳ ಸಂತೆಯ ಹೆಗ್ಗಣಗಳನ್ನು
ರಾಜಕೀಯ ಪುಢಾರಿಗಳನ್ನು,
ಅಧಿಕಾರ ಮಹಾಂಧರನ್ನು, ಸಾಹಿತೀ ವಂದಿಮಾಗಧರನ್ನು
ಅಭಯ ನೀಡಿ ಕಾಪಾಡುವ ಕಂಕಣ ತೊಟ್ಟಿದ್ದಾರೆ.
ದೇಶದೆಲ್ಲಾ ಕಡೆ ನಿರ್ವೀರ್ಯತೆಯನ್ನು ಸ್ಥಾಪಿಸುತ್ತಾ
ಭಯಂಕರ ಕುಷ್ಠ ಸಂಸ್ಕೃತಿಯನ್ನು ಸಾಕುತ್ತಿದ್ದಾರೆ.'' [೧೮]

ಈ ಕವನದಿಂದ ಮುಖ್ಯವಾಗಿ ತಿಳಿಯುವುದೇನೆಂದರೆ ರಾಜಮಹಾರಾಜರ ವೈಭವ ಹೋಗಿ ಪ್ರಜಾರಾಜ್ಯ ಬಂದರೂ ಸಹ ಮೌಢ್ಯ, ಸಂಪ್ರದಾಯಗಳು ಕಡಿಮೆಯಾಗಿಲ್ಲವೆಂಬುದು ಜಗದ್ಗುರುಗಳನ್ನು ಉದ್ದೇಶಿಸಿ ಬರೆದ ಈ ಕವನ ತುಂಬ ಪ್ರಸಿದ್ಧಿ ಪಡೆದಿದೆ. ಇವರು ಪಲ್ಲಕ್ಕಿಯಲ್ಲಿ ಪ್ರಯಾಣಿಸುವ ಕಾಲಿಲ್ಲದ ಕುಂಟರು, ಬಡವರ ಗುಡಿಸಲು, ದೀನರನ್ನು ಬಿಟ್ಟು ಶ್ರೀಮಂತರ ಮನೆಗಳಲ್ಲಿ ವಾಸ ಮಾಡುವ, ಧನವಂತರನ್ನು ನೆನೆಯುವ ಡೊಂಬಿ ಜಗದ್ಗುರುಗಳು. ಆಧ್ಯಾತ್ಮ ಚಿಂತನೆಯ ನೆಪದಲ್ಲಿ ನವೀನ ಪತಿವ್ರತೆಯರ ಉದ್ಧಾರ ಮಾಡುವವರು ಎಂಬುದು ಇವರ ಒಳನೋಟಗಳು.

ಬದುಕೆಲ್ಲಾ ಕಪಟಯಾತ್ರೆ ಮಾಡಿಕೊಂಡ ಗೋಸುಂಬೆ ಬಣ್ಣವು, ಜನರನ್ನು ಮತಮೌಢ್ಯಕ್ಕೆ ನೂಕಿ ಯೌವ್ವನದಲ್ಲಿ ನಾನಾವಿಧ ಪಾಯಸಗಳ ರುಚಿ ನೋಡಿದವರು ಜಗದ್ಗುರುಗಳು. ಈ ಸಮಾಜದ ಕೆಟ್ಟ ವ್ಯವಸ್ಥೆಗೆ ಮೂಲ ಕಾರಣರು. ಇಡೀ ಕವನ ಬೆಳೆದಂತೆ ಜಗದ್ಗುರುಗಳ ಡೊಂಬತನ ಹೊರಗೆಳೆದು, ಜನರು ಇಂಥವರಿಂದ ದೂರವಿರಬೇಕೆಂದು ಸಾಮಾನ್ಯ ಜನರನ್ನು ಎಚ್ಚರಿಸುತ್ತಾರೆ. ಹೀಗೆ ಕವಿ ಅಧಿಕಾರಶಾಹಿಗಳ ವಿರುದ್ಧ ಜನತೆ ಸಿಡಿದೇಳಬೇಕೆಂದು ಆಶಯವನ್ನು ಮುಖ್ಯವಾಗಿರಿಸಿಕೊಂಡು ಮಾನವೀಯತೆಯ ಸಂರಕ್ಷಣೆಗೆ ಕರೆಕೊಡುತ್ತಾರೆ.

### ಭೈರವಯ್ಯ

೧೯೪೨ರ ಮಧ್ಯರಾತ್ರಿಯಲ್ಲಿ ಭೈರವಯ್ಯ ನರಸಾಪುರದಲ್ಲಿ ಜನಿಸಿದರು. ದಿಗಂಬರ ಕವಿಗಳಲ್ಲಿ ಒಬ್ಬರಾದ ಭೈರವಯ್ಯ ಇವರ ಮೂಲ ಹೆಸರು ಮನಮೋಹನಸಹಾಯ್. ವಿದ್ಯಾಭ್ಯಾಸವು ವಿಜಯವಾಡ, ಹೈದರಾಬಾದ್‌ಗಳಲ್ಲಿ ಜರುಗಿತು. ಎದೆಯಲ್ಲಿ ಅಗ್ನಿಪರ್ವತಗಳು ಸಿಡಿಯುತ್ತಿದ್ದರೂ, ನಗುತ್ತಿರಬೇಕೆಂಬ ಆಶೆ. ಜೀವನ ಒಂದು ಗಹನ ವಿಷಯವೆಂದು ನಗುತ್ತಾರೆ. ಎಲ್ಲ ದಿಗಂಬರ ಕವಿಗಳ ಕಾವ್ಯದಂತೆ ಇವರ ಕಾವ್ಯದಲ್ಲೂ ವ್ಯಂಗ್ಯ ವಿಡಂಬನೆ ಇದ್ದರೂ ಇವರಲ್ಲಿ ಸ್ವಲ್ಪ ಹೆಚ್ಚೇ ಕಾಣುತ್ತದೆ. ಕಾವ್ಯ ಸಂಪ್ರದಾಯ ಯಾವ ರೀತಿ ಕೆಟ್ಟುಹೋಗಿದೆ ಎಂಬುದನ್ನು ತನ್ನ ಕವನಗಳಲ್ಲಿ ತಿಳಿಸಿದ್ದಾರೆ. ಹಾಗೆ, ದೇವರು ಎಂದರೆ ಹೇಗಿರಬೇಕೆಂದು ತಿಳಿಸಿ ಇವರು ಹೇಳುವ ದೇವರು ಮಾನವನನ್ನು ಮಾನವನನ್ನಾಗಿ ಗುರುತಿಸುವ ದೇವರು ಎಂದು ತಿಳಿಸಿದ್ದಾರೆ. ಮಾನವನ ಅಂದರೆ ಆವರ ಏಳಿಗೆಗಾಗಿ ಮರುಗುವವರ ಹೃದಯದಲ್ಲಿ ದೇವರಿದ್ದಾನೆ ಎಂಬುದನ್ನು ತನ್ನ ಕವನಗಳ ಮುಖಾಂತರ ಮನವರಿಕೆ ಮಾಡಿಕೊಟ್ಟಿದ್ದಾರೆ.

ಭೈರವಯ್ಯ ಅವರ ಕವನಗಳಲ್ಲಿ ಮಾನವನ ಏಳಿಗೆಗಾಗಿ ರಚಿಸಿದ ಕವನಗಳು, ಇವರ ಕವನಗಳಲ್ಲಿ ಅಷ್ಟೇ ವ್ಯಂಗ್ಯವಾಗಿ ಮನಮುಟ್ಟುವಂತೆ ನಿರೂಪಿಸಿದ್ದಾರೆ. ದಿಗಂಬರ ಕಾವ್ಯದಿಂದ ಹೊರಬಂದ ಮೇಲೆ ಸ್ವಲ್ಪ ಕಾಲದ ನಂತರ ಸನ್ಯಾಸ ದೀಕ್ಷೆ ತೊಟ್ಟು ಹೊರ ಬಂದರೂ, ಈಗ ಅವರು ಎಲ್ಲಿದ್ದಾರೋ ಎಂಬುದು ತಿಳಿಯದು.

ಭೈರವಯ್ಯ ತಮ್ಮ ಕವನಗಳಲ್ಲಿ ರಾಜಕೀಯ, ವ್ಯಂಗ್ಯ, ಅಸಭ್ಯ ಪದಗಳನ್ನು ಕೆಳವರ್ಗದ ಕಳಕಳಿ, ಮಾನವೀಯ ಮೌಲ್ಯಗಳಿಗೆ ಹೆಚ್ಚು ಒತ್ತು ಕೊಟ್ಟಿರುತ್ತಾನೆ. 'ದಿಗಂಬರಿ' ಎಂಬ ಕವನದಲ್ಲಿ ಕಾವ್ಯದ ಗುರಿಯೇನು, ಅದು ಯಾವ ರೀತಿ ಇರಬೇಕೆಂದು ಈ ಕವನದಲ್ಲಿ ಸ್ಪಷ್ಟಪಡಿಸಿದ್ದಾರೆ.

''ಘಟಕ್ಕನೇ ಎಲ್ಲೋ ಒಂದು
ಒಣಗಿದ ಕಡ್ಡಿ ಮುರಿಯಿತು
ಒಂದು ಪಾಚಿಕಟ್ಟಿದ ಬಾಯಲ್ಲಿ ಅಮಾಯಕನ ನಗೆ ಮೂಡಿತು
ಯಾವುದೋ ಎದೆಯಲ್ಲಿ ಅಗ್ನಿ ಭುಗಿಲೆಂದಿತು
ಫಳ್ಳನೇ ಯಾವುದೋ ತುಟಿಯಂಚಿನಲಿ
ಕಿರುನಗೆ ಅರಳಿತು
ಯಾವುದೋ ಕಂಗಳಲ್ಲಿ ಕಾಂತಿರೇಖೆ ಮರೆಯಿತು
ಎಲ್ಲೋ ಹೊಸದೊಂದು ಹೂವು ಬಿರಿಯಿತು.
..............................
..............................
ಪ್ಯಾರಿಸ್ ನಗರದಲ್ಲಿ ನಗ್ನರೂಪವಿಲಾಸ ಮೆರೆವ ಕಾಮಾಕ್ಷಿಯಲ್ಲ
ಬ್ಯಾಲೆಡ್ಯಾನ್ಸರ್ ಅಲ್ಲ
ಅಮೇರಿಕೆಯ ರಾತ್ರಿ ರಂಗದ ವಸ್ತ್ರವಿಮೋಚಿತೆ ಅಂಗನೆಯಲ್ಲ'' [30]

ಇಂಥದು ಕಾವ್ಯವಲ್ಲವೆಂದು ಹೇಳುತ್ತಾ ಪಾಚಿ ಕಟ್ಟಿದ ಬಾಯಲ್ಲಿ ಅಮಾಯಕ ನಗೆ, ಫಳ್ಳನೇ ಯಾವುದೋ ತುಟಿಯಂಚಿನಲಿ ಕಿರುನಗೆ, ಯಾವುದೋ ಕಂಗಳಲ್ಲಿ ಕಾಂತಿರೇಖೆ, ಪ್ಯಾರಿಸ್ ನಗ್ನರೂಪ, ಬ್ಯಾಲೆ ಡ್ಯಾನ್ಸರ್, ಅಮೆರಿಕೆಯ ಗಾತ್ರ ರಂಗದ ವಸ್ತ್ರವಿಮೋಚಿತೆ ಅಂಗನೆಯು ಇಂಥ ಕಾವ್ಯ ವಿಷಯವು ನಿಜವಾದ ದಿಗಂಬರತ್ವವನ್ನು ಸೂಚಿಸುವುದಿಲ್ಲ. ದಿಗಂಬರ ಎಂದರೆ ಹೃದಯದ ಅಂತರಾಳದಿಂದ, ಮಾನಸಿಕ ದಿಗಂಬರತ್ವ ಇರಬೇಕೆಂಬುದು ಕವಿಯ ಆಶಯ. ಯಾವ ರೀತಿ ದಿಗಂಬರತ್ವ ಇರಬೇಕೆಂದು ಕವಿಯ ಬಯಕೆವೆಂದರೆ,

''ಬಟ್ಟೆ ಬಿಚ್ಚಿ, ನಡು ಬೀದಿಯಲ್ಲಿ ನಡೆದಾಡುವುದಲ್ಲ
ಪದಗಳಿಂದ ವಿಷಯಗಳ ಬಣ್ಣಿಸುವುದಲ್ಲ
ಹಾಗಾದರೇನು?
ಮನುಷ್ಯನ ತಳದಲ್ಲಿ ಕೆಸರು ಗುಂಡಿಯಲ್ಲಿ
ಹುದುಗಿರುವ ಮನುಷ್ಯತ್ವದ ಜಾಗರಣ!
ಅಸ್ತಿ ಪಂಜರದ ಆಳದಿಂದ ಧ್ವನಿಸುವ
ಶುಭ್ರವಾದ ಗೀತೆಗಳ ಅನುಕರಣೆ

............................

............................

............................

ಚಿನ್ನಾರಿ ಕಿರುನಗೆಯ ಆವಿಷ್ಕರಣ

ನಿಜವನ್ನು ನಿಜವಾಗಿಸುವ ದಿಗಂಬರೀಕರಣ'' [30]

ದಿಗಂಬರ ಎಂದರೆ ಬಟ್ಟೆ ಬಿಚ್ಚಿ ನಡೆಯುವುದಲ್ಲ. ಪದಗಳಿಂದ ದಿಗಂಬರತ್ವವಾಗುವುದಲ್ಲ. ನಿಜವಾಗಿ ಮನುಷ್ಯತ್ವವಿರಬೇಕು, ಮಾನವೀಯ ಮೌಲ್ಯಗಳು ತುಂಬಿಕೊಂಡಿರಬೇಕು, ಮಾನವನ ಏಳಿಗೆಗಾಗಿ ಸ್ಪಂದಿಸುವ ಹೃದಯವಿರಬೇಕು. ಹೃದಯದಿಂದ ಒಳಮನಸ್ಸಿನಿಂದ ನಿಜವನ್ನು ನಿಜವಾಗಿಸುವ ದಿಗಂಬರೀಕರಣ ಆಗಬೇಕೆಂದು ಕವಿಯು ಸ್ಪಷ್ಟಪಡಿಸುತ್ತಾನೆ.

ವಾಸ್ತವಿಕತೆಯ ಸತ್ಯಕಥೆಗಳು ಎಂದರೆ ಸಾಮಾನ್ಯ ಜನರ ನಿಜಸ್ಥಿತಿ, ಬಡವರ ಹಸಿವಿನ ತಲ್ಲಣ, ಎದೆಯುದ್ದ ಬೆಳೆದ ಮಗನು ಯಮನ ಪಾಲಾದಾಗ ಆ ತಾಯಿಯ ತಲ್ಲಣ. ಆ ವಿಧವೆ ತಾಯಿಯ ಗರ್ಭ ಶೋಕದಂತೆ ನಗ್ನವಾಗಿ ಹೇಳುವ ಮಾತುಗಳೆಂದು ಕವಿಯು ಹೇಳುತ್ತಾನೆ.

ಅಹಂಕಾರ, ಅಹಂಭಾವ, ಇರುವ ಪದಪದಗಳಲ್ಲಿ ಪರಮಾರ್ಥವನ್ನು ಕಾಣುವ ಇವರಿಗೆ, ನಿಜ ತತ್ವಗಳನ್ನೇ ಮರೆತು, ಹೊಸ ಶಕ್ತಿಯನ್ನು ಬಯಸಿದ ನಪುಂಸಕರು ತಾವೇ ಯುಗಪ್ರವರ್ತಕರೆಂದು ತಮ್ಮದು ಶ್ರೇಷ್ಠ ಸಾಹಿತ್ಯವೆಂದು ಹೇಳುವಂತರಿಗೆ 'ದಿಗಂಬರಿ'ಯ ಬಗ್ಗೆ ಅರ್ಥ ವಾಗುವುದಿಲ್ಲ .

''ಇವು ಅರ್ಥಮಾಡಿಕೊಳ್ಳಬೇಕೆಂದರೆ,

ಈ ಸಾಹಿತೀ ನಗ್ನ ಸ್ವರೂಪವನ್ನು ತಾಳಿಕೊಳ್ಳಬೇಕಾದರೆ

ನಿಮ್ಮ ಹೃದಯ ಕತ ಕತ ಕತ ಕುದಿಯಬೇಕು

ಕುದಿಯುವ ಗುಂಡಿಗೆಯಲ್ಲಿ ಹೊಸರಕ್ತ ಚಿಮ್ಮಬೇಕು

ಚಿಮ್ಮಿದ ನೆತ್ತರು ನಿಮ್ಮ ಧಮನಿ ಕಾಲುವೆಗಳಲ್ಲಿ

ಸುಳಿ ತಿರುಗಿ ಕುಣಿಯಬೇಕು

ನಿಮ್ಮ ಮಸ್ತಕದಲ್ಲಿ ನಿರ್ಮಿಸಿಕೊಂಡ

ಅಡ್ಡ ಗೋಡೆಗಳನ್ನು ಗುದ್ದಿ ಕೆಡವಬೇಕು'' [31]

ಹೀಗೆ ನಿಜವನ್ನು ಅರ್ಥಮಾಡಿಕೊಳ್ಳಬೇಕಾದರೆ ಅವರ ಹೃದಯ ಕತ ಕತ ಕುದಿಯಬೇಕು. ಕುದಿಯುವ ಗುಂಡಿಗೆಯಲ್ಲಿ ಹೊಸ ರಕ್ತ ಚಿಮ್ಮಬೇಕು. ಹೊಸರಕ್ತವು ಅವನ ನರಗಳಲ್ಲಿ ಸುಳಿ ಸುಳಿಯಾಗಿ ತಿರುಗಿ ಕುಣಿಯಬೇಕು. ಅವರ ಮಸ್ತಕದಲ್ಲಿ ನಿರ್ಮಿಸಿಕೊಂಡಿರುವ ಅಡ್ಡಗೋಡೆ,

ಅಡೆತಡೆಗಳನ್ನು ಮುಖಾಮುಖಿಯಾಗಿ ಎದುರು ನಿಂತುಕೊಂಡು ಗುದ್ದಿ ಕೆಡವಬೇಕು. ಕೆಟ್ಟ ಗ್ರಹಗಳಂತಿರುವ ಕ್ರಿಮಿ ಕೀಟಗಳು, ಅವರ ಭಾವನೆಗಳು ಸುಟ್ಟುಹೋಗಬೇಕೆಂದು ಹೇಳುತ್ತಾನೆ.

ಶಿಷ್ಟಾಚಾರಕ್ಕಾಗಿ, ಆಡಂಬರಕ್ಕಾಗಿ, ಮೇಲೆ ಬಣ್ಣಬಣ್ಣದ ಬಟ್ಟೆಗಳನ್ನು ಕಳೆದು ಏಕಾಂಗಿಯಾಗಿ, ದಿಗಂಬರವಾಗಿ ನಿನ್ನಲ್ಲಿ ಇರುವ ಗುಣಾವಗುಣಗಳನ್ನು ನೀನೆಯಾಗಿ ನೋಡಿಕೊಳ್ಳಬೇಕು, ಇನ್ನೊಬ್ಬರ ಆಸರೆ ಬೇಡವೆಂದು ಕವಿ ಹೇಳುತ್ತಾನೆ. ಮುಂದುವರಿಯುತ್ತಾ ಏನು ಮಾಡಬೇಕೆಂದು ತಿಳಿಸುತ್ತಾ ಮಿರ ಮಿರ ಸುಡುತ್ತಿರುವ ಬೆಂಕಿ ನಿಮ್ಮ ಸುಳ್ಳನ್ನೇ ನಿಮ್ಮದೆಂದು ಕೊಂಡದ್ದು, ನರಿ, ನಾಯಿ, ಹೆಗ್ಗಣ ದಂತಹ ಬದುಕು ಬದುಕೇ ಅಲ್ಲ. ನಿಮ್ಮ ಬದುಕಿನಲ್ಲಿ ಒಡೆದುಹೋದ ವಿವಿಧ ಹಂತಗಳ ಘಟನೆಗಳನ್ನು ನೋಡಿ, ನಿಮ್ಮ ಸುತ್ತಲೂ ಆವರಿಸಿರುವ ವಿಶ್ವರೂಪ. ಅದು ತಾಳಿರುವ ನಿಜ ರೂಪವನ್ನು ತಿಳಿದುಕೊಳ್ಳಬೇಕೆಂದು, ಕವಿ ಸ್ಪಷ್ಟಪಡಿಸುತ್ತಾನೆ.

'ಆರ್ತನಾದ' ಈ ಕವನದಲ್ಲಿ ಆತ್ಮ ವಿಮರ್ಶೆಯು ಮೂಡಿ ಬಂದಿದೆ. ಮನುಷ್ಯನನ್ನು ಕುರಿತು ಅವನ ಮನದಲ್ಲಿ ಹುದುಗಿನ ಸಂಕೋಲೆಗಳನ್ನು ಹೊರಚೆಲ್ಲಿ ಬರಬೇಕು. ಮಾನವತೆಯ ಗುಣಗಳನ್ನು ಹೇಳುತ್ತಾ ವಾಸ್ತವತೆಯಲ್ಲಿ ನಿಜಸ್ಥಿತಿಯನ್ನು ಅರಿತು ಜೀವನ ಎಂದರೆ ಏನೆಂಬುದು ಕಂಡುಕೊಳ್ಳಬೇಕೆಂದು ಕವಿಯು ಸ್ಪಷ್ಟಪಡಿಸುತ್ತಾರೆ.

''ಮಾನವಾ,
ಮಾನವತೆಯ ನಿಗಮಾಗಮ ತಪಸ್ವಿ
ಎದ್ದೇಳು
ನೀಲಿನಭದಲ್ಲಿ ತಾರೆಗಳು ಕೆಂಪಾಗುವ ಮುನ್ನ
ಸೃಷ್ಟಿಯಲ್ಲಿ ಅಸತ್ಯವೇ
ವಿಶ್ರಂಬಲ ವಿಶ್ವರೂಪ ತೋರುವ ಮುನ್ನ
ವಿಷದ ನಾಲಿಗೆಗಳು ಚಾಚದ ಮುನ್ನ
ಕಳೆದುಕೋ, ಬಡಿಸಿಕೋ'' [೫೩]

ಈ ರೀತಿ ಮಾನವನ ಆತ್ಮ ಪ್ರಜ್ಞೆಯನ್ನು ಕವಿ ಆರೋಪಿಸುತ್ತಾನೆ. ಮನುಷ್ಯನೊಳಗಿನ ಮಾನವತ್ವದಿಂದ ಹೊರಗೆ ಬರಬೇಕೆಂದು ಹೇಳಿ, ನೀಲಿ ಆಕಾಶದಲ್ಲಿ ತಾರೆಗಳು ಹೊಳೆಯುವ ಮೊದಲು, ಸೃಷ್ಟಿಯಲ್ಲಿ ಅಸತ್ಯವು ತಾಂಡವಾಡುವ ಮೊದಲು, ವಿಶ್ವರೂಪ ತಾಳುವ ಮುನ್ನ ಇವೆಲ್ಲಾ ಸಂಕೋಲನೆಗಳನ್ನು ಕಳಚಿಕೊಂಡು ಹೊರಬರಬೇಕೆಂದು ಕವಿಯ ಆಶಯ.

ಮುಂದುವರಿದು ಹೀರೋಷಿಮಾಕ್ಕೆ ಕುಣಿಕೆ ಹಾಕಿದ ಅಣು ಧೂಳಿನಂತೆ ನಿನ್ನಲ್ಲಿ ಮನೆಮಾಡಿದ ಕೃತ್ರಿಮತೆಯ ಮನಸ್ಸೆಂಬ ಮುಸುಕನ್ನು ಹೊರತೆಗೆದು, ತನ್ನ ಸುತ್ತಿಕೊಂಡಿರುವ

ಅವಗುಣಗಳನ್ನು ಬಿಡಬೇಕು ಎಂದು ಹೇಳಿ ಮಾಯೆಯೆಂಬ ಈ ಪ್ರಪಂಚದಲ್ಲಿ ಅಂದು ನೀನು ಮಾಡಿದ ಸಿಂಹನಾದ ಮತ್ತೊಮ್ಮೆ ಮಾಡಿ ಆಗ ನಿನ್ನ ನಿನಾದ ಏನೆಂಬುದು ಗೊತ್ತಾಗುವುದು ಎಂಬುದು ಕವಿಯ ಸ್ಪಷ್ಟ ನಿಲುವು. ಇಡೀ ಮಾನವನ ಗುಣಾವಗುಣಗಳನ್ನು ಈ ಕವನದಲ್ಲಿ ಒಡಮೂಡಿಸಿದ್ದಾರೆ.

''ಮಾನವನಾಗಿ
ಕೆಂಪು ಗುಲಾಬಿಯಂತೆ, ನಿಗಿ ನಿಗಿ ಕೆಂಡದಂತೆ
ಹರಿಯದಂತೆ, ಮಂದಹಾಸದಂತೆ
ಸತ್ಯದಂತೆ, ನಡುಹಗಲಿನ ಸೂರ್ಯನಂತೆ
ಕ್ಷಣವಾದರೂ ಬದುಕು
ಆ ಕ್ಷಣದಲ್ಲಿ
ಸ್ವರವೆತ್ತಿ ಹೃದಯ ಬಿಚ್ಚು!
ಅಸ್ತಿ ಪಂಜರದ ಪ್ರಳಯಾರ್ಣವಕ್ಕೆ ಪಂಜರ'' [xv]

ಭೈರವಯ್ಯ ಈ ಕವನದ ಸಾಲುಗಳಲ್ಲಿ ಮನುಷ್ಯನೊಳಗಿನ ಮಾನವನಾಗಿ ಕೆಂಪು ಗುಲಾಬಿಯಂತೆ, ಮಿರಿಮಿರಿ ಮಿಂಚುವ ಬೆಂಕಿಯಂತೆ ಯೌವ್ವನದಂತೆ, ಮಂದಹಾಸದಂತೆ, ಸತ್ಯದಂತೆ ನಡುಮಧ್ಯ ಸೂರ್ಯನಂತೆ ಭೈರವ ರೂಪ ತಾಳುವಂತೆ, ಸ್ವಲ್ಪ ಸಮಯವಾದರೂ ಬದುಕು ಮಾನವನಾಗಿ ಶ್ರೇಷ್ಠ ವ್ಯಕ್ತಿಯಾಗಿ ಬಾಳಬೇಕೆಂಬುದೇ ಕವಿಯ ಮುಖ್ಯ ವಿಚಾರಗಳು. ಮಾನವನ ಅಜ್ಞಾನ ಅಂಧಕಾರಗಳನ್ನು ವಿಮರ್ಶಿಸುತ್ತಾ ಮಾನವನು ಧೀರ ಸಾರ್ಥಕ ಬದುಕನ್ನು ಪಡೆಯಬೇಕೆಂದು ಹೇಳಿದ್ದಾರೆ.

'ಬರಗಾಲ ಭಿಕ್ಷೆ' ಎಂಬ ಕವನದಲ್ಲಿ ಸರ್ಕಾರದ ನೀತಿಯು ಪರಿಣಾಮಕಾರಿಯಾಗಿ ಮೂಡಿಬಂದಿದೆ. ವಾಸ್ತವಿಕತೆಯ ಸ್ಥಿತಿಯನ್ನು ಈ ಕವನದಲ್ಲಿ ಕಂಡುಕೊಳ್ಳಬಹುದು. ಉದ್ಯೋಗವಂತರು ಒಂದೊಂದು ವರ್ಷ ಹೆಚ್ಚೆಚ್ಚು ಮಾಶಾಸನ ಆಗುವುದನ್ನು ಕಂಡು, ಅವರು ಹಂಬಲಿಸುವ ರೀತಿ ನೀತಿ ಅವರ ಚಲನವಲನಗಳು, ಸರ್ಕಾರವು ಅದನ್ನು ಸದೆ ಬಡೆಯಬೇಕೆಂದು ನಿಯಮಗಳನ್ನು ಹೊರತರುವುದನ್ನು ಅತ್ಯಂತ ಪರಿಣಾಮಕಾರಿಯಾಗಿ ಈ ಕವನದಲ್ಲಿ ಚಿತ್ರಿಸಿದ್ದಾರೆ.

''ಅಣ್ಣಾ! ಅಂಜದಿರು!
ಬರಗಾಲದ ಮಾಸಾಶನ ಹೆಚ್ಚಾಗಲಿದೆ
ಹೆಬ್ಬಾವಿನ ಬಾಯಲ್ಲಿ ಇರುವೆ ಮರಿ ಹಾರುತ್ತದೆ'' [xvi]

ಎಂದು ವ್ಯಂಗ್ಯವಾಡುತ್ತಾರೆ. ಸರ್ಕಾರವು ಕೊಡುವ ಭತ್ಯೆಯಿಂದ ಮುಂದೆ ಏನೇನು ಮಾಡಬೇಕೆಂಬುದನ್ನು ಕವಿಯು ಈ ರೀತಿ ಸ್ಪಷ್ಟಪಡಿಸಿದ್ದಾರೆ.

'' ನಿನ್ನ ಬದುಕಿನಂತೆ ಚಿಂದಿಯಾಗಿರುವ ಅಂಗಿಗೆ
ಹೊಸತೇಪೆ ಹಾಕಬಹುದು
ಅರ್ಧಾಂಗಿಯ ಕಂಗಳಲ್ಲಿ ಅರೆಕ್ಷಣ ಕಾಂತಿ
ತುಂಬಬಹುದು
ಸಾಲಕೊಟ್ಟವನನ್ನು ಅಷ್ಟು ದೂರದಿಂದ
ಧೈರ್ಯವಾಗಿ ನೋಡಬಹುದು.
ಸಾಹುಕಾರನೆಂಬ ಕಪ್ಪು ದೊರೆಗೆ ಮುಡುಪು ಕಟ್ಟಬಹುದು.
ಆಫೀಸರ ಮಗನಿಗೆ ಬಿಸ್ಕಿಟ್ಟು ಒಯ್ಯಬಹುದು''[91]

ಈ ರೀತಿಯಾಗಿ ತುಟ್ಟಿ ಭತ್ಯೆಯಿಂದ ತನ್ನ ಬದುಕಿಗೆ ತೇಪೆ ಹಾಕುವಂತೆ ತನ್ನ ಹರಿದುಹೋದ ಅಂಗಿಗೆ ತೇಪೆ ಹಾಕಬಹುದು. ಇಲ್ಲಿ ಬಡತನವನ್ನು ಸಂಕೇತಿಸುತ್ತದೆ. ಈ ಭತ್ಯೆಯಿಂದ ಮನೆಯ ಹೆಂಡತಿಗೆ ಸಂತೋಷವಾಗಬಹುದು. ಆದರೆ ಕೆರೆಯ ನೀರು ಕೆರೆಗೆ ಚೆಲ್ಲಿದ ಹಾಗೆ ಸರ್ಕಾರವು ಪ್ರಕಟಿಸಿದ ಈ ಭತ್ಯೆಯು ಅದೇ ಸರಕಾರವು ಹೆಚ್ಚಿಸಿದ ಧಾರಣೆಗಳಿಗೆ ಸಮಾನ. ಇವೆಲ್ಲವೂ ಒಂದು ಕೈಯಿಂದ ಕೊಟ್ಟು ಮತ್ತೊಂದು ಕೈಯಿಂದ ತೆಗೆದುಕೊಳ್ಳುವುದು, ಇದು ಯಾವುದಕ್ಕೆ ಸಮಾನವೆಂದರೆ ಭಿಕ್ಷಕ್ಕೆ ಸಮಾನವಾಗಿ ಕಾಣುತ್ತದೆ. ಆದರೆ ಅದೇ ಅಧಿಕಾರಿಯುತ ವ್ಯಕ್ತಿಗಳು, ಯಾವ ರೀತಿ ನಡೆಸಿಕೊಳ್ಳುತ್ತಾರೆಂಬುದು ಕಾಣಬಹುದು. ಈ ಸರ್ಕಾರಗಳು ಋತುಚಕ್ರದಂತೆ ಬರುತ್ತವೆ, ಹೋಗುತ್ತವೆ ಮತ್ತೆ ಹೊಸ ಸರ್ಕಾರವು ಬಂದು ಹೋಗುತ್ತವೆ ಆದರೆ ದುಡಿವ ವರ್ಗ, ಶ್ರಮಿಕ ವರ್ಗದ ಜೀವನದ, ಬಯಕೆಗಳು, ಅವರ ಆಶಯಗಳು ಹಾಗೆಯೇ ಇವೆ. ಇನ್ನೂ ಮುಂದುವರಿಯುತ್ತಾ

''ಏನಾದರೇನು?
ಲೋಕವೆಲ್ಲಾ ಇದ್ದರೇನು? ಬಿದ್ದರೇನು?
ದೊಡ್ಡಣ್ಣಾ!
ನಿನ್ನ ಬರಗಾಲ ಮಾಶಾಸನ ನಿಶ್ಚಯವಾಗಿ ಹೆಚ್ಚಾಗುತ್ತದೆ.
ಧಾರಣೆಗಳು ಏರುತ್ತವೆ
ಹೆಬ್ಬಾವು ಮತ್ತೊಮ್ಮೆ ಆಕಳಿಸುತ್ತದೆ.''[92]

ಹೀಗೆ ಈ ಪ್ರಪಂಚ ಇದ್ದರೇನು, ಪ್ರಳಯವಾದರೇನು, ಯಾವುದೇ ಸರ್ಕಾರ ಬಂದರೇನು ಹೋದರೇನು, ಬಂದಂತಹ ಮಾಶಾಸನ ಹೆಚ್ಚಾದರೆ, ಅದರ ಹಿಂದೆ ಬೆಲೆಗಳು ಏರುವುದು ಅದರಿಂದ ಯಾವುದೇ ಪ್ರಯೋಜನ ಇಲ್ಲವೆಂದು ಕವಿ ಸ್ಪಷ್ಟಪಡಿಸುತ್ತಾರೆ.

'ನರಭಕ್ಷಕರು' ಈ ಕವನದಲ್ಲಿ ಮನುಷ್ಯರು ಬದುಕುವ ರೀತಿಯನ್ನು ವಿಮರ್ಶಿಸುತ್ತಾ, ಅವರು ಬದುಕುವ ರೀತಿ, ಮುಂದಿನ ಭವಿಷ್ಯತ್ತಿನ ಬಗ್ಗೆ ತಿಳಿಹೇಳುತ್ತಾ, ಸುಲಿಗೆ, ಮೋಸ, ವಂಚನೆ ನಿಮ್ಮ ಮೇಲೆ ಆದರೂ ಸಹ ಸುಮ್ಮನೆ ಇದ್ದೀರೆಂದು ಎಚ್ಚರಿಸುತ್ತಾ ಅದರಿಂದ ಹೊರಬರಬೇಕೆಂದು ಕವಿಗಳು ಹೇಳುತ್ತಾರೆ. ದರಿದ್ರ, ಅಜ್ಞಾನ ದಾಸ್ಯಗಳಲ್ಲಿ ಒದ್ದಾಡುತ್ತಿರುವ ಜನರನ್ನು ಕಂಡು ಕವಿಯು ಮರುಗುತ್ತಾನೆ.

''ಎಲವೋ!
ನೀವೆಲ್ಲಾ ಊರ ಹಂದಿಗಳಂತೆ ಜೀವಿಸುತ್ತಿದ್ದೀರಿ
ನಾಳಿನ ಚಿಂತೆಯಿಲ್ಲ
ಇಂದಿನ ವಿಮರ್ಶೆಯಿಲ್ಲ
ಮುಸುರೆ ತಿಕ್ಕುವ ಮೂರ್ಖರಂತೆ
ಗಂಡ ಸತ್ತವರಂತೆ
ಗಂಡನ ಕಳ್ಳ ಸೂಳೆಯರಂತೆ
ಜೀವಚ್ಛವಗಳಂತೆ
ಸಾಯುವ ಹೆಣಗಳು'' [೫೦]

ಕವಿಯು ಈ ರೀತಿಯಾಗಿ ಹೇಳುತ್ತಾ ಜನರ ಬದುಕನ್ನು ವಿಮರ್ಶಿಸುತ್ತಾ ನೀವೆಲ್ಲಾ ಊರ ಹಂದಿಗಳಂತೆ ಜೀವಿಸುತ್ತಿದ್ದೀರಿ. ಇದೊಂದು ಬದುಕಾ? ನಿಮಗೆ ನಾಳಿನ ಭವಿಷ್ಯತ್ತಿನ ಅರಿವಿಲ್ಲ, ಅಜ್ಞಾನ, ಅಂಧಕಾರದಿಂದ, ಗಂಡಸತ್ತ ರಂಡೆಯಂತೆ; ನೀವು ಜೀವಂತ ಹೆಣಗಳಾಗಿದ್ದೀರಿ ಇಂಥ ಬದುಕು ಯಾಕೆ? ಎಂದು ಕವಿಗಳು ಪ್ರಶ್ನಿಸುತ್ತಾರೆ.

ಮುಂದುವರಿದು ಏತಕ್ಕಾಗಿ ಬದುಕಿದ್ದೀರಿ, ಈ ಬದುಕು ಏತಕ್ಕೆ? ನಪುಂಸಕರಾಗಿ, ನಿನ್ನ ಮೇಲೆ, ನಿನ್ನ ದೇಶದ ಮೇಲೆ ಮೋಸ, ವಂಚನೆ ದರೋಡೆ ಮಾಡುತ್ತಿದ್ದಾರೆ ಎಂದು ಹೇಳುತ್ತಾರೆ. ಎಲ್ಲಾ ದಿಗಂಬರ ಕವಿಗಳಂತೆ ಸಾಮಾಜಿಕ ಚರಂಡಿ ಒಳಗಿನ, ಸಮಾಜವನ್ನು ನೇರವಾಗಿ ಹಳಿಯುತ್ತಾ ಅಶ್ಲೀಲ ಪದಗಳನ್ನು ಈ ಕವಿಯು ಸಹ ಬಳಸುತ್ತಾನೆ.

''ನಿನ್ನನ್ನೆಳೆದು
ನಿನ್ನ ದೇಶದ ಮೇಲೆ
ನಿನ್ನ ಜೀವನದ ಮೇಲೆ
ನಿನ್ನ ಹೆಂಡತಿಯ ಮೇಲೆ
ಭಯಂಕರ ಪೈಶಾಚಿಕ
ರತಿ ಕ್ರೀಡೆ ನಡೆಸುತ್ತಿರುವಾಗ
ಮೂರ್ಖರಂತೆ ಬಾಯಿತೆರೆದು ನೀತಿಬೋಧೆ ಮಾಡುತ್ತಾ
ಗಂಡಸುತನ ಸತ್ತ
ಜೋಗಮ್ಮಗಳಂತೆ'' [೫೧]

ಅಸಭ್ಯ ಪದಗಳಲ್ಲಿ ವ್ಯಂಗ್ಯವಾಗಿ ಈ ಜನರು ತಮ್ಮ ಮೇಲೆ ಆಗುವ ಅನ್ಯಾಯವನ್ನು ಸಹಿಸಿಕೊಳ್ಳುವ ರೀತಿಯನ್ನು ಚಿತ್ರಿಸುತ್ತಾ, ಅವರನ್ನು ಗಂಡಸುತನ ಸತ್ತ ಜೋಗಮ್ಮಗಳಿಗೆ ಹೋಲಿಸುತ್ತಾ ಅವರನ್ನು ಎಚ್ಚರಿಸುತ್ತಾರೆ.

''ಎಲವೋ!
ನೀವೆಲ್ಲಾ ಜೋಕರ್ ಮಾಮಗಳು!
ನಿಮಗೆ ನಿಮ್ಮದಾದ ಬದುಕೇ ಇಲ್ಲ
ಗತ ವೈಭವದಲ್ಲಿ ತಲೆ ತೂರಿಸಿ
ಬೆಳಗುವ ಸೂರ್ಯನನ್ನು ನೋಡಲು ನಿರಾಕರಿಸಿ
..........................
..........................
ಬಾಳೆ ಹಣ್ಣು ಸುಲಿದು ನೀಡಿದರೂ, ನಮಲಿ ನೀಡಿದರೂ
ಅರಗಿಸಿಕೊಳ್ಳಲಾರದ ಅಗ್ನಿ ಮಾಂದ್ಯದ ಹೆಣಗಳು
ನಿಮಗೆಲ್ಲಾ ಮಲಬದ್ಧತಾ ರೋಗ
ನಿಮ್ಮ ಬದುಕೇ ಮಲಬದ್ಧವಾಗಿದೆ.'' [೬೦]

ಮನುಷ್ಯನು ಬದುಕುವ ರೀತಿ ನೀತಿಗಳನ್ನು ಹೇಳುತ್ತಾ ಅವರು ಬದುಕುವ ರೀತಿ ಕಂಡು ಕವಿ ಕಳವಳಪಡುತ್ತಾ ನೀವು ಬದುಕನ್ನು ಏನು ಮಾಡಲಾಗದ ಹೇಳವರು, ನಿಮ್ಮ ಜೀವನ ಗಾಣದ ಎತ್ತಿನಂತೆ ಸುತ್ತಿಸುತ್ತಿ ಸುಸ್ತಾಗುವುದೇ ಜೀವನ; ಕಣ್ಣೆದುರಿನಲ್ಲಿ ದುಷ್ಟ ವ್ಯವಸ್ಥೆಯನ್ನು ನೋಡಿ ತಿಳಿದುಕೊಂಡರೂ ಸಹ ಅಂಥ ವಿಕಾರಗಳನ್ನು ಅವರಲ್ಲಿ ಅಳವಡಿಸಿಕೊಳ್ಳದೇ ಇದ್ದದನ್ನು ಕಂಡ ಕವಿಯು ಎಚ್ಚರಿಸುತ್ತಾರೆ. ನಿಮ್ಮ ಬದುಕು ಮಲಬದ್ಧವಾಗಿದೆ. ಆದರಿಂದ ಆ ಹೊಲಸಿನಿಂದ ಹೊರಬರಬೇಕೆಂದು ಸ್ಪಷ್ಟಪಡಿಸುತ್ತಾರೆ.

'ನಾನು ದೇವರನ್ನು ನಂಬುತ್ತೇನೆ' ಎಂಬ ಕವನದಲ್ಲಿ ಭೈರವಯ್ಯ ದೇವರೆಂದರೆ ಯಾರು, ನಿಜವಾದ ದೇವರು ಯಾರು, ಆ ದೇವರು ಹೇಗಿರಬೇಕೆಂಬುದನ್ನು ಸ್ಪಷ್ಟಪಡಿಸಿದ್ದಾರೆ. ದೇವರೆಂದರೆ ತಿರುಗಾಡುವ ದೇವರು; ಮಾನವರ ಮಹಾದೇವ; ಮಾನವನನ್ನು ಮಾನವನನ್ನಾಗಿ ನೋಡುವ; ಮಾನವನ ಏಳಿಗೆಗಾಗಿ, ಅವನ ಅಸ್ತಿತ್ವಕ್ಕಾಗಿ, ಶ್ರಮಿಸುವ ಮಾನವನು ದೇವರು. ಈ ದೇವರು ಸಾಮಾನ್ಯವಾಗಿ ಮಾನವನಿಗಾಗಿ ಮಾನವನ ಕಲ್ಯಾಣಕ್ಕೆ, ಮನುಷ್ಯನ ಮೌಲ್ಯಗಳಿಗಾಗಿ ಚಿಂತಿಸುವ, ಹೃದಯ ಕರಗುವ ಹೃದಯದಲ್ಲೇ ದೇವರಿದ್ದಾನೆಂದು ಕವಿಯು ಸೂಚಿಸಿದ್ದಾನೆ.

''ಹೌದು
ನಾನು ದೇವರನ್ನು ನಂಬುತ್ತೇನೆ

ದೇವರು ಅಂದರೆ
ಪಟಾಟೋಪಗಳಿಂದ ಮಬ್ಬೇರಿ
ಅರಿಷಡ್ವರ್ಗಗಳಿಗೆ ಆಳಾದ
ಅಹಂಕಾರ ಭೂಯಿಷ್ಠರಾದ
ನಿರ್ವಿಕಾರಿಗಳೆಂದು ಹೇಳಿಕೊಳ್ಳುವ
ಸ್ವಾಮಿಗಳಲ್ಲ,
ಪುಲಿಹೋರ ದಧ್ಯೋಧನಗಳಿಂದ
ಶರೀರವನ್ನು ಚೆದ್ವಿಲಾಸವಾಗಿ ಬೆಳೆಸುವ
ಜೀಯರುಗಳಲ್ಲ
ಷೋಡಶ ವರ್ಷ ಕನ್ಯೆಯರಿಂದ
ಏಕಾಂತ ಸೇವೆ ಕೈಗೊಳ್ಳುತ್ತಾ
ಧರ್ಮವನ್ನು ದೇಶವನ್ನು ಉದ್ಧರಿಸುತ್ತಿರುವ
ಬಾಬಾಗಳಲ್ಲ.'' [೬೧]

ಎಂದು ಎಂಥ ದೇವರನ್ನು ನಂಬಬೇಕೆಂಬುದನ್ನು ಹೇಳುತ್ತಾ ದುರಹಂಕಾರ. ಅಹಂಕಾರ ಅರಿಷಡ್ವರ್ಗಗಳನ್ನು ಬಿಡದ ಸ್ವಾಮಿಗಳನ್ನು ಏಕಾಂತವಾಗಿ ಕನ್ಯೆಯರಿಂದ ಸೇವೆ ಮಾಡಿಕೊಳ್ಳುವ ಬಾಬಗಳನ್ನು ಸ್ವಾಮಿಗಳನ್ನು ಖಂಡಿಸುತ್ತಾರೆ. ಮಾನವನ ಮಹಾದೇವನನ್ನು ದೇವರೆಂದು ಕವಿಯು ನಂಬುತ್ತಾನೆ.

ಇನ್ನೂ ಮುಂದುವರಿಯುತ್ತಾ ಲೋಕಸಭೆ ಸೀಟಿಗಾಗಿ ಕಳ್ಳಪೇಟೆಯ ಲಾಭಕ್ಕಾಗಿ, ದೇವರೆಂದರೆ ಬಡ್ತಿಗಳಿಗಾಗಿ ಮುಡಿಪುಗಳನ್ನು ಸ್ವೀಕರಿಸುವವನಲ್ಲ; ಚಟಕ್ಕಾಗಿ, ಗ್ಲಾಮರ್‌ಗಾಗಿ, ಪೂಜೆ ಸ್ವೀಕರಸುವವನಲ್ಲ, ನನ್ನ ದೇವರೆಂದು ಹೇಳುವ ಕವಿಯು ಮಾನವನನ್ನು ಮಾನವನನ್ನಾಗಿ ಗುರುತಿಸುವವರೇ ದೇವರೆಂದು ತಿಳಿಸುತ್ತಾನೆ. ಮುಂದುವರಿದು ದೇವರು ಎಂಥವರ ಹತ್ತಿರ ಇದ್ದಾನೆಂದು ಹೇಳುತ್ತಾನೆಂದರೆ;

''ಯಾರಿಗೂ ಬೇಕಾಗದ ನಾಯಿಮರಿಯ ಮೇಲೆ
ಕಾರು ಹೋದಾಗ
ತುತ್ತು ಕೂಳಿಗಾಗಿ ಮಾನವನ್ನೇ
ಸುಟ್ಟುಕೊಂಡವರನ್ನು
ಕಂಡು ಮರುಗುವ ಹೃದಯದಲ್ಲಿ
ನನ್ನ ದೇವರಿದ್ದಾನೆ
ನನ್ನ ದೇವರು

ರಕ್ತಮಾಂಸ ತುಂಬಿದ ಮಾನವನು
ಮಾನವತ್ವವನ್ನಲ್ಲದೇ ಬೇರೆನನ್ನೂ
ಅಂಗೀಕರಿಸನು.'' [೨]

ಹೀಗೆ ಭೈರವಯ್ಯ ಕವನಗಳಲ್ಲಿ ಮನುಷ್ಯರ ಬದುಕು ಬಗ್ಗೆ ತುಂಬ ಕಳವಳ ಕಾಳಜಿ ವಹಿಸುತ್ತಾನೆ. ಎಲ್ಲರ ಕವನಗಳಂತೆ ಇವರ ಕವನಗಳಲ್ಲಿ ಸಾಮಾಜಿಕ ಸ್ಥಿತಿಗತಿ ವಾಸ್ತವಿಕತೆಯು ಕಂಡು ಬರುತ್ತದೆ. ಕಾವ್ಯ ಹೇಗೆ ಇರಬೇಕೆಂದು ಚೆನ್ನಾಗಿ ಸ್ಪಷ್ಟಪಡಿಸಿದ್ದಾರೆ. ವಿಡಂಬನಾತ್ಮಕವಾಗಿ ಇವರ ಕವನಗಳು ಎಲ್ಲರ ಮನಮುಟ್ಟುವಂತೆ ರಚಿಸಿದ್ದಾರೆ.

**ಮಹಾಸ್ವಪ್ನ**

ಮಹಾಸ್ವಪ್ನ ಇವರ ಮೂಲ ಹೆಸರು **ಕಮ್ಮಿಶೆಟ್ಟಿ ವೆಂಕಟೇಶ್ವರರಾವ್.** ಇವರು ನೆಲ್ಲೂರು ಜಿಲ್ಲೆಯ ಲಿಂಗಸಮುದ್ರದಲ್ಲಿ ಜನಿಸಿದರು. ಹೈದರಾಬಾದಿನಲ್ಲಿ ಓದಿದರು. ಇವರು ಈ ಪ್ರಪಂಚಕ್ಕೆ ತಗುಲಿದ ಅಂಧಕಾರ, ಮುಸುಕುಗಳನ್ನು ತೊಲಗಿಸಲೆಂದೇ ನಾನು ಹುಟ್ಟಿದ್ದೆಂದು ಹೇಳಿಕೊಂಡಿದ್ದಾರೆ. ಮಹಾಸ್ವಪ್ನ ಇವರು ಸದಾ ಮಾನವನ ಕಲ್ಯಾಣಕ್ಕಾಗಿ ಅವರ ಶ್ರೇಯಸ್ಸಿಗಾಗಿ, ನಿರ್ಮಲ ಸಮಾಜವನ್ನು ಕಟ್ಟಬೇಕೆಂಬ ಆಶಯದಿಂದ ವಾಸ್ತವ ಸಮಾಜದ ಒಳಿತಿಗಾಗಿ ಅನ್ವೇಷಿಸುತ್ತಿರುತ್ತಾರೆ. ಇವರ ಕಾವ್ಯದಲ್ಲಿ ಸ್ವಾತಂತ್ರ್ಯ ನಂತರದ ಭಾರತ ದುಸ್ಥಿತಿಯನ್ನು ಸತ್ಯವಾಗಿ ಹೇಳುವ ಮನೋಧರ್ಮವಿದೆ. ಇವರು ದಿಗಂಬರ ಕಾವ್ಯದ ಶಕೆ ನಂದಿ ಹೋದ ಮೇಲೆ ತಮ್ಮದೇ ನೆಲೆಯನ್ನು ಕಂಡುಕೊಂಡರು.

'ಗ್ಲಾನಿರ್ಭವತಿ ಭಾರತ' ಎಂಬ ಕವನದಲ್ಲಿ ಈ ಸಮಾಜದ ಒಳಿತಿಗಾಗಿ ರಾತ್ರಿಯೆಂಬ ಕತ್ತಲೆಯು ದೂರವಾಗಿ ಹೊಳೆಯುವ ಸೂರ್ಯನಾಗಿ ಬರುತ್ತಿದ್ದೇನೆ. ಸಮಾಜ ಒಳತಿಗಾಗಿ ಮಾನಸಿಕ ದಿಗಂಬರನಾಗಿ ಬರುತ್ತೇನೆಂದು ಕವಿ ಹೇಳುತ್ತಾರೆ. 'ಯದಾಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ; ಅಭ್ಯುತ್ಥಾನಮಧರ್ಮಸ್ಯ ತದಾ ತ್ಮಾನಮ್ ಸೃಜಾಮ್ಯಹಮ್' ಮತ್ತೆ ಮತ್ತೆ ನಾನು ಹುಟ್ಟಿ ಬರುತ್ತೇನೆ. ಅನ್ಯಾಯ, ಅಧರ್ಮವು ಹೆಚ್ಚಾದಾಗ ಮತ್ತೆ ಹುಟ್ಟಿ ಬರುತ್ತೇನೆಂಬ ಗೀತೆಯ ಸಾರದಂತೆ ಕಲಿಯುಗದ ರೇಡಿಯೋ ತರಂಗಗಳಂತೆಬರುತ್ತೇನೆಂದು ಕವಿ ಹೇಳುತ್ತಾರೆ.

''ಕಲಿಯುಗ ರೇಡಿಯೇಗ್ರಾಮಿನಲ್ಲಿ
ಗಿರಿಗಿರ ತಿರುಗುವ ಇಪ್ಪತ್ತನೇ ಶತಮಾನದ ರೆಕಾರ್ಡಿನ ಮೇಲೆ ಪಿನ್ನಾಗಿ
ಮಾನವತೆಯ ಎರಡೂ ಕಣ್ಣು ಮುಚ್ಚಿ ಹೋದಾಗ
ಅರಳುವ ಫಾಲನೇತ್ರವಾಗಿ
ಕಾಲವೆಂಬ ಪಿಟೀಲಿನ ಮೇಲೆ ಕಮಾನಾಗಿ
ಚರಿತ್ರಾ ನಿದ್ರಾ ಸಮುದ್ರದ ಮೇಲೆ

ಚಂಡಮಾರುತವಾಗಿ
ನಾನು ಬರುತ್ತಿದ್ದೇನೆ ದಿಗಂಬರ ಕವಿಯಾಗಿ
ರಾತ್ರಿ ಉದಯಿಸುತ್ತಿರುವ ರವಿಯಾಗಿ!''[೬]

ಹೀಗೆ ಕಲಿಯುಗದ ರೇಡಿಯೇ ತರಂಗಗಳ ಮೇಲೆ ಇಪ್ಪತ್ತನೆಯ ಶತಮಾನದ ನೂತನ ಆಲೆ ಅಲೆಯಾಗಿ ಮಾನವತೆಯ, ಅರಳುವ ನೇತ್ರವಾಗಿ ಚರಿತ್ರೆಯೆಂಬ ನಿದ್ರಾ ವ್ಯವಸ್ಥೆಯ ಮೇಲೆ ಚಂಡಮಾರುತನಾಗಿ ಬರುತ್ತೇನೆ. ದಿಗಂಬರ ಕವಿಯಾಗಿ ಕತ್ತಲು ಓಡಿಸುವ, ಅಂಧಕಾರವನ್ನು ಓಡಿಸುವ ಸೂರ್ಯನಾಗಿ ಬರುತ್ತೇನೆಂದು ಹೇಳುತ್ತಾ, ಬಣ್ಣಗಳು ಅಳಿಸಿಹೋಗಿ, ಮಾತುಗಳು ಮರೆತುಹೋಗಿ ದಿಕ್ಕು ದಿಕ್ಕು ಮಾರ್ದನಿಗೊಡುವ, ಘೀಳಿಡುತ್ತಿರುವ ಸ್ವಗತದಲ್ಲಿ, ದಿಗಂಬರ ಕವಿಯಾಗಿ, ಕತ್ತಲನ್ನು ಓಡಿಸಲು ಸಮಾಜದ ಅಂಧಕಾರವನ್ನು, ಸಂಕೋಲೆಗಳನ್ನು ಅಳಿಸಲು ರಾತ್ರಿ ಸೂರ್ಯನಾಗಿ ಬರುತ್ತೇನೆಂದು ಸಾರುತ್ತಾರೆ.

''ನೀರಾಡಿಸಿದ ನಾಲಿಗೆಗಳಲ್ಲಿ
ಹಸಿವಿನ ಭೂಕಂಪದ ಆಕಳಿಕೆಗಳಲ್ಲಿ
ಕಾಮಾಗ್ನಿ ಪರ್ವತಗಳು ಬಂದು ಹರಿಯುವ ಲಾವಾರಸದಿಂದ
ಉಬ್ಬಿದ ಸಮುದ್ರ ತರಂಗಗಳು ಬಾನೆತ್ತರಕ್ಕೆ ಏರಿ
ಸಖಿಯ ಬಂಧನಗಳನ್ನು ಹರಿದೊಗೆವ ಸಮಯದಲ್ಲಿ
ಅರ್ಧ ಜ್ಞಾನಿಗಳ ಅಹಂಭಾವ ಸಿದ್ಧಾಂತಗಳ
ಅಜ್ಞಾನ ಪ್ರವಾಹದಲ್ಲಿ, ಪ್ರಮಾದಗಳ ಜಲಾವರ್ತದಲ್ಲಿ
ಜನರು ಉಸಿರುಗಳ ಕಕ್ಕಾಬಿಕ್ಕಿಯಾಗಿರುವಾಗ
ಕೀರ್ತಿ ಕಾಮುಕರ, ನಿಯಂತರ, ಅಹಂಕಾರ ದೌರ್ಜನ್ಯ ಬಾಹುಗಳ
ದುರಾಕ್ರಮಣದಲ್ಲಿ
....................
....................
ಕೆಟ್ಟು ಗಬ್ಬು ನಾತವಾದಾಗ
ನಾನು ಬರುತ್ತಿದ್ದೇನೆ- ದಿಗಂಬರ ಕವಿಯಾಗಿ.''[೭]

ಹೀಗೆ ಅರ್ಧಜ್ಞಾನಿಗಳ ಅಹಂಭಾವೆಂಬ ಸಿದ್ಧಾಂತಗಳ ಸಮಯದಲ್ಲಿ ಅಜ್ಞಾನ, ಪ್ರವಾಹದಲ್ಲಿ ಪ್ರಮಾದವಾಗುವ ಸಂದರ್ಭದಲ್ಲಿ ಇಂಥ ಪರಿಸ್ಥಿತಿಯಲ್ಲಿ ಜನರು ಉಸಿರುಕಟ್ಟಿ ಕಕ್ಕಾಬಿಕ್ಕಿಯಾದಾಗ, ದೊಡ್ಡವರೆಂದು ಕೀರ್ತಿ ಪಡೆದ ಕಾಮುಕರ, ಅವರ ನಿರಂತರ ದೌರ್ಜನ್ಯಗಳ ದುರಾಕ್ರಮಣದಲ್ಲಿ, ಹಾಗೂ ದೇಶ ದೇಶಗಳಲ್ಲಿ ನಡೆಯುವ ಯಾತನೆಯ ಸಂದರ್ಭದಲಿ ಇವೆಲ್ಲವನ್ನೂ ಅಳಿಸಿ ಹಾಕಲು ಕತ್ತಲೆಯ ಮುಸುಕನ್ನ ತೆಗೆಯಲು ದಿಗಂಬರ ಕವಿಯಾಗಿ ಬರುತ್ತೇನೆಂದು ಹೇಳುತ್ತಾರೆ.

ಹಾಗೂ ವಿಜ್ಞಾನದ ಪಸರಿಸುವ ಕಪ್ಪು ಹೊಗೆಯನ್ನು ಅಳಿಸಲು,ನಾಗರಿಕತೆಯನ್ನು ಮತ್ತೇರಿಸುವ ಸಮಯದಲ್ಲಿ ಮನುಕುಲವು ಅಂಧಕಾರವನ್ನು ಪಡೆದಾಗ, ಉಗ್ರ ನರಕೇಸರಿಯಾಗಿ, ಮಾನವತೆಯ ಮೌಲ್ಯಗಳನ್ನು ಎತ್ತಿ ಹಿಡಿಯಲು ಸತ್ತಿರುವ ಮಾನವತೆಯ ದೇವರನ್ನು ಮತ್ತೆ ಬದುಕಿಸಲು, ಮಾನವತೆಯ ಶ್ರೇಯಸ್ಸಿಗಾಗಿ ದಿಗಂಬರ ಕವಿಯಾಗಿ ರಾತ್ರಿ ಉದಯಿಸುವ ಕವಿಯಾಗಿ ಬರುತ್ತೇನೆ, ಕಳಕಳಿಯಿಂದ ಈ ಸಮಾಜದ ವ್ಯವಸ್ಥೆಯನ್ನು ಮನಮುಟ್ಟುವಂತೆ ಕವನವಾಗಿಸಿದ್ದಾರೆ.

'ನಟಸಾಮ್ರಾಟ್' ಕವನದಲ್ಲಿ ವಿಡಂಬಣೆಯು ಮೂಡಿಬಂದಿದೆ. ಹಾಗೂ ಅಧಿಕಾರ ವರ್ಗದ ವಿವಿಧ ಬಣ್ಣಗಳು ಹೇಗೆ ಕಂಡು ಬರುತ್ತವೆಂಬುದನ್ನು ಕಾಣಬಹುದು. ನೇರವಾಗಿ ಜನರ ನೋವು-ನಲಿವುಗಳನ್ನು ಹೇಳುವ ಮನೋಭಾವನೆ ಇವರದು. ಇಲ್ಲಿ ವಿಮರ್ಶಾತ್ಮಕವಾಗಿ ನೋಡಿದ್ದಾರೆ.

''ಬಾಯಿ ಮುಚ್ಚಿಕೋ
ತಲೆ ಬೋಳಿಸಿಕೋ
ಸಾಧ್ಯವಾದರೆ ನಾಲಿಗೆ ಕತ್ತರಿಸಿಕೋ
ಒಂದು ಸಾರಿ ಕನ್ನಡಿಯಲ್ಲಿ ನಿನ್ನ ನೀನು ನೋಡಿಕೋ
ನಿನ್ನ ವಿವಿಧ ಪಾತ್ರಾಭಿನಯ ಸಾಕು
ಇನ್ನು ಗಿಳಿ ಪಾಠ ಸಾಕು
ತೊಟ್ಟುಕೊಂಡ ಬಟ್ಟೆ ಬಿಚ್ಚಿ ಹಾಕು
ಮಾಡಿದ ಸಾಲಗಳನ್ನೆಲ್ಲಾ ಒಪ್ಪಿಕೋ''[11]

ಇಲ್ಲಿ ಕವಿಯು ತನ್ನನ್ನು ತಾನು ವಿಮರ್ಶಿಸಿಕೊಳ್ಳುತ್ತಾ ಇನ್ನು ಅರ್ಥವಿಲ್ಲದ ಮಾತುಗಳಿಗೆ ಕೊನೆಗೊಳಿಸಬೇಕು ಇಷ್ಟು ದಿವಸ ವಿವಿಧ ಮಜಲುಗಳಲ್ಲಿ ಅಭಿನಯ ಮಾಡುವುದನ್ನು ನಿಲ್ಲಿಸಿ, ಗಿಳಿ ಪಾಠ ಮಾಡುವುದನ್ನು ನಿಲ್ಲಿಸಿ, ಹಾಕಿಕೊಂಡ ಮುಸುಕನ್ನು ಕಳಚಿ ಸಾಮಾಜಿಕ ಪರಿವರ್ತನೆಗಾಗಿ ಯೋಚಿಸು, ಹಿಂದಿನದನ್ನು ಬಿಟ್ಟು ಬರುವ ದಿನಗಳ ಬಗ್ಗೆ ವಿಚಾರ ಮಾಡಬೇಕೆಂಬುದು ಕವಿಯ ಯೋಚನೆ.

'ನಟಸಾಮ್ರಾಟ್' ಯಾರೆಂಬುದು ಚೆನ್ನಾಗಿ ಗೊತ್ತಿದೆ. ನಿನ್ನ ಜಾತಕ ನಿನ್ನ ಮನೆ, ನಿನ್ನ ಒಳಗಿನ ವಿವಿಧ ಮಜಲುಗಳು ಚೆನ್ನಾಗಿ ಗೊತ್ತು ಪ್ರತಿಷ್ಠೆ ಮರ್ಯಾದೆಗಳನ್ನು ದೂರ ತಳ್ಳಿ ಈ ಸಮಾಜಕ್ಕೆ ಅಂಟಿಕೊಂಡ ದರ್ವಾಸನೆಯನ್ನು ದೂರ ಮಾಡು ಎಂದು ಹೇಳುತ್ತಾನೆ. ನಾಲ್ಕು ದಿಕ್ಕಿನ ಬದುಕಿಗಾಗಿ ಹುಟ್ಟಿಕೊಂಡ ಈ ಜೀವನಕ್ಕೆ ತ್ಯಾಗಮಯವಾದ ರೌದ್ರ ತಾಂಡವದ ಸೂರ್ಯನ ಬೆಳಕು ಮೂಡಿಬರಬೇಕು ಎಂದು ಹೇಳುತ್ತಾರೆ. ಸತ್ಯದ ಧ್ವಜದಂತೆ ಸ್ತಂಭದಂತೆ ನಿರ್ಭಯವಾಗಿ, ಅಂಜಿಕೆಯನ್ನು ಹೊರದಬ್ಬಿ ಧೈರ್ಯವಾಗಿ ದಿಗಂಬರವಾಗಿ ಸಾಮಾಜಿಕ ಪರಿವರ್ತನೆಗಾಗಿ

ನಿನ್ನಲ್ಲಿರುವ ಒಳಗಿನ ಮೈಲಿಗೆಯನ್ನು ಬಿಟ್ಟು ನಿರ್ಮಲವಾಗಿ ಹೊರಬರಬೇಕೆಂದು ಕವಿ ಆಶಿಸುತ್ತಾರೆ. ಇವರು ಸದಾಕಾಲ ಸಮಾಜ ಒಳಿತಿಗಾಗಿ ಮಾನವೀಯತೆಯ ಒಳಿತಿಗಾಗಿ. ಸ್ವಾತಂತ್ರ್ಯದ ನಂತರ ದೇಶದಲ್ಲಿ ಪ್ರಜಾಪ್ರಭುತ್ವದ ಹೆಸರಿನಲ್ಲಿ ಮನುಕುಲವು ಎತ್ತ ಸಾಗಿದೆ ಎನ್ನುವುದಕ್ಕೆ ದೇಶದಲ್ಲಿ ನಡೆಯುವ ಘಟನೆಗಳೇ ಸಾಕ್ಷಿ. ಪ್ರಜಾಪ್ರಭುತ್ವದ ಪ್ರತಿಯೊಂದು ಸೂತ್ರವು ಆದರ್ಶ ತತ್ವಗಳಾಗಿ ಕಂಡುಬರುತ್ತಿದ್ದರೂ ಜನರಲ್ಲಿ ಅವರ ಭಾವನೆಗಳಲ್ಲಿ ಇರುವ ವಾಸ್ತವತೆಯೇ ಬೇರೆಯಾಗಿ ಕಾಣುತ್ತದೆ. 'ನಾವು ಯಾರು?' ಎಂಬ ಕವನದಲ್ಲಿ ಸ್ವಾತಂತ್ರ್ಯದ ನಂತರ ಜನರಲ್ಲಿ ಕಂಡುಬರುವ ಮನಸ್ಥಿತಿ ಎಂಥದ್ದು. ಮೋಸ, ವಂಚನೆ, ದರೋಡೆ, ಕಳ್ಳತನ, ಸುಲಿಗೆ ಕೊಲೆ ತಮ್ಮನ್ನು ತಾವೇ ಕೊಲೆ ಮಾಡುವುದು, ಶಾಂತಿಯ ನಾಡಿನಲ್ಲಿ ಅಶಾಂತಿ ಶಾಂತಿ ಎನ್ನುವ ಆತ್ಮವನ್ನು, ಅಶಾಂತಿಯಲ್ಲಿ ಕೊನೆಗೊಳಿಸಿದ್ದು, ಈ ದೇಶದ ಜನರ ಹೆಸರಿಗೆ, ದೇಶಕ್ಕೆ ಒಂದು ಕಪ್ಪು ಚುಕ್ಕೆ. ಈ ಮಾನವ ಜಾತಿ ತನ್ನತನವನ್ನು ಮಾನವೀಯ ಮೌಲ್ಯಗಳನ್ನು ಕಳೆದುಕೊಂಡಿದ್ದಾನೆ. ಗಾಂಧೀಜಿ ಕಂಡ ಕನಸು ನನಸಾಗಲಿಲ್ಲ. ಕೋಟಿ ಕೋಟಿ ಗೋಡ್ಸೆಯ ಘಾತಕ ಹಸ್ತಗಳ ನಡುವೆ ಈ ದೇಶದ ಗತಿ ಏನು ಎಂದು ಈ ದೇಶ ಈ ಜನರನ್ನು ಖಂಡಿಸುತ್ತಾರೆ. ಅಹಿಂಸಾವಾದಿ ಗಾಂಧೀಜಿಯನ್ನು ಕೊಂದ ಪರಿಣಾಮವಾಗಿ ಭೈರವಯ್ಯ ಜನರನ್ನು ದೇಶವನ್ನು ಬೈಯುತ್ತಾರೆ, ಅಂಥ ಜನರನ್ನು ಖಂಡಿಸುತ್ತಾರೆ.

''ಇತಿಹಾಸದ ಅಂಧಕಾರದಲ್ಲಿ
ನಿಶ್ಯಬ್ದವಾಗಿ ಆಸ್ಫೋಟಿಸಿದ
ಸುಳ್ಳಿನ ಬಾಂಬುಗಳು
ಮೋಸ, ದಗಾ, ದರೋಡೆ
ವಂಚನೆ!
ದುರಾಕ್ರಮಣದಲ್ಲಿ ಸ್ವರೂಪವನ್ನೇ ಕಳೆದುಕೊಂಡ
ಮಾನವಜಾತಿ.
ಕೇಳಿಸುತ್ತಿರುವ ನಾಗರಿಕತಾ ಸಫಲಿಸಂಗೀತ!
ಅಯ್ಯೋ! ನಮ್ಮ ಬಟ್ಟೆ ನೋಡಿ ಮೋಸ ಹೋದೆಯಾ?
ಅಯ್ಯೋ! ನಂಬಿ ಕೆಟ್ಟೆಯಾ?
ನಾವು ಮನುಷ್ಯರಲ್ಲ! ನಾವು ಯಾರು?
ಕೋಟಿ ಕೋಟಿ ಗೋಡ್ಸೆಗಳ ಘಾತಕ ಹಸ್ತಗಳ ನಡುವೆ
ನಾಲ್ದೆಸೆಯಲ್ಲಿ ಭೋರೆನುವ ಆಕ್ರಮಿಸುವ ಕತ್ತಲು ವಾರಿಧಿಯ ನಡುವೆ
ನಿಚ್ಚಳವಾಗಿ ಬೆಳಗುವ ನಿನ್ನ ಮುಗುಳ್ನಗೆ...
ಬಾಪೂಜಿ, ನೀನು ಮೋಸ ಹೋದೆಯಾ?
ನೀನು ಮೋಸ ಹೋದೆಯಾ?''[೬]

ದೇಶದ ಜನರ ಮನೋಭಾವನೆಗಳು ಎಂಥವು ಅವರ ನಿಲುವುಗಳೇನು ಎಂಬುದು ಈ ಕವನದಲ್ಲಿ ಮೂಡಿಬಂದಿವೆ. ಗಾಂಧೀಜಿ ಬಗ್ಗೆ ಈ ದೇಶದ ಪ್ರಜೆಗಳು ತೋರಿಸಬೇಕಾದ ನಿಷ್ಠೆಯು ಮುಕ್ತಾಯವಾಗಿದೆಯೆಂದು ಇಲ್ಲಿ ಕವಿಯು ಸ್ಪಷ್ಟಪಡಿಸಿದ್ದಾರೆ.

'ಇದ್ದಕ್ಕಿದ್ದಂತೆ ನಡುಹಗಲಲ್ಲಿ ನಗ್ನ' ಈ ಕವನದಲ್ಲಿ ದಿಗಂಬರ ಕಾವ್ಯದ ಗುರಿ, ಅದರ ನಿಲುವುಗಳು, ಸಮಾಜದ ಮೇಲೆ, ನಾಗರಿಕರ ಮೇಲೆ, ಎಂತಹ ಪರಿಣಾಮ ಉಂಟಾಯಿತು. ನವ ನಾಗರಿಕತೆಯ ನಾಭಿಯ ಮೇಲೆ ದಿಗಂಬರವಾಗಿ ನಿಂತಿರುವ ದಿಗಂಬರ ಕಾವ್ಯ. ಈ ಕಾವ್ಯವನ್ನು ನೋಡಿ ಹತ್ತು ದಿಕ್ಕುಗಳು ನಡುಗಿ ಹೋದವು. ಈ ಕಾವ್ಯದಲ್ಲಿ ಆಕ್ರೋಶ, ಆವೇಶ, ಸಮಾಜದ ಕಳಕಳಿ, ಅಶ್ಲೀಲ ಪದಗಳು ಮುಂತಾದವುಗಳನ್ನು ಕಂಡು ನಾಚಿಕೆಗಳು ಪರದೆಯ ಹಿಂದೆ ಅಡಗಿದವು. ಸಭ್ಯಸಂಸ್ಕೃತಿಗಳು ಬಗ್ಗಿಹೋದವು. ಸಮಾಜದಲ್ಲಿ ನಡೆಯುವ ಹಗೆತನ, ದ್ವೇಷ, ಅಸೂಯೆ, ಕಪಟ, ಮೋಸ, ವಂಚನೆ ಓರೆನೋಟ ನೋಡಿ ಒಂದೇ ಉಸಿರಿಗೆ, ದಿಗಂಬರ ಕಾವ್ಯವನ್ನು ನೋಡಿ ಓಡಿದವು. ಇಡೀ ಸಮಾಜ ವ್ಯವಸ್ಥೆಯ ಮೇಲೆ ದಿಗಂಬರ ಕಾವ್ಯ ಎಂತಹ ಪರಿಣಾಮ ಬೀರಿತು ಎನ್ನುವುದು ಈ ಕವನದಲ್ಲಿ ಕಾಣಬಹುದು.

''ನಗರದ ನಡುಬೀದಿಯಲ್ಲಿ
ನವ ನಾಗರಿಕತೆಯ ನಾಭಿಯ ಮೇಲೆ
ದಿಗಂಬರನಾಗಿ ನಿಂತಿರುವ
ಇವನೇ, ಇವನೇ, ಇವನೇ
ಕೊರಳೆತ್ತಿ ಕರೆಯುತ್ತಿದ್ದೇನೆ.
ದಶದಿಕ್ಕುಗಳು ಬೆದರಿಹೋಗುತ್ತದೆ.
..........................
..........................
ನನ್ನ ಕಂಡು ನಾಗರಿಕತೆ ಸ್ತಂಭಿಸಿತು
ಹೊರಡುತ್ತೇನೆ ಹೊರಡುತ್ತೇನೆ
..........................
..........................
ನಗರದ ನಡುಬೀದಿಯಲ್ಲಿ
ದಿಗಂಬರನಾಗಿ ಹೊರಟಿದ್ದೇನೆ
ನಾಚಿಕೆಗಳು ಪರದೆಯ ಹಿಂದೆ ಅಡಗಿದವು
ಹಗೆತನ ದ್ವೇಷಗಳು ಹುತ್ತ ಸೇರಿದವು
ಕಪಟ ವಂಚನೆಗಳು ಓರೆನೋಟ ನೋಡಿ
ಒಂದೇ ಓಟಕಿತ್ತವು'' [೭೭]

ಈ ರೀತಿಯಾಗಿ ದಿಗಂಬರ ಕಾವ್ಯದ ಪರಿಣಾಮ ಸಮಾಜದಲ್ಲಿ ಕಪಟ ಮೋಸ ವಂಚನೆ, ಹಗೆತನ, ದ್ವೇಷ ಮುಂತಾದವು ದೂರ ಓಡಿದವು ಎಂದು ಕವಿಯ ಅಭಿಪ್ರಾಯ.

ಮಹಾಸ್ವಪ್ನನರು ಬಳಸುವ ಅನೇಕ ಪ್ರತಿಮೆಗಳು ಒಮ್ಮೊಮ್ಮೆ ಸರಿಯಾಗಿ ಅರ್ಥವಾಗುವುದಿಲ್ಲ. 'ನಿಲ್ಲಿಸಿ ಆರ್ಕೆಸ್ಟ್ರಾ, ಆರಿಸಿರಿ ಪಂಜುಗಳಾ' ಎಂಬ ಕವನದಲ್ಲಿ ಸಮಾಜದ ಸತ್ಯಾಸತ್ತೆಯನ್ನು, ನೇರವಾಗಿ ಹೇಳುತ್ತಾರೆ. ಜೀವನವೆಂಬ ಕಥೆಯು ಈ ಸಮಾಜದಲ್ಲಿ ಹೇಗೆ ಹುಟ್ಟಿಕೊಂಡು ಬರುತ್ತದೆಂಬುದನ್ನು ಈ ಕವನದ ಮೂಲಕ ಸ್ಪಷ್ಟಪಡಿಸಿದ್ದಾರೆ.

" ಈ ಸರ್ಕಲ್‌ನಲ್ಲೇ ಆಕ್ಸಿಡೆಂಟ್ ಆಯ್ತು
ಆಗಲೇ ಮತಿಭ್ರಮಣೆಯಾಯಿತು
ಅಲ್ಲಿಂದಲೇ ಕಥಾರಂಭ!
ನನ್ನ ಊರು ಹೆಸರೂ ಮರೆತು ಹೋಗಿ, ನನ್ನ ಆಕಾರ ಬದಲಾಗಿ
ನನ್ನನ್ನೇ ನಾನು ಕಳೆದುಕೊಂಡು
ಈ ಹುಚ್ಚಾಸ್ಪತ್ರೆಯ ಮಂಚದ ಮೇಲೆ ಒಬ್ಬಂಟಿಯಾಗಿ
ಕಣ್ತೆರೆದ ದಿವಸ.
ಕತ್ತಲ ಸಮುದ್ರದ ಭೋರಾಟದಲ್ಲಿ ಯಾವಾಗಲೋ ಎಲ್ಲೋ
ಕಳೆದು ಹೋಯಿತು ಆತ್ಮ
..........................
..........................

ಯಾವಜ್ಜೀವ ಸೆರೆಮನೆಯಲ್ಲಿಟ್ಟು
ನಿರ್ಜೀವವಾಗಿ
ನಿಸ್ಸಹಾಯವಾಗಿ
ಒರಗಿದೆನೀ ಫುಟುಪಾತ್ ಮೇಲೆ
ನಿಲ್ಲಿಸಿರಿ ಆರ್ಕೆಸ್ಟ್ರಾ! ಆರಿಸಿರಿ ಪಂಜುಗಳನು ! " [೮]

ಎಂದು ಈ ಕವನದಲ್ಲಿ ಜೀವನವೆಂಬ ಹೋರಾಟದಲ್ಲಿ ಇಲ್ಲಿಂದಲೇ ಕಥೆ ಆರಂಭ. ತನ್ನನ್ನು ತಾನೇ ಕಳೆದುಕೊಂಡು ಸಮುದ್ರವೆಂಬ ಅಬ್ಬರದ ಅಲೆಗಳಲ್ಲಿ ಕಳೆದು ಹೋದ ಆತ್ಮ, ತಾನು ಬೆಳೆಯುವ ಉತ್ತುಂಗ ಶಿಖರಕ್ಕೇರುವ ಸಮಯದಲ್ಲಿ ಯುವಕರನ್ನು, ಅವರ ಯೌವ್ವನವನ್ನು ಹಾಳು ಮಾಡಿದ ಸ್ಥಿತಿ ಅಸಹಾಯ ಪರಿಸ್ಥಿತಿಯನ್ನು ಇಲ್ಲಿ ಅವಲೋಕಿಸಿದ್ದಾರೆ. ಇನ್ನು ಮುಂದುವರಿದು ಶತಮಾನಗಳಿಂದ ನಡೆಯುವ ಗತಕಾಲದ ವಿಷಯಗಳು ಹೇಗೆ ಮೂಡಿ ಬಂದಿವೆಯೆಂಬುದನ್ನು ಇಲ್ಲಿ ನೋಡಬಹುದು.

''ಇನ್ನು ಹೊರಲಾರೆ, ಈ ಜೈಲುಗಳನ್ನು, ಈ ಸಂಕೋಲೆಗಳನ್ನು
ಈ ಶಾಸನಗಳನ್ನು,
ಇನ್ನು ಹೊರಲಾರೆ! ಈ ಯುದ್ಧಗಳನ್ನೂ
ಈ ಗೆದ್ದಲು ಹಿಡಿದ ಚರಿತ್ರೆಯನ್ನೂ
ಏನು ಇಲ್ಲ! ಏನು ಇಲ್ಲ!
ಹಸಿವು, ದಾಹ, ದುಃಖ, ದೈನ್ಯ, ದಾರಿದ್ರ್ಯ ನೀಚವನ
ಮತ್ತೆ ಮೃತ್ಯುವಲ್ಲದೇ ಮತ್ತೇನೂ ಇಲ್ಲ!
ಕತ್ತಲು, ಪ್ರೇತಾತ್ಮಗಳ ಹಾಹಾಕಾರವಲ್ಲದೇ ಮತ್ತೇನೂ ಇಲ್ಲ
ಹೇಳು!
ಈಗಾದರೂ ನಿಜ ಹೇಳು!
ಹೋಗಲಿ ಬಿಡು!
ದಿಕ್ಕಿಲ್ಲದ ಈ ಹೆಣದ ಮೇಲೆ ಆಕಾಶವನ್ನಾದರೂ
ಹೊದಿಸು.''[೬]

ಇಲ್ಲಿ ಸಮಾಜದ ಜನರ ಚರಿತ್ರೆಯನ್ನು ಚಿತ್ರಿಸಿದ್ದಾರೆ. ಈ ದೇಶದಲ್ಲಿ ನಡೆದ ಯುದ್ಧಗಳು, ಸಂಕೋಲಗಳು, ಈ ದೇಶದ ಚರಿತ್ರೆಯು ಗೆದ್ದಲು ಹಿಡಿದುಹೋಗಿದೆ. ಕೇವಲ ಗತಕಾಲದ ವೈಭವವನ್ನು ಮೆಲುಕು ಹಾಕುವುದು ಶೋಭೆಯಲ್ಲ ವಾಸ್ತವಿಕತೆಯ ಭವಿಷ್ಯತ್ತಿನ ಮೇಲೆ ವಿಚಾರ ಮಾಡಬೇಕು. ವಾಸ್ತವದಲ್ಲಿ ಇರುವ ಹಸಿವು, ದಾಹ, ದುಃಖ, ದೈನ್ಯ, ದಾರಿದ್ರ್ಯ, ನೀಚತನ ಇವೆಲ್ಲವೂ ಮೃತ್ಯುವಿನ ಸಂಕೇತಗಳು. ಪ್ರೇತಾತ್ಮಗಳ ಹಾಹಾಕಾರ, ಕುದಿಯುತ್ತಿರುವ ಹೆಣಗಳು ಈ ದೇಶದ ಪರಿಸ್ಥಿತಿಯನ್ನು ಕಂಡು ಕವಿ ವಿಷಾದ ವ್ಯಕ್ತಪಡಿಸುತ್ತಾರೆ.

ಹೀಗೆ ಕವಿಗಳು ಸಾಮಾಜಿಕ ಪಿಡುಗುಗಳನ್ನು ಕಂಡು ಮಮ್ಮಲ ಮರುಗುವುದನ್ನು ಹೀಗಿನ ವಾಸ್ತವ ಚಿತ್ರಣ ಮುಂದಿಡುವುದನ್ನು ಕಾಣಬಹುದು.

**ಅಡಿ ಟಿಪ್ಪಣಿ**

೧. ಗುರುಮೂರ್ತಿ ಪೆಂಡಕೂರು: ತೆಲುಗು ದಿಗಂಬರ ಕಾವ್ಯ.
೨. ೧೬ ಜನ ತರುಣ ಕವಿಗಳು 'ಹಸಿವು ತಲೆಮಾರಿನ' ಎಂಬ ಹೊಸ ಕಾವ್ಯ ರೂಪವನ್ನು ತಂದರು. ಇವರ ಕಾವ್ಯ ಅಶ್ಲೀಲ ಹಾಗೂ ಕ್ರಾಂತಿಕಾರವಾಗಿತ್ತು.
೩. ಪ್ರೊ.ವೇಮಲ ಸಿಮ್ಮನ :ತೆಲಗು ಸಾಹಿತ್ಯ ವಿಮರ್ಶೆ ಸಿದ್ಧಾಂತಲು, ಪು.೪೯೨.
೪. ಪ್ರೊ.ವೇಮಲ ಸಿಮ್ಮನ :ತೆಲಗು ಸಾಹಿತ್ಯ ವಿಮರ್ಶೆ ಸಿದ್ಧಾಂತಲು, ಪು.೪೯೦.
೫. ಗುರುಮೂರ್ತಿ ಪೆಂಡಕೂರು: ದಾಹ ಸಮಗ್ರ ದಿಗಂಬರ ಕಾವ್ಯ, ಪು.೭.
೬. ಗುರುಮೂರ್ತಿ ಪೆಂಡಕೂರು: ಕಾಸ್ಮಿಕ್ ಜಾತಿ ಸಮಗ್ರ ದಿಗಂಬರ ಕಾವ್ಯ, ಪು.೧೫.

೭. ಗುರುಮೂರ್ತಿ ಪೆಂಡಕೂರು: **ಅಣುಸೂತ್ರ** ಸಮಗ್ರ ದಿಗಂಬರ ಕಾವ್ಯ, ಪು.೩೭.

೮. ಗುರುಮೂರ್ತಿ ಪೆಂಡಕೂರು: **ಸುಖರೋಗಿ** ಸಮಗ್ರ ದಿಗಂಬರ ಕಾವ್ಯ, ಪು.೩೭.

೯. ಗುರುಮೂರ್ತಿ ಪೆಂಡಕೂರು: **ಕಾಸ್ಮಿಕ್ ಜಾತಿ** ಸಮಗ್ರ ದಿಗಂಬರ ಕಾವ್ಯ, ಪು.೧೬.

೧೦. ಗುರುಮೂರ್ತಿ ಪೆಂಡಕೂರು: **ಮನಸ್ಸು** ಸಮಗ್ರ ದಿಗಂಬರ ಕಾವ್ಯ, ಪು.೧೮.

೧೧. ಗುರುಮೂರ್ತಿ ಪೆಂಡಕೂರು: **ಹಳ್ಳಿಗಾಡು** ಸಮಗ್ರ ದಿಗಂಬರ ಕಾವ್ಯ, ಪು.೫೧.

೧೨. ಗುರುಮೂರ್ತಿ ಪೆಂಡಕೂರು: **ಕುಷ್ಠರೋಗಿ** ಸಮಗ್ರ ದಿಗಂಬರ ಕಾವ್ಯ, ಪು.೫೯.

೧೩. ಗುರುಮೂರ್ತಿ ಪೆಂಡಕೂರು: **ದಿಗಂಬರವಾಗಬೇಕು** ಸಮಗ್ರ ದಿಗಂಬರ ಕಾವ್ಯ, ಪು.೬೩.

೧೪. ಗುರುಮೂರ್ತಿ ಪೆಂಡಕೂರು: **ದಿಗಂಬರವಾಗಬೇಕು** ಸಮಗ್ರ ದಿಗಂಬರ ಕಾವ್ಯ, ಪು.೬೬.

೧೫. ಗುರುಮೂರ್ತಿ ಪೆಂಡಕೂರು: **ಈ ದೇವರುಗಳು** ಸಮಗ್ರ ದಿಗಂಬರ ಕಾವ್ಯ, ಪು.೭೧.

೧೬. ಗುರುಮೂರ್ತಿ ಪೆಂಡಕೂರು: **ಆತ್ಮ ಯೋನಿ** ಸಮಗ್ರ ದಿಗಂಬರ ಕಾವ್ಯ, ಪು.೭೫.

೧೭. ಗುರುಮೂರ್ತಿ ಪೆಂಡಕೂರು: **ಆತ್ಮ ಯೋನಿ** ಸಮಗ್ರ ದಿಗಂಬರ ಕಾವ್ಯ, ಪು.೭೫-೭೬.

೧೮. ಗುರುಮೂರ್ತಿ ಪೆಂಡಕೂರು: **ನನ್ನ ದೇಶದಲ್ಲೇ ನಾನು ಏಕಾಂಗಿ** ಸಮಗ್ರ ದಿಗಂಬರ ಕಾವ್ಯ, ಪು.೮೩-೮೪.

೧೯. ಗುರುಮೂರ್ತಿ ಪೆಂಡಕೂರು: **ಹುಚ್ಚಾಸ್ಪತ್ರೆ ಎಲ್ಲಾ ಖಾಲಿ** ಸಮಗ್ರ ದಿಗಂಬರ ಕಾವ್ಯ, ಪು.೯೮.

೨೦. ಗುರುಮೂರ್ತಿ ಪೆಂಡಕೂರು: **ಶಿವಭೋಗಿ** ಸಮಗ್ರ ದಿಗಂಬರ ಕಾವ್ಯ, ಪು.೧೦೩.

೨೧. ಗುರುಮೂರ್ತಿ ಪೆಂಡಕೂರು: **ನೀನು ಹೇಳಿದ್ದು ಸುಳ್ಳಲ್ಲ** ಸಮಗ್ರ ದಿಗಂಬರ ಕಾವ್ಯ, ಪು.೮೧.

೨೨. ಗುರುಮೂರ್ತಿ ಪೆಂಡಕೂರು: **ನೀನು ಹೇಳಿದ್ದು ಸುಳ್ಳಲ್ಲ** ಸಮಗ್ರ ದಿಗಂಬರ ಕಾವ್ಯ, ಪು.೮೨.

೨೩. ಗುರುಮೂರ್ತಿ ಪೆಂಡಕೂರು: **ನಮಸ್ಕಾರ** ಸಮಗ್ರ ದಿಗಂಬರ ಕಾವ್ಯ, ಪು.೧೦೦.

೨೪. ಗುರುಮೂರ್ತಿ ಪೆಂಡಕೂರು: **ನಮಸ್ಕಾರ** ಸಮಗ್ರ ದಿಗಂಬರ ಕಾವ್ಯ, ಪು.೧೦೦.

೨೫. ಗುರುಮೂರ್ತಿ ಪೆಂಡಕೂರು: **ಭಿಕ್ಷಾಟನೆ** ಸಮಗ್ರ ದಿಗಂಬರ ಕಾವ್ಯ, ಪು.೧೦೬.

೨೬. ಗುರುಮೂರ್ತಿ ಪೆಂಡಕೂರು: **ಆಹ್ವಾನ** ಸಮಗ್ರ ದಿಗಂಬರ ಕಾವ್ಯ, ಪು.೧೦೧.

೨೭. ಗುರುಮೂರ್ತಿ ಪೆಂಡಕೂರು: **ಆಹ್ವಾನ** ಸಮಗ್ರ ದಿಗಂಬರ ಕಾವ್ಯ, ಪು.೧೦೨-೧೦೩.

೨೮. ಗುರುಮೂರ್ತಿ ಪೆಂಡಕೂರು: **ಜಿಜ್ಞಾಸೆ** ಸಮಗ್ರ ದಿಗಂಬರ ಕಾವ್ಯ, ಪು.೧೧೮.

೨೯. ಗುರುಮೂರ್ತಿ ಪೆಂಡಕೂರು: **ಜಿಜ್ಞಾಸೆ** ಸಮಗ್ರ ದಿಗಂಬರ ಕಾವ್ಯ, ಪು.೧೧೮.

೩೦. ಗುರುಮೂರ್ತಿ ಪೆಂಡಕೂರು: **ಸೂರ್ಯಸ್ನಾನ** ಸಮಗ್ರ ದಿಗಂಬರ ಕಾವ್ಯ, ಪು.೧೨೧.

೩೧. ಗುರುಮೂರ್ತಿ ಪೆಂಡಕೂರು: **ಸೂರ್ಯಸ್ನಾನ** ಸಮಗ್ರ ದಿಗಂಬರ ಕಾವ್ಯ, ಪು.೧೨೨.

೩೨. ಗುರುಮೂರ್ತಿ ಪೆಂಡಕೂರು: **ಸೂರ್ಯಸ್ನಾನ** ಸಮಗ್ರ ದಿಗಂಬರ ಕಾವ್ಯ, ಪು.೧೨೩.

೩೩. ಗುರುಮೂರ್ತಿ ಪೆಂಡಕೂರು: **ಅವಲೋಕನ** ಸಮಗ್ರ ದಿಗಂಬರ ಕಾವ್ಯ, ಪು.೧೨೬.

೩೪. ಗುರುಮೂರ್ತಿ ಪೆಂಡಕೂರು: **ಅವಲೋಕನ** ಸಮಗ್ರ ದಿಗಂಬರ ಕಾವ್ಯ, ಪು.೧೨೭.

೩೫. ಗುರುಮೂರ್ತಿ ಪೆಂಡಕೂರು: **ಶೃಂಗಾರ ವಿಲಾಸ** ಸಮಗ್ರ ದಿಗಂಬರ ಕಾವ್ಯ, ಪು.೧೨೯.

೩೬. ಗುರುಮೂರ್ತಿ ಪೆಂಡಕೂರು: **ಶೃಂಗಾರ ವಿಲಾಸ** ಸಮಗ್ರ ದಿಗಂಬರ ಕಾವ್ಯ, ಪು.೧೩೪.

೩೭. ಗುರುಮೂರ್ತಿ ಪೆಂಡಕೂರು: **ಶಸ್ತ್ರಚಿಕಿತ್ಸೆ** ಸಮಗ್ರ ದಿಗಂಬರ ಕಾವ್ಯ, ಪು.೧೫೯.

೩೮. ಗುರುಮೂರ್ತಿ ಪೆಂಡಕೂರು: **ಶಸ್ತ್ರಚಿಕಿತ್ಸೆ** ಸಮಗ್ರ ದಿಗಂಬರ ಕಾವ್ಯ, ಪು.೧೬೧-೧೬೨.

೩೯. ಗುರುಮೂರ್ತಿ ಪೆಂಡಕೂರು: **ಬಿದ್ದವನು ಎದ್ದಾಗ** ಸಮಗ್ರ ದಿಗಂಬರ ಕಾವ್ಯ, ಪು.೧೪೪.

೪೦. ಗುರುಮೂರ್ತಿ ಪೆಂಡಕೂರು: **ಬಿದ್ದವನು ಎದ್ದಾಗ** ಸಮಗ್ರ ದಿಗಂಬರ ಕಾವ್ಯ, ಪು.೧೫೦.

೪೧. ಗುರುಮೂರ್ತಿ ಪೆಂಡಕೂರು: **ನಾ ಹತ್ತುವೆನು ನ್ಯಾಯಾಲಯ** ಸಮಗ್ರ ದಿಗಂಬರ ಕಾವ್ಯ, ಪು.೧೬೫.

೪೨. ಗುರುಮೂರ್ತಿ ಪೆಂಡಕೂರು: **ಇನ್ನೂ ನೀನಿನ್ನೂ ಗುಲಾಮ** ಸಮಗ್ರ ದಿಗಂಬರ ಕಾವ್ಯ, ಪು.೧೭೩.

೪೩. ಗುರುಮೂರ್ತಿ ಪೆಂಡಕೂರು: **ವಂದೇಮಾತರಂ** ಸಮಗ್ರ ದಿಗಂಬರ ಕಾವ್ಯ, ಪು.೧೮೮.

೪೪. ಗುರುಮೂರ್ತಿ ಪೆಂಡಕೂರು: **ವಂದೇಮಾತರಂ** ಸಮಗ್ರ ದಿಗಂಬರ ಕಾವ್ಯ, ಪು.೧೮೮.

೪೫. ಗುರುಮೂರ್ತಿ ಪೆಂಡಕೂರು: **ಕೆಸರು** ಸಮಗ್ರ ದಿಗಂಬರ ಕಾವ್ಯ, ಪು.೧೭೮-೧೭೯.

೪೬. ಗುರುಮೂರ್ತಿ ಪೆಂಡಕೂರು: **ಹೋಗಾಚೆ** ಸಮಗ್ರ ದಿಗಂಬರ ಕಾವ್ಯ, ಪು.೧೮೪.

೪೭. ಗುರುಮೂರ್ತಿ ಪೆಂಡಕೂರು: **ಹೋಗಾಚೆ** ಸಮಗ್ರ ದಿಗಂಬರ ಕಾವ್ಯ, ಪು.೧೮೪.

೪೮. ಗುರುಮೂರ್ತಿ ಪೆಂಡಕೂರು: **ಐವತ್ತು ಕೋಟಿ ಅಗ್ನಿಕುಂಡಗಳು** ಸಮಗ್ರ ದಿಗಂಬರ ಕಾವ್ಯ, ಪು.೧೯೦.

೪೯. ಗುರುಮೂರ್ತಿ ಪೆಂಡಕೂರು: **ಜಗದ್ಗುರುಗಳು ಬರುತ್ತಿದ್ದಾರೆ ಎಚ್ಚರಿಕೆ** ಸಮಗ್ರ ದಿಗಂಬರ ಕಾವ್ಯ, ಪು.೨೦೨.

೫೦. ಗುರುಮೂರ್ತಿ ಪೆಂಡಕೂರು: **ದಿಗಂಬರಿ** ಸಮಗ್ರ ದಿಗಂಬರ ಕಾವ್ಯ, ಪು.೨೦೭.

೫೧. ಗುರುಮೂರ್ತಿ ಪೆಂಡಕೂರು: **ದಿಗಂಬರಿ** ಸಮಗ್ರ ದಿಗಂಬರ ಕಾವ್ಯ, ಪು.೨೦೭-೨೦೮.

೫೨. ಗುರುಮೂರ್ತಿ ಪೆಂಡಕೂರು: **ದಿಗಂಬರಿ** ಸಮಗ್ರ ದಿಗಂಬರ ಕಾವ್ಯ, ಪು.೨೦೯.

೫೩. ಗುರುಮೂರ್ತಿ ಪೆಂಡಕೂರು: **ಆರ್ತನಾದ** ಸಮಗ್ರ ದಿಗಂಬರ ಕಾವ್ಯ, ಪು.೨೧೩.

೫೪. ಗುರುಮೂರ್ತಿ ಪೆಂಡಕೂರು: **ಆರ್ತನಾದ** ಸಮಗ್ರ ದಿಗಂಬರ ಕಾವ್ಯ, ಪು.೨೧೬.

೫೫. ಗುರುಮೂರ್ತಿ ಪೆಂಡಕೂರು: **ಬರಗಾಲ ಭಿಕ್ಷೆ** ಸಮಗ್ರ ದಿಗಂಬರ ಕಾವ್ಯ, ಪು.೨೨೨.

೫೬. ಗುರುಮೂರ್ತಿ ಪೆಂಡಕೂರು: **ಬರಗಾಲ ಭಿಕ್ಷೆ** ಸಮಗ್ರ ದಿಗಂಬರ ಕಾವ್ಯ, ಪು.೨೨೩.

೫೭. ಗುರುಮೂರ್ತಿ ಪೆಂಡಕೂರು: **ನರಭಕ್ಷಕರು** ಸಮಗ್ರ ದಿಗಂಬರ ಕಾವ್ಯ, ಪು.೨೨೭.

೫೮. ಗುರುಮೂರ್ತಿ ಪೆಂಡಕೂರು: **ನರಭಕ್ಷಕರು** ಸಮಗ್ರ ದಿಗಂಬರ ಕಾವ್ಯ, ಪು.೨೨೭.

೫೯. ಗುರುಮೂರ್ತಿ ಪೆಂಡಕೂರು: **ನರಭಕ್ಷಕರು** ಸಮಗ್ರ ದಿಗಂಬರ ಕಾವ್ಯ, ಪು.೨೨೮.

೬೦. ಗುರುಮೂರ್ತಿ ಪೆಂಡಕೂರು: **ನಾನು ದೇವರನ್ನು ನಂಬುತ್ತೇನೆ** ಸಮಗ್ರ ದಿಗಂಬರ ಕಾವ್ಯ, ಪು.೨೨೩.

೬೧. ಗುರುಮೂರ್ತಿ ಪೆಂಡಕೂರು: **ನಾನು ದೇವರನ್ನು ನಂಬುತ್ತೇನೆ** ಸಮಗ್ರ ದಿಗಂಬರ ಕಾವ್ಯ, ಪು.೨೨೫.

೬೨. ಗುರುಮೂರ್ತಿ ಪೆಂಡಕೂರು: **ಗ್ಲಾನಿರ್ಭವತಿ ಭಾರತ** ಸಮಗ್ರ ದಿಗಂಬರ ಕಾವ್ಯ, ಪು.೨೪೧.

೬೩. ಗುರುಮೂರ್ತಿ ಪೆಂಡಕೂರು: **ಗ್ಲಾನಿರ್ಭವತಿ ಭಾರತ** ಸಮಗ್ರ ದಿಗಂಬರ ಕಾವ್ಯ, ಪು.೨೪೨.

೬೪. ಗುರುಮೂರ್ತಿ ಪೆಂಡಕೂರು: **ನಟಸಾಮ್ರ್ರಾಟ್** ಸಮಗ್ರ ದಿಗಂಬರ ಕಾವ್ಯ, ಪು.೨೪೭.

೬೫. ಗುರುಮೂರ್ತಿ ಪೆಂಡಕೂರು: **ನಾವು ಯಾರು** ಸಮಗ್ರ ದಿಗಂಬರ ಕಾವ್ಯ, ಪು.೨೪೯-೨೫೦.

೬೬. ಗುರುಮೂರ್ತಿ ಪೆಂಡಕೂರು: **ಇದ್ದಕ್ಕಿದ್ದಂತೆ ನಡು ಹಗಲಲ್ಲಿ ನಗ್ನ** ಸಮಗ್ರ ದಿಗಂಬರ ಕಾವ್ಯ, ಪು.೨೪೪.

೬೭. ಗುರುಮೂರ್ತಿ ಪೆಂಡಕೂರು: **ನಿಲ್ಲಿಸಿರಿ ಆರ್ಕೆಸ್ಟ್ರಾ ಪಂಜುಗಳಾ** ಸಮಗ್ರ ದಿಗಂಬರ ಕಾವ್ಯ, ಪು.೨೫೨.

೬೮. ಗುರುಮೂರ್ತಿ ಪೆಂಡಕೂರು: **ನಿಲ್ಲಿಸಿರಿ ಆರ್ಕೆಸ್ಟ್ರಾ ಪಂಜುಗಳಾ** ಸಮಗ್ರ ದಿಗಂಬರ ಕಾವ್ಯ, ಪು.೨೫೨.

■

## ಅಧ್ಯಾಯ -೪
## ದಿಗಂಬರ ಕವಿಗಳ ವೈಚಾರಿಕ ನಿಲುವುಗಳು

ಸರ್ವಜನಹಿತ ಮೌಲ್ಯಧಾರಿತ ವಿಚಾರಗಳು ದಿಗಂಬರ ಕವಿಗಳ ಚಿಂತನೆಗಳಲ್ಲಿ ಕಾಣಬಹುದು. ಮನುಷ್ಯನ ಒಂದು ಆತ್ಯಂತಿಕ ಪ್ರಮುಖ ಲಕ್ಷಣವೆಂದರೆ ಅವನು ಯಾವುದೆ ವಿಷಯವನ್ನಾಗಲಿ, ವಿಚಾರಕ್ಕೊಳಪಡಿಸುವುದು. ಹಾಗೂ ಆ ವಿಚಾರ ಪ್ರಜ್ಞೆ ಸಾಮಾನ್ಯ ಭಾವನೆಗಳಿಂದ ಹಿಡಿದು ಅತ್ಯಂತ ಗಹನ ವಿಷಯಗಳವರೆಗೂ ವ್ಯಾಪಿಸಿರುತ್ತದೆ. ದಿಗಂಬರ ಕವಿಗಳ ವಿಚಾರಗಳು ಸಮಾಜ ಪರವಾದ ವಾಸ್ತವತೆಯ ನೆಲೆಯಲ್ಲಿ ಮೂಡಿಬಂದಂತವು.

ವೈಚಾರಿಕತೆಯೆಂಬುದು ಯಾವಾಗಲೂ ತನ್ನ ಪ್ರಾರಂಭಿಕ ಹೆಜ್ಜೆಯನ್ನು ಇಡುವುದು ವಸ್ತು, ವಿಚಾರ ಮತ್ತು ವೈಯಕ್ತಿಕ ಅಂತ ಸತ್ವಗಳನ್ನು ಒಳಗೊಂಡಂತೆ ಸತ್ಯದರ್ಶನವನ್ನು ಮಾಡುವುದರ ಮೂಲಕವೇ ಆಗಿರುತ್ತದೆ. ವೈಚಾರಿಕತೆಯು ಜ್ಞಾನ ಮೂಲದ ಮೇಲೆ ನಿಂತಿದೆ. ಹಾಗಾಗಿ ದಿಗಂಬರ ಕವಿಗಳ 'ಜ್ಞಾನ'ದ ಮೂಲಕ ಅವರ ಚಿಂತನೆಗಳು ಮೊದಲು ವ್ಯಕ್ತಿ ವಿಶಿಷ್ಟವಾಗಿ ಬಳಿಕ ಸಮಾಜ ಮುಖವಾಗಿ ಹೊರಹೊಮ್ಮಿವೆ.

ದಿಗಂಬರ ಕವಿಗಳು ಸಮಗ್ರ ಸಮಾಜದ ಒಳಿತಿನ ಬಗೆಗೆ ಚಿಂತನೆ ಮಾಡಿದರು. ಅವರು ಸಮಾಜದ ಬದಲಾವಣೆಯನ್ನು ಅಪೇಕ್ಷಿಸಿದರು. ಕೆಳವರ್ಗದ ದುಡಿವವರ, ದೀನರ, ಸಮಾಜ ಘಾತುಕಕ್ಕೊಳಗಾದ ಬಗೆಗೆ ತುಂಬ ಕಳಕಳಿಹೊಂದಿ, ಅವರ ಬಗೆಗೆ ತುಂಬ ಕಾಳಜಿ ವಹಿಸಿದರು. ಅವರು ವಿಶ್ವಬಂಧುತ್ವವನ್ನು ಬಯಸಿ, ಪ್ರಪಂಚವನ್ನು ಪ್ರೀತಿಸಿದರು. ಹಾಗೆ ಇಡೀ ಪ್ರಪಂಚದ ಶಾಂತಿಯನ್ನು ಬಯಸಿದರು.

### ಸಾಮಾಜಿಕ ಚಿತ್ರಣ

ದಿಗಂಬರ ಕವಿಗಳು ಸಮಾಜದ ವಾಸ್ತವ ಚಿತ್ರಣವನ್ನು ಅವರ ಕವನಗಳ ಮುಖಾಂತರ ಕೊಟ್ಟರು. ಸ್ವಾತಂತ್ರ್ಯದ ನಂತರ ದೇಶದಲ್ಲಿ ಹೊಸ ಚೈತನ್ಯವು ಬರುತ್ತದೆಂದು ನಂಬಿದ್ದರು, ಆದರೆ ಸ್ವಾತಂತ್ರ್ಯದ ನಂತರ ದೇಶದ ಪರಿಸ್ಥಿತಿ ಇನ್ನಷ್ಟು ಹದಗೆಡುತ್ತಲೇ ಹೋಯಿತು. ಸಮಾಜದ ದುಡಿವ ವರ್ಗದ ಸ್ಥಿತಿ ಶೋಚನೀಯ ವಾಗಿತ್ತು. ಅತೀ ಕೆಳವರ್ಗದ ಜನರ ಸ್ಥಿತಿ ಮತ್ತು

ಸಮಸ್ಯೆಗಳು ಇನ್ನೂ ಗಂಭೀರವಾದವು. ಇಂಥ ಸಂದರ್ಭದಲ್ಲಿ ಸಮಾಜದ, ದೇಶದ ಜನತೆಯ ಒಳಿತನ್ನೇ ಬಯಸಿದ ದಿಗಂಬರ ಕವಿಗಳು ಕಾವ್ಯದ ಮೂಲಕ ಕ್ರಾಂತಿಯನ್ನು ಮಾಡಿದರು. ಈ ಕವಿಗಳು ಹದಗೆಟ್ಟ ಸಮಾಜದ ಸ್ಥಿತಿಯನ್ನು ಸೂಕ್ಷ್ಮ ದೃಷ್ಟಿಯಿಂದ ಪರಿಗ್ರಹಿಸಿ, ಅಷ್ಟೇ ತೀಕ್ಷ್ಣವಾದ ವಿಚಾರಗಳ ಮೂಲಕ ತಮ್ಮ ಭಾವನೆಗಳನ್ನು ಹೊರಹೊಮ್ಮಿಸಿದರು.

ಇಂಥ ಒಂದು ವಾಸ್ತವ ಸ್ಥಿತಿಯನ್ನು ಚೆರಬಂಡರಾಜು ಅವರ 'ವಂದೇ ಮಾತರಂ' ಕವನದಲ್ಲಿ ಕಾಣಬಹುದು. ಭಾರತ ಮಾತೆಯ ಹೀನ ಸ್ಥಿತಿಯು ಯಾವ ರೀತಿ ಇದೆಯೆಂಬುದನ್ನು ಇದರಲ್ಲಿ ಚಿತ್ರಿಸಿದ್ದಾರೆ. ಈ ಕವನದಲ್ಲಿ ಬರುವ ವಸ್ತು ಸ್ಥಿತಿಯು ದೇಶದ ಕರಾಳತೆಯನ್ನು ಕಣ್ಣು ಮುಂದೆ ತಂದು ನಿಲ್ಲಿಸುತ್ತದೆ. ಈ ಕವನ 'ಭಾರತ ಮಾತೆ'ಯು ಶೋಷಕರ ಕೈಯಲ್ಲಿ ಸಿಕ್ಕು ನರಳುವ ಸ್ಥಿತಿ, ಶೋಷಕರ ಕೈಗೊಂಬೆಯಾಗಿ ಅವರ ತಾಳಕ್ಕೆ ತಕ್ಕಂತೆ ಕುಣಿಯುವ ಹಾಗೆ ಮಾಡುವುದು ಅತ್ಯಂತ ಶೋಚನೀಯವಾದುದು. ಜ್ವಾಲಾಮುಖಿಯ 'ಶೃಂಗಾರ ವಿಲಾಸ' ಕವನವು ಚೆರಬಂಡರಾಜು ಅವರ 'ವಂದೇ ಮಾತರಂ' ಕವನದಂತೆ ಭಾರತದೇಶದ ವಸ್ತು ಸ್ಥಿತಿಯನ್ನು ಪ್ರತಿಬಿಂಬಿಸುತ್ತದೆ. ಚೆರಬಂಡರಾಜು ಮತ್ತು ಜ್ವಾಲಾಮುಖಿಯ ವಿಚಾರಗಳು ಇಡೀ ದೇಶದ ವಸ್ತು ಸ್ಥಿತಿಯನ್ನು ಮುಂದಿಡುತ್ತದೆ.

ಜ್ವಾಲಾಮುಖಿಯ 'ಶೃಂಗಾರ ವಿಲಾಸ' ಕವನದಲ್ಲಿ ಇಡೀ ದೇಶವನ್ನು ಪ್ರತಿನಿಧಿಸುವ ಜನರ ಬದುಕಿನ ವಾಸ್ತವ ಚಿತ್ರಣ ಕಂಡು ಬರುತ್ತದೆ. 'ಕನಸು' ನನಸಾದ ಕಾಲದಲ್ಲೇ ನಿಜವೆಂಬ ಕೂಸು 'ಇಜಂ'ಗಳ ಗಾಜಿನ ಹೂಜಿಗಳಲ್ಲಿ, ಬಂಜೆ ಸಾಕಲಾರದ ತಾಯಿಯಾದಳೆಂಬಂತೆ' ಶೋಚನೀಯವಾಯಿತು.

ನಿಖಿಲೇಶ್ವರ ಅವರ 'ನನ್ನ ದೇಶದಲ್ಲೇ ನಾನು ಏಕಾಂಕಿ' ಎಂಬ ಕವನದಲ್ಲಿ ಚೆರಬಂಡರಾಜು, ಜ್ವಾಲಾಮುಖಿಯಂತೆ, ಈ ಕವನದಲ್ಲಿ ದೇಶದ ಬಗ್ಗೆ ನಿರಾಶೆಯನ್ನು ವ್ಯಕ್ತಪಡಿಸಿ, ಈ ದೇಶದಲ್ಲಿರುವ ಸಮಸ್ಯೆಗಳು 'ದಟ್ಟವಾಗುತ್ತಿರುವ ಹಸಿವು-ನಿರುದ್ಯೋಗದ ಮುಳ್ಳುಕಂಟೆಗಳಲ್ಲಿ ಅಂದವಾದ ಹೂಗಳು', ಈ ದೇಶ ಮಹಾಸಮಸ್ಯೆಗಳ ನೇಣು ಪಾಶವು ಅನುಕ್ಷಣ ತಲೆಯ ಮೇಲೆ ಹುರಿ ತಿರುಗುತ್ತವೆ. ಇಂಥ ಅನೇಕ ಸಮಸ್ಯೆಗಳ ಮೂಲಕ ದೇಶದ ವಾಸ್ತವ ಚಿತ್ರಣವನ್ನು ಕಾಣಬಹುದು. ಹಸಿವು- ನಿರುದ್ಯೋಗ, ಸ್ನೇಹವಿಲ್ಲದ ಜೀವಿಗಳು, ಈ ದೇಶದ ಪರಿಕಲ್ಪನೆಯಲ್ಲಿ ಪ್ರಮುಖವಾಗಿ ಬರುವುದನ್ನು ನಿಖಿಲೇಶ್ವರರ ಕಾವ್ಯದಲ್ಲಿ ಕಾಣಬಹುದು.

ದೇಶದ ವ್ಯವಸ್ಥೆಯ ಹಾಗೂ ಜನರು ಬದುಕುವ ರೀತಿ ತೆಲುಗಿನ ದಿಗಂಬರ ಕವಿಗಳ ಕವನಗಳಲ್ಲಿ ಚಿತ್ರಿಸಿದಂತೆ, ಕನ್ನಡದ ಕವಿಗಳಲ್ಲೂ ಕಾಣಬಹುದು. ಸಿದ್ದಲಿಂಗಯ್ಯನವರ ಕವನದಲ್ಲಿ, ಶ್ರೀಕೃಷ್ಣ ಆಲನಹಳ್ಳಿ, ಕೆಲವರ ಕವನಗಳಲ್ಲಿ ಮೂಡಿ ಬಂದಿದೆ. ತೆಲುಗು ಕವಿಗಳಂತೆ ಕನ್ನಡ ಕವಿಗಳಲ್ಲಿ ಆವೇಶ, ಕೆಚ್ಚು ಪ್ರಕಟಿಸಿಲ್ಲ. ಹಾಗೆ ದಿಗಂಬರ ಕವಿಗಳಂತೆ ಕನ್ನಡದ ಕವಿಗಳು

ಜನರನ್ನು ಹುರಿದುಂಬಿಸುವ ಕೆಲಸವನ್ನು ಮಾಡಲಿಲ್ಲ. ಕನ್ನಡ ಕವಿಗಳ ಬಹುತೇಕ ಕವನಗಳು ಅವರ ಪುಸ್ತಕಗಳಿಗೆ ಮಾತ್ರ ಸೀಮಿತವಾಗಿ ಉಳಿದವು. ಸಮಾಜದ ಮೇಲೆ ನೇರ ಪರಿಣಾಮ ಬೀರಲಿಲ್ಲ ಹಾಗೆ ಜನರಲ್ಲಿ ಸಮಾಜ ಪರಿವರ್ತನೆಯ ಮನೋಭಾವನೆಯನ್ನು ಮೂಡಿಸುವಂತೆ ಪ್ರಚೋದಿಸಲಿಲ್ಲ.

ದಿಗಂಬರ ಕಾವ್ಯವು ಸಾಮಾಜಿಕ ವಾಸ್ತವತೆಯ ಆಧಾರದ ಮೇಲೆ ಬೆಳೆದಿದೆ. ಆದರ್ಶ ಸಮಾಜದ ಕನಸು ಅವರ ಕವನಗಳಲ್ಲಿ ವ್ಯಾಪಿಸಿದೆ. ಅವರ ಕನಸುಗಳ ಕವಲುದಾರಿಯು ಅನೇಕ ಭಾವನುಭಾವಗಳ ಸಂಕೀರ್ಣತೆಯನ್ನು ಅನೇಕ ಮುಖಗಳಲ್ಲಿ ತಿಳಿಸಿಕೊಡುತ್ತದೆ. ಕಾವ್ಯದ ವಾಸ್ತವ ಚಿತ್ರಣ, ಶೋಷಿತರ, ಕೆಳವರ್ಗದ, ಶ್ರಮಿಕ ಸಮಾಜದ, ಅತೀ ಕೆಳವರ್ಗದ, ಶೋಷಿತ ವ್ಯವಸ್ಥೆಯ ವಿಭಿನ್ನ ಸ್ವರೂಪಗಳು ಅವರ ವಿಡಂಬನೆಗೆ ಒಳಗಾಗಿವೆ. ಇಂಥ ಸಮಾಜಪರ ಚಿಂತನೆ ಶೋಷಿತ ಪರ ಚಿಂತನೆ ಮಾಡುವ, ಕವಿಗಳು ನಿಜವಾಗಿ ಆದರ್ಶವಾದಿಗಳು. ಇವರ ಮುಖ್ಯ ಆಶಯ ಸಮಾಜದ ಸ್ಥಿತಿಗತಿಗಳ ಬಗೆಗೆ ಚಿಂತನೆ ಮಾಡುವುದು. ಅವರ ಕುಂದು ಕೊರತೆಗಳ ಬಗೆಗೆ ಕಳವಳ ಪಡುವುದು, ಸಮಾಜದ ವಾಸ್ತವತೆಯನ್ನು ಬಯಲುಗೊಳಿಸುವುದು, ವಿಷಮತೆಗಳ ಬಗ್ಗೆ ಕೆರಳುವುದು, ಇಷ್ಟಕ್ಕೆ ಅವರು ತೃಪ್ತಿ ಪಡದೆ, ಸಮಾಜವು ಸುಧಾರಿಸಬೇಕು, ಸಮಾಜವು ಆದರ್ಶ ಸಮಾಜವಾಗಿ ರೂಪುಗೊಳ್ಳಬೇಕೆಂದು ಸದಾ ಹಂಬಲಿಸುತ್ತಾರೆ. ಹಾಗೆ ಆ ಸಮಸ್ಯೆಗಳಿಗೆ ಪರಿಹಾರ ಮಾರ್ಗವನ್ನು ಸೂಚಿಸಲು ಶತ ಪ್ರಯತ್ನ ಪಡುತ್ತಾರೆಂಬುದು ದಿಗಂಬರ ಕವಿಗಳ ವೈಶಿಷ್ಟ್ಯ

**ರಾಜಕೀಯ ವಿಡಂಬನೆ**

ನಗ್ನಮುನಿ ಹಳ್ಳಿಯ ಕಠೋರ ವಾಸ್ತವತೆಯನ್ನು ಚಿತ್ರಿಸಿದ್ದಾರೆ. ಅವರ ಇಂದಿನ ಹಳ್ಳಿಯ ವಾಸ್ತವ ಚಿತ್ರಣವು 'ಹಳ್ಳಿಗಾಡು ' ಎಂಬ ಕವನದಲ್ಲಿ ಮೂಡಿಬಂದಿದೆ. ರಾಜಕೀಯ ವಿಡಂಬನೆ, ಹಳ್ಳಿಯ ಮುಗ್ದ ಜನರನ್ನು ಶೋಷಿಸುವ ರಾಜಕೀಯ ನಾಯಕರು, ಬಡವರ ರಕ್ತವನ್ನು ಹೀರುವ ತಿಗಣೆಗಳು. ಕೇವಲ ಓಟಿಗಾಗಿ ಮುಗ್ಧ ಹಳ್ಳಿಗರನ್ನು ಶೋಷಿಸುವ ಇವರು ಐದು ವರ್ಷಕ್ಕೊಮ್ಮೆ ಮಾತ್ರ ಪ್ರತ್ಯಕ್ಷರಾಗುತ್ತಾರೆ. ಪತ್ರಿಕೆಗಳಲ್ಲಿ ರಾಜಕೀಯ ನಾಯಕರ ಹಿರಿತನದ ಗುಣಧರ್ಮಗಳನ್ನು ಗುಣಗಾನ ಮಾಡುತ್ತಾರೆ. ಆದರೆ ಬಡವರ ಹಸಿವು ಅವರ ಸಮಸ್ಯೆಗಳಿಗೆ ಯಾವುದೇ ಪರಿಹಾರ ಸೂಚಿಸುವುದಿಲ್ಲ. ಹಳ್ಳಿಯ ಜನರಿಗೆ ಸಿಗುವ ಸಂಪತ್ತು ಇನ್ನಾರಿಗೋ ಸಿಗುವುದು ಅಥವಾ ಶೋಷಕರೇ ಕಬಳಿಸುವುದು ಕಂಡು ಬರುತ್ತದೆ. ಹೀಗೆ ಹಳ್ಳಿಯ ಶೋಷಣೆಯ ಚಿತ್ರಣವನ್ನು ಕವಿಗಳು ಮುಂದಿಟ್ಟಿದ್ದಾರೆ.

ನಗ್ನ ಮುನಿಯು ಬರೆದ ಪ್ರಮುಖ ಕವನಗಳಲ್ಲಿ ಜನವಿರೋಧಿಗಳ ಬಗೆಗೆ, ದ್ವೇಷ, ನರಸತ್ತ ಜನರ ಮೇಲೆ ಆಕ್ರೋಶ, ಸಂಪ್ರದಾಯವನ್ನು ನಂಬಿಕೊಂಡು ಜೀವಿಸುವ ಜನರನ್ನು ಅವರು ಕಟುವಾದ ಶಬ್ದಗಳಿಂದ ಖಂಡಿಸುತ್ತಾರೆ. ಇವರು ನೇರವಾಗಿ ಜನರ ಮನೋಭಾವನೆಗಳನ್ನು ಬಯಲಿಗೆಳೆಯುವ ವ್ಯಕ್ತಿತ್ವವುಳ್ಳವರು. ಸಮಾಜ ಘಾತುಕರ

ದೌರ್ಜನ್ಯಕ್ಕೆ ಬಲಿಯಾದ ಸಾಮಾನ್ಯ ಜನರ ಬಗೆಗೆ ಆತಂಕ. ಮಾನವನ ಮೂರ್ಖತನವನ್ನು ರಾಕ್ಷಸತ್ವವನ್ನು, ಅಜ್ಞಾನ, ಆಕ್ರಂದನಗಳನ್ನು, ಮಾನವನ ದುರಾಶೆಗಳ ಕುಷ್ಠರೋಗವನ್ನು, ಅಸೂಯಾ ಪ್ರವೃತ್ತಿಗಳನ್ನು ಇಡೀ ಸಮಾಜ ಘಾತುಕರ ಚಲನವಲನಗಳನ್ನು ಅವರ ದುಷ್ಟತೆಯನ್ನು ಕವನದಲ್ಲಿ ವ್ಯಕ್ತ ಮಾಡಿದ್ದಾರೆ.

ನಗರ ಜೀವನದ ವಾಸ್ತವ ಚಿತ್ರಣವನ್ನು ದಿಗಂಬರ ಕವಿಗಳ ಕವನಗಲ್ಲಿ ಕಾಣಬಹುದು. ಇಂದಿನ ನಗರಗಳು ಆಧುನಿಕ ವೈಭವಗಳು. ಈ ಆಧುನಿಕ ನಗರಗಳಲ್ಲಿ ದೇಶದ ನಾಗರಿಕ ಜೀವನದ ಪ್ರಗತಿ ಹಾಗೂ ದುಸ್ಥಿತಿ ಕವಿಗಳಿಗೆ ವಾಸ್ತವ ಚಿತ್ರಣವನ್ನು ನೀಡಲು ವಸ್ತು ಸ್ಥಿತಿಯನ್ನು ಮೂಡಿಸಲು ವಿಷಯ ಒದಗಿಸಿ ಮಾನವನೇ ಸೃಷ್ಟಿಸಿದ ವಿಜ್ಞಾನ, ತಂತ್ರಜ್ಞಾನ, ಕೈಗಾರಿಕೆಗಳು ಸುಖ ಜೀವನಕ್ಕೆ ಸೌಲಭ್ಯಗಳು ಸಂಪರ್ಕ ಸೇತುವೆಗಳು. ಹೀಗೆ ಮಾಡಲಾದ ಅನುಕೂಲಗಳನ್ನು ಪಡೆದರೂ ಸಹ ಎಲ್ಲಾ ಸೌಲಭ್ಯಗಳ ಬಂಧನದಲ್ಲಿ ಸಿಲುಕಿ ಮಾನವನು ಒದ್ದಾಡುತ್ತಿದ್ದಾನೆ. ಕಾರಣ ನಗರ ಜೀವನದ ಜನತೆಯ ನೆಮ್ಮದಿ ಮಾನಸಿಕ ಒತ್ತಡಗಳಲ್ಲಿ ತೊಳಲಾಡುತ್ತಿವೆ. ಹೀಗೆ ಹಲವಾರು ವಿಷಯಗಳು ನಗರದ, ದೇಶದ, ನಾಗರಿಕತೆಯ ವಾಸ್ತವ ಚಿತ್ರಣವನ್ನು ದಿಗಂಬರ ಕವಿಗಳಲ್ಲಿ ಕಾಣಬಹುದು. ದೂರದ ಬೆಟ್ಟ ಕಣ್ಣಿಗೆ ನುಣ್ಣಗೆ, ನೋಡಲು ಆಕರ್ಷಣವಾಗಿ ಕಾಣುತ್ತದೆ. ಕಣ್ಣಿಗೆ ಹಬ್ಬಗಳನ್ನುಂಟು ಮಾಡುತ್ತದೆ. ಹಾಗೆ ನಗರಗಳು ನೋಡಲು ಎಷ್ಟು ಸುಂದರವಾಗಿ ಕಾಣುತ್ತವೆಂಬ ವಿಚಾರಗಳನ್ನು ವಿಡಂಬನಾತ್ಮಕವಾಗಿ ನಿಖಿಲೇಶ್ವರರ ಕವನದಲ್ಲಿ ಪ್ರಕಟವಾಗಿದೆ. 'ಈ ದೇಶದ ಪ್ರತಿ ನಗರವೂ ರಸಿಗೆ ರಸಿಗೆಯಾದ ಮಹಾಗಾಯ' ದೂರದಿಂದ ಅದೊಂದು ಕೆಂಪುಗುಲಾಬಿ, ಹತ್ತಿರ ಹೋದರೆ ಆದೊಂದು ನೆತ್ತರು ಸುರಿವ ಗಾಯ ಈ ನಗರದಲ್ಲಿ ವಾಸಿಸುವ ಜನರಯಾತನೆ, ಅವರ ಕರಾಳತೆಯ ಜೀವನ ದೂರದಿಂದ ಗುಲಾಬಿಯಂತೆ ಕಾಣುವ ನಗರಗಳಲ್ಲಿ ಸಾಮಾನ್ಯ ಜನರ ಸ್ಥಿತಿಯು ಎಂಥದೆಂದು ಕವನದಲ್ಲಿ ಆತಂಕವನ್ನು ವ್ಯಕ್ತಪಡಿಸಿದ್ದಾರೆ. ಜನರ ಜೀವನದ ಚಿತ್ರಣವು ಅವರು ಪಡುವ ವ್ಯಥೆಯು ಇಡೀ ದೇಶದ ಸಮಸ್ತ ಜನರ ಚಿತ್ರಣವು ಕಣ್ಣ ಮುಂದೆ ಬರುತ್ತದೆ.

ದಿಗಂಬರ ಕವಿಗಳಲ್ಲಿ ರಾಜಕೀಯ ವಿಡಂಬನೆಯನ್ನು ಕಾಣುಬಹುದು. ದೇಶದ ದಿಕ್ಕು ದಿಕ್ಕುಗಳಲ್ಲಿ; ದೇಶ ದೇಶಗಳಲ್ಲಿ ರಾಜಕೀಯ ಭ್ರಷ್ಟತೆಯನ್ನು ಮಹಾಮಾರಿ, ಕಾಲರಾ, ಪ್ಲೇಗು, ಹರಡಿಸುವ ಕ್ರಿಮಿಯಂತೆ ರಾಜಕೀಯ ನಾಯಕರು ಭ್ರಷ್ಟತೆ, ಮೋಸ, ವಂಚನೆಗಳನ್ನು ಹರಡಿಸುತ್ತಾರೆ. ಈ ರಾಜಕೀಯ ನಾಯಕರನ್ನು ಹೊಲಸಿನ ಮೇಲೆ ಕೂಡುವ ಹುಳಗಳು, ಹೊಲಸು ತಿನ್ನುವ ಹಂದಿಗಳು ಎಂದು ಹೇಳಿ, ಅದಕ್ಕಿಂತ ಕನಿಷ್ಠವೆಂದು ಮುಂದುವರಿದು, ರಾಜಕೀಯ ನಾಯಕರುಗಳ ಚಟುವಟಿಕೆಗಳನ್ನು ಖಂಡಿಸುತ್ತಾರೆ. ನಗ್ನಮುನಿ ಮುಂದುವರೆದು ರಾಜಕೀಯ ನಾಯಕರುಗಳಿಗೆ ಸೂಚನೆ ಕೊಡುತ್ತ, ನಿಮ್ಮ ಹೊಲಸಿನಿಂದ ಹೊರಬಂದು ನೋಡಿ ಪ್ರಪಂಚವೇ ನಿಮ್ಮನ್ನು ನೋಡಿ ನಗುತ್ತಿದೆ. ಹಾಗೆ ಅಪಾಯವು ಮುಖ್ಯವಾಗಿ ನಾಯಕರುಗಳ ಮಾಡುವ ಮೋಸದಲಿಲ್ಲ. ಆದರೆ, ಅದನ್ನು ನಂಬುವ ದಡ್ಡ ಜನರಲ್ಲಿದೆ, ಹಾಗಾಗಿ

ನಗ್ನಮುನಿಯು ಜನರಿಗೆ ಸಹ ಎಚ್ಚರಿಕೆ ನೀಡುತ್ತಾರೆ. ಜನರು ಮಾನವೀಯ ಗುಣಗಳನ್ನು ಅಳವಡಿಸಿಕೊಂಡು ಸ್ವಾಭಿಮಾನಿಯಾಗಿ ಬಾಳಬೇಕೆಂದು ಸೂಚನೆ ನೀಡುವ ಇವರ ಕವನಗಳು ಜನರನ್ನು ಪರಿವರ್ತನೆಗೆ ತುಡಿಯುವಂತೆ ಮಾಡುತ್ತವೆ. ಇವರ ಕವನಗಳು ಕೇವಲ ಪುಸ್ತಕಗಳಿಗೆ ಮಾತ್ರ ಸೀಮಿತವಾಗಲಿಲ್ಲ, ಜನರು ಹಾಡಿ ಕುಣಿದರು. ದೇಶದ ರಾಜಕೀಯ, ಸಾಮಾಜಿಕ ಸಮಸ್ಯೆಗಳನ್ನು ಹಾಡಿನ ಮುಖಾಂತರ ಜನರನ್ನು ಎಚ್ಚರಗೊಳಿಸಿದರು. ಮುಖ್ಯವಾಗಿ ಜನರಲ್ಲಿ ಹೋರಾಟದ ಮನೋಭಾವನೆ ಮೂಡಿಸುವ ದಿಗಂಬರ ಕಾವ್ಯ ರಾಜಕೀಯ ನಾಯಕರುಗಳು, ಉಳ್ಳವರನ್ನು, ಮಠಾದೀಶರುಗಳನ್ನು ಮುಂತಾದವರನ್ನು ಎಚ್ಚರಗೊಳ್ಳುವಂತೆ ಮಾಡಿತು.

ನಿಖಿಲೇಶ್ವರರು ಜನರನ್ನು ರಾಜಕೀಯ ಎಂಬ ಕೆಸರಿನಿಂದ ಹೊರಬರಬೇಕೆಂದು ಹೇಳುತ್ತಾರೆ. ಐದು ವರ್ಷಗಳಿಗೊಮ್ಮೆ ಬರುವ ಓಟಿಗಾಗಿ ನಾಯಕರುಗಳ ಮೋಸದ ಆಶ್ವಾಸನೆಗಳು, ಗೋಸುಂಬೆಯಂತೆ ಬಣ್ಣ ಬದಲಾಯಿಸಿ ಮಾತನಾಡುವ, ರಾಜಕೀಯ ಧುರೀಣರಿಂದ ಸಾಮಾನ್ಯ ಜನರು ದೂರವಿರಲು, ಅವರ ಗುಲಾಮತನದಿಂದ ಮುಕ್ತಿ ಪಡೆಯಲು, ಬಲಿಪಶುಗಳು ಆಗದಂತೆ ಸ್ವಾಭಿಮಾನತ್ವವನ್ನು ಬೆಳೆಸಿಕೊಳ್ಳಲು ನಿಖಿಲೇಶ್ವರರು ಒಂದು ಕಡೆ ಕರೆ ನೀಡುತ್ತಾರೆ. ನಿಖಿಲೇಶ್ವರರು ಸಮಾಜದ ಬಗೆಗೆ ಕಳಕಳಿವುಳ್ಳವರು. ಅವರ ಏಳಿಗೆಗಾಗಿ ವಿಚಾರ ಮಾಡುವಂಥವರು. ದುಡಿವವರ್ಗ, ದೀನರ ಒಟ್ಟಾರೆ ಸಾಮಾನ್ಯ ಜನರ ಬಗ್ಗೆ ತುಂಬ ಕಾಳಜಿವುಳ್ಳ ಕ್ರಾಂತಿಕಾರಿ ಕವಿಯಾದ ಇವರು ಮೂಢ ನಂಬಿಕೆಗಳನ್ನು ಮೌಢ್ಯಗಳನ್ನು ತಿರಸ್ಕರಿಸಿ ವಾಸ್ತವ ಜೀವನನ್ನು ನಡೆಸುವಂತೆ ಜನರೆಡೆಗೆ ಅವರ ಆಲೋಚನೆಗಳನ್ನು ಹರಿಯಬಿಡುತ್ತಾರೆ.

**ಮೂಢನಂಬಿಕೆ**

ಭಾರತವು ಧರ್ಮ ಪ್ರಧಾನವಾಗಿ ಬೆಳೆದು ಬಂದಂತಹ ದೇಶ. ಈ ದೇಶದ ಸಮಾಜದಲ್ಲಿ ಕೆಲವರು ಧರ್ಮಗುರುಗಳು, ಮಠಾಧೀಶರುಗಳ ಹೆಸರಿನಲ್ಲಿ ವಂಚನೆ, ಡೊಂಬಿತನ, ನಡೆಸುತ್ತಿದ್ದಾರೆ. ಇವರು ಈ ದೇಶಕ್ಕೆ ಅಂಟಿದ ಶಾಪ, ಸಂಪತ್ತು ವೈಭವಗಳಿಂದ ರಾಜರಂತೆ ಶೋಭಿಸುವ ಇವರು ಕಳ್ಳವೇಷಧಾರಿಗಳು. ಈ ದೇಶಕ್ಕೆ ಪ್ರಜಾರಾಜ್ಯ ಬಂದರೂ ಸಹ ಇಲ್ಲಿನ ಜನರಲ್ಲಿ, ಇಂಥ ವ್ಯಕ್ತಿಗಳ ಬಗೆಗೆ ತುಂಬ ಭಕ್ತಿಭಾವದಿಂದ ನಡೆದುಕೊಳ್ಳುತ್ತಾರೆ. ಸ್ವತಂತ್ರ ಭಾರತದ ಜನರಲ್ಲಿ ಸಂಪ್ರದಾಯ ಮೌಢ್ಯ ಇನ್ನೂ ಮುಂದುವರಿಯುವುದನ್ನು ತೋರಿಸುತ್ತದೆ. ಇಂಥ ಮೌಢ್ಯದಲ್ಲಿ, ಜನರ ಬದುಕು , ಅವರಲ್ಲಿ ಮನೆ ಮಾಡಿದ ಸಂಪ್ರದಾಯಗಳು ಹಾಗೂ ಜನರನ್ನು ಮೋಸಮಾಡುವ ಮಠಾಧೀಶರು, ಧರ್ಮಗುರುಗಳ ಬಗ್ಗೆ ವಿಡಂಬನಾತ್ಮಕವಾಗಿ ದಿಗಂಬರ ಕವಿಗಳು.

ಹೀಗೆ ಮೌಢ್ಯ, ಸಂಪ್ರದಾಯ, ಡೊಂಬಿಜಗದ್ಗುರುಗಳ ಬಗೆಗೆ ವಿಡಂಬನೆಯು ಚೆರಬಂಡರಾಜು ಅವರ ಕವನಗಳಲ್ಲಿ ಚೆನ್ನಾಗಿ ಮೂಡಿ ಬಂದಿದೆ. ಕಳ್ಳವೇಷದ ಸನ್ಯಾಸಿಗಳ ಅವರ ಆಟಾಟೋಪಗಳನ್ನು, ಚಲನವಲನಗಳನ್ನು ಕವಿಯು ಬಯಲಿಗೆಳೆದಿದ್ದಾರೆ. ದೇಶದಲ್ಲೆಲ್ಲಾ ಕಡೆ

ನಿರ್ವೀರ್ಯತೆಯನ್ನು ಸ್ಥಾಪಿಸುತ್ತಾ ಭಯಂಕರ ಕುಷ್ಠ ಸಂಸ್ಕೃತಿಯನ್ನು, ಈ ಕಪಟ ಸನ್ಯಾಸಿಗಳು ಪ್ರಚಾರ ಪಡಿಸುತ್ತಿದ್ದಾರೆ. ಢಾಂಬಿಕತನದ ಮಠಾಧೀಶರನ್ನು ಖಂಡಿಸುತ್ತಾ ಜನರಲ್ಲಿ ಅಂಧಕಾರ, ಮೌಢ್ಯತನದಿಂದ ದೇಶ ಎತ್ತ ಸಾಗುತ್ತಿದೆ ಎಂದು ಪ್ರಶ್ನಿಸುತ್ತಾರೆ. ಈ ದೇಶದ ಸ್ಥಿತಿಯ ಬಗೆಗೆ ಕವಿಯು ಕಳವಳ ಪಡುತ್ತಾ, ಸನ್ಯಾಸಿಗಳ ಮೋಜಿನಾಟ, ದೇವರು ದೈವವೆಂದು ಹೇಳುತ್ತಾ ಜನರನ್ನು ಅದಃಪತನಕ್ಕೆ ತಳ್ಳುವವರು. ಹಾಗೂ ಅವರ ಸಂಪ್ರದಾಯಗಳಿಂದ ಈ ದೇಶವನ್ನು ಸಹ ಅದಃಪತನಕ್ಕೆ ಹೋಗುವುದಕ್ಕೆ ಆಸ್ಪದ ನೀಡುವರು. ಇಂಥವರನ್ನು ಚೆರಬಂಡರಾಜು ಅವರು ಖಂಡಿಸಿ, ಜನರಿಗೆ ವಾಸ್ತವತೆಯಲ್ಲಿ ಬದುಕಲು ಸೂಚನೆ ನೀಡುತ್ತಾರೆ.

ನಗ್ನಮುನಿ ಅವರೂ ಸಹ ಸಂಪ್ರದಾಯ, ಮೂಢನಂಬಿಕೆಯನ್ನು ಖಂಡಿಸುತ್ತಾರೆ. ಯಾವುದೇ ಕಾಲದಲ್ಲಿ ಕೆಲವರ ಅನುಕೂಲಕ್ಕಾಗಿ,ಧಾರ್ಮಿಕ ನೀತಿ ಸಂಪ್ರದಾಯಗಳು ಬಳಕೆಗೆ ಬಂದಂತಹ ರಾಜರುಗಳು ಹಳೆಯ ಸಂಪ್ರದಾಯಗಳನ್ನು ಪೋಷಿಸಿದರು. ಇಂಥ ಸಂಪ್ರದಾಯ, ಮೂಢ ನಂಬಿಕೆಗಳ ವಿರುದ್ಧ ಪ್ರತಿಭಟಿಸುತ್ತಾ ಜನರನ್ನು ಎಚ್ಚರಗೊಳಿಸುತ್ತಾ ದೇಶದಲ್ಲಿ ಹೊಸ ಸಮಾಜದ ನಿರ್ಮಾಣ ಮಾಡಬೇಕೆಂದು ಪಣ ತೊಟ್ಟರು. ಹಳೆಯ ಸಂಪ್ರದಾಯಗಳು, ಮೂಢ ನಂಬಿಕೆಗಳು ಸಂಪೂರ್ಣವಾಗಿ ಹೋಗಬೇಕೆಂದು ಜನರಿಗೆ ಎಚ್ಚರಿಕೆ ನೀಡುತ್ತಾ, ಇಂಥ ಎಲ್ಲಾ ಮೌಢ್ಯಗಳನ್ನು ತಿರಸ್ಕರಿಸಬೇಕೆಂದು ಹೇಳುತ್ತಾರೆ.

**ಶೋಷಣೆ**

ಶೋಷಣೆಗೆ ಎಲ್ಲಾ ವರ್ಗದವರು ಒಳಪಡುತ್ತಾರೆ. ಶೋಷಣೆಗೊಳಪಟ್ಟವರು ಇವರೇ ಎಂದು ಖಡಾಖಂಡಿತವಾಗಿ ಹೇಳಲು ಸಾಧ್ಯವಿಲ್ಲ. ಏಕೆಂದರೆ ಒಬ್ಬರು ಇನ್ನೊಬ್ಬರನ್ನು ಶೋಷಣೆಗೊಳಪಡಿಸುತ್ತಾರೆ. ದುಡಿವವರ್ಗ, ದಲಿತ, ವೇಶ್ಯೆ, ರೋಗಿಷ್ಠ, ಭಿಕ್ಷುಕ, ಹುಚ್ಚರು, ಸ್ತ್ರೀಯರು, ಮುಂತಾದವರು ಶೋಷಣೆಗೆ ಒಳಪಟ್ಟವರು. ದಿಗಂಬರ ಕವಿಗಳು ಇಂಥವರ ನೋವು ನಲಿವುಗಳನ್ನು ಕವನಗಳಲ್ಲಿ ತೆರೆದಿಟ್ಟರು. ದಿಗಂಬರ ಕವಿಗಳು ಅವರ ಕವನಗಳ ಮೂಲಕ ಶೋಷಣೆಗಳನ್ನು ಬಯಲುಗೊಳಿಸಿ ಶೋಷಕರ ದುಷ್ಟನೀತಿಯನ್ನು ಅವರು ಮಾಡುವ ಶೋಷಣೆಯನ್ನು ಹೊರಗೆಳೆದು ಜನರಲ್ಲಿ ಪ್ರಜ್ಞೆ ಮೂಡಿಸಿದರು. ಹೀಗೆ ದಿಗಂಬರ ಕವಿಗಳು ಸಮಾಜದ ಹೊಣೆಗಾರಿಕೆಯನ್ನು ಜವಾಬ್ದಾರಿಯುತವಾಗಿ ಪಡೆದುಕೊಂಡು ನೂತನ ಸಮಾಜ ನಿರ್ಮಾಣಕ್ಕಾಗಿ ತಮ್ಮನ್ನು ತಾವು ಅರ್ಪಿಸಿಕೊಂಡರು.

ದೇಶದ, ಸಮಾಜದ ಮತ್ತು ವ್ಯಕ್ತಿಯ ಶುದ್ಧೀಕರಣವೇ ಇವರ ಕವನಗಳ ಮುಖ್ಯ ಆಶಯಗಳು. ಸಮಾಜದ ಹೊಲಸನ್ನು ಹೊರಗೆಳೆದು ನೂತನ ಸಮಾಜವನ್ನು ನಿರ್ಮಿಸುವುದು ಇವರ ಗುರಿ. ದಿಗಂಬರ ಕವಿಗಳ ಮಾನಸಿಕ- ಸ್ಥೈರ್ಯ, ಅವರಲ್ಲಿ ಇರುವ ಕಿಚ್ಚು, ಆವೇಶ, ಆಕ್ರಂದನ, ಕಾವ್ಯದ ಸಿಂಹಗರ್ಜನೆ ಮುಂತಾದವು ಮುಂದಿನ ಪೀಳಿಗೆಗಾಗಿ ಸ್ಫೂರ್ತಿ ನೀಡಿದವು. ನಗ್ನ ಮುನಿಯವರು ಶೋಷಣೆಯು ಯಾವ ರೀತಿ ನಡೆಯುತ್ತದೆಂದು ಹೇಳಿ, ಶೋಷಕರನ್ನು

ದೇವರುಗಳೆಂದು ನಂಬಿದ ಜನರು ಅವರು ಅನುಭವಿಸುವ ಯಾತನೆ ಶೋಷಣೆಕ್ಕೊಳಪಟ್ಟವರ ನೋವು- ನಲಿವುಗಳನ್ನು ವ್ಯಕ್ತ ಮಾಡಿದ್ದಾರೆ. ಇವರು ಮುಖ್ಯವಾಗಿ ಶೋಷಿತ ವರ್ಗವು ಪ್ರತಿಭಟನೆ ಮನೋಭಾವ ಬೆಳೆಸಿಕೊಳ್ಳಬೇಕೆಂದು ಅಪೇಕ್ಷಿಸುತ್ತಾರೆ. ಶೋಷಿತ ವರ್ಗವು ಪ್ರತಿಭಟಿಸದೇ ಇದ್ದರೆ, ಅವರ ಬದುಕನ್ನೇ ನಾಶ ಮಾಡುತ್ತಾರೆ. ಹಾಗಾಗಿ ದುಷ್ಟ ವ್ಯಕ್ತಿಗಳ ವಿರುದ್ಧ ಪ್ರತಿಭಟಿಸಬೇಕೆಂಬುದೇ ಕವಿಗಳ ಆಶಯ. ಒಟ್ಟಾರೆ ಕವಿಗಳಿಗೆ ಸಮಾಜದ ಶೋಷಿತ ವರ್ಗದ ಪರ ನಿಲುವು ಪಡೆದು ಅವರ ಶ್ರೇಯಸ್ಸಿಗಾಗಿ ಸದಾ ಪ್ರಯತ್ನಿಸುವ ಮನೋಭಾವವಿದೆ. ಈ ಕವಿಗಳು ಮಾನವೀಯತೆಗೆ ಹೆಚ್ಚಿನ ಮನ್ನಣೆ ಕೊಡುವಂತವರು ಹಾಗಾಗಿಯೇ ಇವರು ದಿಗಂಬರ ಕವಿಗಳು.

ಜ್ವಾಲಾಮುಖಿ ಅವರು ತನ್ನ ಕವನದಲ್ಲಿ ದೇಶದ ಸ್ಥಿತಿಗತಿ ಮುಖ್ಯವಾಗಿ ಜನರ ಶೋಷಣೆಯ ಸ್ಥಿತಿಗತಿಯನ್ನು ಚಿತ್ರಿಸಿದ್ದಾರೆ. ಇಲ್ಲಿನ ಸಾಮಾನ್ಯ ಜನರು ಸ್ವಾತಂತ್ರ್ಯ ಬಂದರೂ ಸಹ ಗುಲಾಮತನದಿಂದ ಹೊರಗೆ ಬರದೆ, ಗರ್ಭಧರಿಸಿ ಹೆರಿಗೆಯಾಗದೆ ಪಡುವ ಯಾತನೆಯಂತೆ ಶೋಷಣೆಗೆ ಒಳಗಾಗಿ ನೋವನ್ನು ಅನುಭವಿಸುತ್ತಿದ್ದಾರೆ. ಇಲ್ಲಿನ ಜನರ ಬದುಕು ಅರ್ಥವಿಲ್ಲದ್ದು, ಇವರ ಬದುಕು ಜೀವಂತ ಶವಗಳು ಇದ್ದಂತೆ ಎಂದು ಕವಿಗಳು ಹೇಳುತ್ತಾರೆ. ಈ ಎಲ್ಲಾ ಸಂಕೋಲೆಗಳಿಂದ ಹೊರಬರಬೇಕೆಂಬುದು ಕವಿಗಳ ಮುಖ್ಯ ಆಶಯ. ಚೆರಬಂಡರಾಜು ಅವರು ಶೋಷಿತವರ್ಗ ಬಗ್ಗೆ ಹೇಳುತ್ತಾ ಜನರಿಗೆ ಎಚ್ಚರಿಗೆ ಗಂಟೆ ನೀಡುತ್ತಾರೆ. ನಿನ್ನ ಹೀನ ಬದುಕಿನಿಂದ ಹೊರಬರಲು ಸೂಚಿಸಿ ನಿನಗಂಟಿದ ಶಾಪದಿಂದ ಮುಕ್ತಿ ಪಡೆದು ಹೊರಗೆ ಬಾ , ರಾಜಕೀಯವೆಂಬ ಕೆಸರಿನಲ್ಲಿ ಬಿದ್ದು ಒದ್ದಾಡುವ ಬದಲು ಒಮ್ಮೆ ನಿನ್ನನ್ನು ನೀನು ನೋಡಿಕೋ. ನಿಮ್ಮನ್ನು ಬಂಧಿಸಿದ ಸಂಕೋಲೆಗಳಿಂದ ಬಿಡಿಸಿಕೊಂಡು ಬಂದು ಮಾನವನಾಗಿ ಜೀವನ ನಡೆಸಲು ಜನರಿಗೆ ಕರೆ ಕೊಡುತ್ತಾರೆ.

ಇನ್ನೂ ಶೋಷಣೆಕ್ಕೊಳಪಟ್ಟವರನ್ನು ನೋಡಿ ಮನುಷ್ಯನಾಗಿ ಸಮಾಜದಲ್ಲಿ ಬಾಳಬೇಕೆಂದು ಹೇಳುತ್ತಾರೆ. ಮಾನವೀಯ ಮೌಲ್ಯಗಳಿಗೆ ಹೆಚ್ಚಿನ ಮನ್ನಣೆ ನೀಡುತ್ತಾ ರಾಜಕೀಯ, ಆರ್ತನಾದದಿಂದ ಹೊರಬಂದು, ಮಾನವನಾಗಿ ಬಾಳಬೇಕೆಂಬ ಆಶಯ ಬೈರವಯ್ಯ ಕವಿಗಳದು. ನಿಖಿಲೇಶ್ವರ ಅವರು ಇಂದಿನ ಸಾಮಾಜಿಕ ಪರಿಸ್ಥಿತಿ, ಸಮಾಜದಲ್ಲಿ ಜೀವಿಸುವ ಸಾಮಾನ್ಯ ಜನರ, ಶೋಷಿತ ಜನರ ಚಿತ್ರಣವನ್ನು ನೀಡಿದ್ದಾರೆ. ಶೋಷಕ ವರ್ಗವನ್ನು ಖಂಡಿಸಿ, ಶೋಷಿತವರ್ಗವು ಉರಿಯುತ್ತಿರುವ ಮೊಬಂತ್ತಿ ತನ್ನನ್ನು ತಾನು ಸುಟ್ಟುಕೊಂಡು ಪರರಿಗೆ ಬೆಳಕು ನೀಡುವ ಹಾಗೆ ಶೋಷಿತ ವರ್ಗ ಪರರಿಗೆ ಬೆಳಕು ನೀಡುವಂಥವರು. ಶೋಷಕವರ್ಗವು ಶ್ರಮವರ್ಗದ ರಕ್ತವನ್ನು ಹೀರುವ ತಗಣೆಗಳೆಂದು ಖಂಡಿಸಿ, ಇಡೀ ಸಮಾಜದ ವ್ಯವಸ್ಥೆಯ ಬಗ್ಗೆ ಕಳಕಳಿಯನ್ನು ವ್ಯಕ್ತಪಡಿಸಿದ್ದಾರೆ. 'ಕೆಲವು ಕೋಟೀಶ್ವರರ ಸಾರಾಯಿ ಗ್ಲಾಸುಗಳಲ್ಲಿ ಕೋಟಿಗಟ್ಟಲೇ ಸಾಮಾನ್ಯ ಜನರ ಮಂಜುಗಡ್ಡೆಗಳು' ಎಂಬ ನಿಖಿಲೇಶ್ವರರ ಈ ವಿಚಾರಗಳು ಧನಿಕರ, ಉಳ್ಳವರ, ವೈಭವಯುತವಾದ ವ್ಯವಸ್ಥೆಗೆ ಯಾರು ಕಾರಣ ಎಂಬುದಕ್ಕೆ 'ಶ್ರಮ ಜೀವಿಗಳೇ ಕಾರಣ ಎಂದು

ಕವಿಗಳು ಹೇಳುತ್ತಾರೆ, ಇಂಥ ಶ್ರಮಜೀವಿಗಳನ್ನು ಶೋಷಿಸುವ ವಾಸ್ತವತೆಯನ್ನು ಅವರ ಸಮಾಜದ ಸ್ಥಿತಿಗತಿಯ ಮೂಲಕ ನೋಡಬಹುದೆಂದು ಹೇಳಿದ್ದಾರೆ.

**ಕಾವ್ಯ ಭಾಷೆ**

ಭೈರವಯ್ಯ ಅವರು ಜನರ ಅಸಹ್ಯ ಬದುಕನ್ನು ಕಂಡು ಹೇಸಿ ಅವರು ಬದುಕುವ ರೀತಿಯನ್ನು ಕಂಡು ಮರುಕಪಡುತ್ತಾರೆ. ಮನುಷ್ಯನು ತನ್ನ ಸ್ಥಿತಿಯನ್ನು ತಾನು ಅರಿಯಲಾರನು ತನ್ನ ಮೇಲೆ ಎಷ್ಟೇ ಪೈಶಾಚಿಕತನ ಹೇರಿದರೂ ಸಹ ಹಾಗೆ ಅನುಭವಿಸುತ್ತಾನೆ. ಈ ನರಸತ್ತ ಜನರ ಬಗ್ಗೆ ಕವಿಗಳು ಆಕ್ರೋಶ ವ್ಯಕ್ತಪಡಿಸುತ್ತಾರೆ. ನಿನ್ನ ಜೀವನದ ಮೇಲೆ, ನಿನ್ನ ಹೆಂಡತಿಯ ಮೇಲೆ ಭಯಂಕರ ಪೈಶಾಚಿಕ, ರತಿಕ್ರೀಡೆ ನಡೆಸುತ್ತಿರುವಾಗ ಮೂಕರಂತೆ ಬಾಯಿ ತೆರೆದು ನೀತಿ ಭೋಧನೆ ಮಾಡುತ್ತಾರೆಂದು ಮಾರ್ಮಿಕವಾಗಿ ಹೇಳುವುದನ್ನು ಕವನಗಳಲ್ಲಿ ಕಾಣಬಹುದು. ಈ ಕವಿಗಳಲ್ಲಿರುವ ಕ್ರಾಂತಿಯ ಮನೋಭಾವನೆ ಆಕ್ರೋಶ, ಆವೇಶ, ಕಿಚ್ಚನ್ನು ಸಭ್ಯ ಪದಗಳಿಂದ ಹೇಳಲು ಬರುವುದಿಲ್ಲ. ವಾಸ್ತವದ ಕೊಳಚೆ ಸಮಾಜ, ರಾಜಕೀಯದ ವಿಡಂಬನೆಯನ್ನು ಅಸಭ್ಯ ಪದಗಳಿಂದ ವರ್ಣಿಸಿದರೆ ಮಾತ್ರ ಅದಕ್ಕೆ ಒಂದು ಕಳೆ ಬರುತ್ತದೆ. ಏಕೆಂದರೆ ಈ ಕವಿಗಳು ನೇರವಾಗಿ ಜನರ ಮನೋಭಾವಗಳಿಗೆ ತಕ್ಕಂತೆ ಸ್ಪಂದಿಸಿ. ಸಮಾಜದ ಸ್ಥಿತಿಯನ್ನು ನೋಡಿ ಇಂದಿನ ವಾಸ್ತವತೆಯ ನೆಲೆಯಲ್ಲಿ ಅವರ ವಿಚಾರಗಳನ್ನು ಹೊರಹೊಮ್ಮಿಸಿದ್ದಾರೆ. ಭೈರವಯ್ಯ ಅವರು ಜನರ ಅಸಹಾಯಕತೆಯನ್ನು ನೋಡಿ ಮರುಕ ಪಟ್ಟು ಜನರನ್ನು ಕುರಿತು ' ಯಾಕ್ರಲ್ಲೇ' ಈ ಗಾಣದೆತ್ತಿನ ಜೀವನ ' ನಿಮ್ಮ ಬದುಕನ್ನು ಮಾಡಲಾಗದ ಹೆಳವರು' ಎಂದು ಇಂಥ ಜನರನ್ನು ಗಾಣದ ಎತ್ತಿಗೆ ಹೋಲಿಸಿ, ಸುಮ್ಮನೆ ಸುತ್ತು ಹಾಕುವ ಎತ್ತಿನಂತೆ, ಕುಂಟರ ಜೀವನದಂತೆ ಎಂದು ವಾಸ್ತವ ಸಮಾಜದ ಜನರ ಸ್ಥಿತಿಯನ್ನು ಕವಿಗಳು ಹೇಳುತ್ತಾರೆ.

ನಗ್ನಮುನಿಯವರು ಕ್ಷಮಿಸುವ ಗುಣಗಳನ್ನು ಹೊಂದಿರುವ ಜನರನ್ನು ಖಂಡಿಸುತ್ತಾರೆ. ಇಂದಿನ ಯುವ ಜನಾಂಗವು ಅವರ ಮೇಲೆ ಅನ್ಯಾಯ, ಅಕ್ರಮಗಳು, ಮೋಸ, ವಂಚನೆ ನಡೆದರೂ ಸಹ ಅಸಹಾಯಕರಾಗಿ ಇರುವುದನ್ನು ಕಂಡು, ಇಂಥ 'ಯುವ ಪೀಳಿಗೆ'ಯನ್ನು ಅಡಿಗೆ ಮನೆಯ ಮಸಿಪಾತ್ರೆಗೆ ಹೋಲಿಸುತ್ತ ಅವರು ಬದುಕುತ್ತಿರುವ ರೀತಿಯನ್ನು ಕಂಡು ಅವರನ್ನು ಎಂದೆಂದಿಗೂ ಕ್ಷಮಿಸಲು ಸಾಧ್ಯವಿಲ್ಲವೆಂದು ಹೇಳುತ್ತಾರೆ. ಈ ಯುವ ಪೀಳಿಗೆಗೆ ಅವರ ಮೇಲೆ ಆಗುವ ಅನ್ಯಯದ ವಿರುದ್ಧ ಪ್ರತಿಭಟಿಸಲು ಕವಿಯು ಹುರಿದುಂಬಿಸುತ್ತಾರೆ.

ನಗ್ನಮುನಿಯ ಕವನಗಳಲ್ಲಿ ಸಹ ಅಶ್ಲೀಲ ಪದ ಬಳಕೆ ಕಂಡು ಬರುತ್ತದೆ. ಎಲ್ಲ ಕವಿಗಳಂತೆ ಇವರು ಸಮಾಜದ, ರಾಜಕೀಯದ ದುರ್ಗಂಧವನ್ನು ವರ್ಣಿಸಲು ಇಂಥ ಅಸಭ್ಯ ಪದಗಳನ್ನು ಬಳಸಿದರು. ಇವರಲ್ಲಿ ಆವರಿಸಿರುವ ಕ್ರಾಂತಿಕಾರಿ ವಿಚಾರಗಳು ಆವೇಶಗಳು ಎಲ್ಲವೂ ಜನರಿಗಾಗಿ , ಸಮಾಜಕ್ಕಾಗಿ ಮನುಷ್ಯನ ಒಳಿತಿಗಾಗಿ, ಭೈರವಯ್ಯ ಅವರು ಮಾನವನ ಮೌಲ್ಯಗಳಿಗಾಗಿ ಹೆಚ್ಚು ಒತ್ತು ಕೊಟ್ಟಿದ್ದಾರೆ. ಮನುಷ್ಯನನ್ನು ಮನುಷ್ಯನೆಂದು ಗುರುತಿಸಿ ಮನುಷ್ಯನಿಗಾಗಿ ಬದುಕುವ

ಮಾನವನೇ ಮಹಾದೇವನು, ಅಂಥ ವ್ಯಕ್ತಿತ್ವವುಳ್ಳವರೇ ದೇವರು, ನಡೆದಾಡುವ ದೇವರು. ಪ್ರತಿಯೊಬ್ಬರಲ್ಲೂ ದೇವರಿದ್ದಾನೆ. ಅಂದರೆ ದೇವರು, ಯಾವ ರೂಪದಲ್ಲಿ ಇದ್ದಾನೆಂದು ತಿಳಿಸುತ್ತಾ ಸಾಮಾನ್ಯವಾಗಿ ಮಾನವನಿಗಾಗಿ ಮರುಗುವ ಅವರಿಗಾಗಿ ಜೀವನ ತುಡಿಯುವ ಹೃದಯ ವೈಶಾಲ್ಯವುಳ್ಳವರಲ್ಲೆ ದೇವರಿದ್ದಾನೆ. ಅಂಥವರನ್ನು ಪ್ರತಿಯೊಬ್ಬರು ಪ್ರೀತಿಸಬೇಕೆಂದು ಕವಿಗಳ ಆಶಯ . ಅರಿಷಡ್ವರ್ಗಗಳಿಗೆ ದಾಸರಾದ ಸ್ವಾಮಿಗಳನ್ನು ಕನ್ಯೆಯರಿಂದ ಏಕಾಂತ ಸೇವೆ ಕೈಗೊಳ್ಳುವ ಕಪಟರು. ಇವರು ಹಸ್ತ ಪ್ರಯೋಗದಿಂದ ಹಠಪ್ರಯೋಗ ಸಾಧಿಸಿದವರು. ಚಟಕ್ಕಾಗಿ, ಗ್ಲಾಮರ್‌ಗಾಗಿ ಮಾನಮಾರಿಕೊಳ್ಳುವ, ರಹಸ್ಯವಾಗಿ ಬೆನ್ನಲ್ಲಿ ಚೂರಿ ಇರಿಯುವ ದ್ರೋಹಿಗಳು. ಇವರಾರೂ ದೇವರಲ್ಲ ಎಂದಿಗೂ ಅಂಥವರನ್ನು ಕ್ಷಮಿಸುವುದಿಲ್ಲ. ಮಾನವತೆಯನ್ನು ಅಳವಡಿಸಿಕೊಂಡಿರುವ ನಿಜ ಮಾನವ, ಅವನೇ ನಿಜದೇವರೆಂಬುದು ಕವಿಗಳ ಅಭಿಪ್ರಾಯವಾಗಿದೆ.

ಚೆರಬಂಡರಾಜು ಅವರು ಮಾನವ ಪ್ರಪಂಚದ ಬಗ್ಗೆ ಮನುಷ್ಯನ ಗುಣಾವಗುಣಗಳ ಬಗ್ಗೆ ಹೇಳುತ್ತಾ, ವಂಚನೆಯ ಸಂಕುಚಿತ ಬದುಕಿನಲ್ಲಿ ಜಾತಿಮತಗಳ ತೊಳಲಾಟದಲ್ಲಿ ಸಿಕ್ಕು ಕಾಲಕಾಲಾಂತರಗಳಿಂದ ತೊಳಲಾಡುತ್ತಿರುವವರನ್ನು ಮಾನವತ್ವಕ್ಕೆ ಕರೆತರಬೇಕೆಂದು ಹೇಳಿದ್ದಾರೆ. ಹಾಗೆ ಅವರ ಜೀವನದ ಮೌಲ್ಯಗಳ ಬಗ್ಗೆ ಕಳವಳ ಪಡುತ್ತಾ ಅಂಥವರ ಶ್ರೇಯೋಭಿವೃದ್ಧಿಗಾಗಿ ಚೆರಬಂಡರಾಜು ಅವರು ತುಂಬಾ ಕಾಳಜಿ ವಹಿಸುವದನ್ನು ಕಾಣಬಹುದು. ಜ್ವಾಲಾಮುಖಿಯು ಅವರು ಜನರ ಸಮಸ್ಯೆಗಳನ್ನು ಮಾನವನ ತುಡಿತಗಳನ್ನು ಬಿಂಬಿಸುತ್ತ, ಶತಶತಮಾನಗಳಿಂದ ಸಹಿಸಿಕೊಳ್ಳುತ್ತ ಬಂದ ಇವರನ್ನು ಅವರ ಜೀವನದ ಬದುಕು ಸುಧಾರಿಸಲು ಅವರು ಆವರಿಸಿಕೊಂಡಿರುವ ಕತ್ತಲೆಯ ಬದುಕಿನಿಂದ ಹೊರಬರಬೇಕೆಂದು ಹೇಳುತ್ತಾರೆ, ಇನ್ನೂ ಮುಂದಾದರೂ ಅವರ ಜೀವನ ರೂಪಿಸಿಕೊಳ್ಳಲು ಮುಂದೆ ಬರಬೇಕೆಂದು ಕವಿಗಳು ಅವರ ಜೀವನ ವ್ಯವಸ್ಥೆ ಕಂಡು ಮರುಕ ಪಡುತ್ತಾರೆ.

ದಿಗಂಬರ ಕವಿಗಳು ವ್ಯಕ್ತಿ ತನ್ನ ಇಚ್ಛೆಯಂತೆ ನಡೆದುಕೊಳ್ಳುವ ವಿಚಾರಗಳಿಗೆ ಪ್ರಾಮುಖ್ಯತೆಯನ್ನು ಕೊಟ್ಟಿರುತ್ತಾರೆ. ಸಮಾಜದಲ್ಲಿ ಒಂದು ಭಾಗವಾದ ಆ ವ್ಯಕ್ತಿ ತನ್ನ ಇಚ್ಛೆಯನ್ನು ವ್ಯಕ್ತಪಡಿಸುವುದು ಅವಶ್ಯವೆಂದು ಹೇಳುತ್ತಾರೆ. ಕುಷ್ಠ ವ್ಯವಸ್ಥೆಯ ಸಮಾಜವನ್ನು ಬಲ ಪ್ರಯೋಗ ಮಾಡಿಯಾದರೂ ದುಷ್ಟತನ, ದುರ್ನಡತೆ, ಸಮಾಜ, ಘಾತುಕರನ್ನು ನಾಶಮಾಡಿ ನೂತನ ಸಮಾಜ ಸ್ಥಾಪಿಸಬೇಕೆಂಬುದು ನಿಖಿಲೇಶ್ವರರ ಆಶಯ.

ನಗರ ಜೀವನದ ವ್ಯವಸ್ಥೆಯ ಬಗ್ಗೆ ದಿಗಂಬರ ಕವಿಗಳು ಆಕ್ರೋಶ ವ್ಯಕ್ತಪಡಿಸಿದ್ದಾರೆ. ನಗರದಲ್ಲಿ ಸಾಮಾನ್ಯ ಜನರು ಪಡುವ ಯಾತನೆ ಅವರ ಸಮಸ್ಯೆಗಳ ಬಗ್ಗೆ ಕಳವಳಪಡುತ್ತಾರೆ. ದೂರದಿಂದ ನೋಡುವ ಕಣ್ಣಿಗೆ ಕಾಣುವ ನಗರವು ಕೆಂಪು ಗುಲಾಬಿ ಹೂವಿನಂತೆ ಕಂಡರೆ, ಹತ್ತಿರ ಹೋದರೆ ಅದರೊಳಗೆ ಕಾಣುವ ವಿವಿಧ ಯಾತನೆಗಳು, ಅಲ್ಲಿ ಬದುಕುವ ಜನರ ಬದುಕು

ಬದುಕೇ ಅಲ್ಲ ಎಂಬುದು ತಿಳಿಯುತ್ತಾರೆ. ಹಾಗೂ ಚಿಕ್ಕ ಚಿಕ್ಕ ಉದ್ಯೋಗವನ್ನು ಮಾಡುವ ಶ್ರಮಿಕನು ಪಡುವ ಯಾತನೆಗಳನ್ನು ಜ್ವಾಲಾಮುಖಿ ಹೃದಯಂಗವಾಗಿ ಚಿತ್ರಿಸಿದ್ದಾರೆ.

ದಿಗಂಬರ ಕವಿಗಳ ಅಂತರ್‌ರಾಷ್ಟ್ರೀಯ ಐಕ್ಯತೆ, ವಿಶ್ವ'ಶಾಂತಿಯನ್ನು ಬಯಸಿದರು. ಹಾಗಾಗಿ ಇವರ ಕವನಗಳಲ್ಲಿ ಅಂತರ್‌ರಾಷ್ಟ್ರೀಯ ರಾಜಕೀಯವನ್ನು ತೀವ್ರವಾಗಿ ವಿಮರ್ಶಿಸಿದ್ದಾರೆ. ಇವರ ತತ್ವಗಳಲ್ಲಿ ಪ್ರಪಂಚವೆಲ್ಲಾ ಒಂದೆ. ಮಾನವ ಕುಲವೆಲ್ಲವು ಒಂದೇ ಎನ್ನುವ ವಿಶ್ವ ಮಾನವತ್ವವನ್ನು ದಿಗಂಬರ ಕವಿಗಳಲ್ಲಿ ಕಾಣಬಹುದು. ಒಳ್ಳೆಯತನ, ಒಳ್ಳೆಯ ಮನಸ್ಸು, ಒಳ್ಳೆಯ ನಡವಳಿಕೆ ಇರಬೇಕೆಂಬುದು ದಿಗಂಬರ ಕವಿಗಳ ಅಭಿಪ್ರಾಯ. ಇವರು ದೇಶ ದೇಶಗಳಲ್ಲಿ ಅಣು ಯುದ್ಧವನ್ನು ಖಂಡಿಸಿ, ಅಣುವಿಜ್ಞಾನ, ಮಾನವ ಕುಲವೆಲ್ಲಾ ನಾಶವಾಗಲಿಕ್ಕೆ ಕಾರಣವಾಗಬಹುದೆಂದು ತಿಳಿಸುತ್ತಾರೆ. ಅಂಥ ವ್ಯವಸ್ಥೆಯ ವಿರುದ್ಧ ಅವರು ಅಭಿವ್ಯಕ್ತಿಸಿದ್ದಾರೆ. ದಿಗಂಬರ ಕವಿಗಳು ವಿಶ್ವಶಾಂತಿ ಸರ್ವಮಾನವ ಕಲ್ಯಾಣಕ್ಕಾಗಿ ಪೂರಕವಾದ ಆಶಯಗಳನ್ನು ಇರಿಸಿಕೊಂಡು ಕವನಗಳನ್ನು ರಚಿಸಿದ್ದಾರೆ.

ದಿಗಂಬರ ಕವಿಗಳಲ್ಲಿ ಇರುವ ಪ್ರಾಮಾಣಿಕತೆಯನ್ನು ಕಾಣಬಹುದು ಸಮಾಜದ ಬಗ್ಗೆ ಅವರಿಗೆ ಇದ್ದ ಕಳಕಳಿ, ಅವರಲ್ಲಿ ಇರುವ ಮನೋಭಾವನೆ ಎಂದರೆ ಸ್ವಚ್ಛವಾದ, ಪ್ರಾಮಾಣಿಕವಾದ ಸಮಾಜ ನಿರ್ಮಾಣವಾಗಬೇಕೆಂಬುದೇ ಆಗಿದೆ. ದೇಶದಲ್ಲಿ ಪ್ರಾಮಾಣಿಕವಾದ ಸಮಾಜ ನಿರ್ಮಾಣವಾಗಬೇಕೆಂಬುದೇ ಇವರ ಮುಖ್ಯ ಗುರಿಯಾಗಿತ್ತು. ಸಮಾಜದ ರಾಜಕೀಯ ಹೊಲಸನ್ನು ಹುಳುಕುಗಳನ್ನು ಹೊರತರಲು, ಮಾನವನ ಆತ್ಮವನ್ನು ಮುಚ್ಚಿದ ಶೋಷಣೆ ಎಂಬ ಸೋಗಿನ ಬಟ್ಟೆಯನ್ನು ಬಿಚ್ಚಲು ದಿಗಂಬರ ಕವಿಗಳು ಮಾನಸಿಕ ಮಡಿವಂತಿಕೆಯನ್ನು ಕಿತ್ತು ಹಾಕಿ, ಭಾಷೆಯ ಮಡಿವಂತಿಕೆಯನ್ನು ದಾಟಿ ಮುನ್ನಡೆದರು . ಅವರ ತೀವ್ರವಾದ ಚುರುಕುತನದ ಸಾಹಿತ್ಯ ಅಂದಿನ ತೆಲುಗು ಸಮಾಜಕ್ಕೆ, ಜನರಿಗೆ ಅವಶ್ಯಕತೆ ಇತ್ತು. ಹಾಗಾಗಿ ಅವರ ಕಾವ್ಯವನ್ನು ಅಂದಿನ ಜನ ಸಾಮಾನ್ಯರು ಮನಃ ಪೂರ್ವಕವಾಗಿ ಒಪ್ಪಿ ಓದಿದರು, ಹಾಡಿ ಕುಣಿದರು. ಹಾಗೆಯೇ ಜನರಲ್ಲಿ ಪ್ರಜ್ಞೆ ಮೂಡಿಸಿದರು. ಇವರ ಕೌಶಲ್ಯ ಮುಂದಿನ ಪೀಳಿಗೆಯ ಜನರಿಗೆ ಧೈರ್ಯ, ಸಾಹಸ ಮಾನಸಿಕವಾಗಿ ಅಭಿವ್ಯಕ್ತ ಮಾಡಲು ದಾರಿ ಮಾಡಿಕೊಟ್ಟಿತ್ತು. ಬಳಿಕ ಹುಟ್ಟಿದ ಪೈಗಂಬರ ಕವಿಗಳು[೧] ತಿರುಗುಬಡು ಕವಿಗಳು[೨] ಇತರ ಭಾಷೆಗಳ ಕವಿಗಳು ದಿಗಂಬರ ಕವಿಗಳಿಗೆ ಪ್ರಭಾವ ಬೀರಿದರು ಹಾಗೂ ಕನ್ನಡದ ದಲಿತ, ಬಂಡಾಯಕ್ಕೆ ತೆಲುಗಿನ ದಿಬಂಬರ ಕವಿಗಳೂ ಸ್ವಲ್ಪ ಮಟ್ಟಿಗೆ ಪ್ರೇರಣೆಯಾದರು.

**ಅಡಿಟಿಪ್ಪಣಿ**

೧. ಪೈಗಂಬರ ಕವಿಗಳು ದಿಗಂಬರ ಕವಿಗಳ ಪ್ರಭಾವದಿಂದ ಸುಗಮ್‌ಬಾಬು, ಕಿರಣ್‌ಬಾಬು, ದೇವಿಪ್ರಿಯ, ಕಮಲಾಕಾಂತ್, ಓಲ್ಗಾ ಎನ್ನುವ ಐವರು 'ಮುಗ ಚೈತನ್ಯಂ' ಎನ್ನುವ ಹೆಸರಿನಲ್ಲಿ ಎರಡು ಕವಿತಾ ಸಂಕಲನಗಳನ್ನು ಪ್ರಕಟಿಸಿದರು. ಕೆಟ್ಟು ಹೋದ ಸಮಾಜವನ್ನು ನಿರ್ಮಲ

ಸಮಾಜವಾಗಿ ನಿರ್ಮಿಸುವ ಉದ್ದೇಶದಿಂದ ಹೊರಬಂದವರಿವರು. ಇವರನ್ನು ಪೈಗಂಬರ ಕವಲು ಎನ್ನುವ ಹೆಸರಿನಿಂದ ಕರೆಯುವರು. (ಪ್ರೊ.ವೇಲಮಲ ಸಿಮ್ಮನ ತೆಲುಗು ಸಾಹಿತ್ಯ ವಿಮರ್ಶ ಸಿದ್ಧಾಂತಲು; ಪು.೪೯೪)

೨. ತಿರುಗುಬಡು ಕವುಲು; ಸಮಾಜದಲ್ಲಿ ಅನ್ಯಾಯಕ್ಕೆ ಗುರಿಯಾದವರು ಸಹಯೋಗ ಹೋರಾಟ ಮಾಡಲು 'ತಿರುಗುಬೀಳು ಕವಿಗಳು' ಎಂಬ ಹೆಸರಿನಲ್ಲಿ ಕಾವ್ಯ ರಚಿಸಿದರು. ಇವರು ನಿರ್ಮಲ ಸಮಾಜಕ್ಕಾಗಿ, ಹೊಸ ವ್ಯವಸ್ಥೆಗಾಗಿ ಸಮಾಜದಲ್ಲಿ ಶಾಂತಿ ನೆಲೆಸಬೇಕೆಂದು ಹತ್ತು ಮಂದಿ ಕವಿಗಳು ಒಟ್ಟುಗೂಡಿ ಕವಿತೆ ರಚಿಸಿದರು. ೧) ವರವರರಾವ್, ೨) ಅಶೋಕ, ೩) ಲೋಚನ , ೪)ಕಿಶನ್, ೫) ಎಕ್ಸ್-ರೇ, ೬) ಐ, ೭) ಸಂಜೀವ ರಾವ್, ೮) ಸುಧಾಕರ್, ೯) ಸುದರ್ಶನ, ೧೦) ಯಾದಗಿರಿರಾವ್ (ಪ್ರೊ.ವೇಲಮಲ ಸಿಮ್ಮನ:ತೆಲುಗು ಸಾಹಿತ್ಯ ವಿಮರ್ಶಸಿದ್ಧಾಂತಲು ಪು.೪೯೪)

■

## ಅಧ್ಯಾಯ - ೫
## ಸಮಾರೋಪ : ದಿಗಂಬರ ಕವಿಗಳ ಅನನ್ಯತೆ

ದಿಗಂಬರ ಕವಿಗಳು ಅವರ ಕಾವ್ಯಗಳಲ್ಲಿ ಮುಖ್ಯವಾಗಿ ರಾಜಕೀಯ, ಸಾಮಾಜಿಕ, ಆರ್ಥಿಕ, ಮತಧರ್ಮ ಮೊದಲಾದ ವಿಷಯಗಳನ್ನು ಹೆಚ್ಚಾಗಿ ದೃಷ್ಟಿಯನ್ನು ನೆಟ್ಟಿದ್ದಾರೆ. ರಾಜಕೀಯದಲ್ಲಿ ಇರುವ ದುಷ್ಟ ವ್ಯವಸ್ಥೆಯನ್ನು ರಾಜಕೀಯ ದುರ್ನಡತೆಗಳನ್ನು ವಿಮರ್ಶಿಸಿದ್ದಾರೆ. ರಾಜಕೀಯ ನಾಯಕರುಗಳನ್ನು ನೇರವಾಗಿ ಆಸಭ್ಯ ಪದಗಳಿಂದ ಬೈಯ್ದಿದ್ದಾರೆ. ಇಂಥ ನಾಯಕರನ್ನು ಕೊಜ್ಜ, ನಂಪುಂಸಕ, ಹಗಲು ದರೊಡೆಕೋರರು, ನೀಚರು, ಸುಳ್ಳುಗಾರರು ಎಂದು ಅನೇಕ ವಿಧದಲ್ಲಿ ಅವರನ್ನು ಹೀಯಾಳಿಸಿದ್ದಾರೆ. ಧನವು ಮನುಷ್ಯನನ್ನು ಆಟವಾಡಿಸುವ ರೀತಿಯನ್ನು ತೋರಿಸಿ, ರಾಜಕೀಯ ನಾಯಕರು, ಕಂಟ್ರಾಕ್ಟರುಗಳು, ಅಧಿಕಾರಿಗಳು, ಮುಂತಾದವರ ದ್ರೋಹಗಳನ್ನು ಗಮನಿಸಿ ಹೊರಗೆಳೆದಿದ್ದಾರೆ. ಹಣಕ್ಕಾಗಿ ಮೋಸ ವಂಚನೆಗಳನ್ನು ಕಂಡು ರೋಸಿ ಹೋದ ದಿಗಂಬರ ಕವಿಗಳು ಅವರ ನಿರ್ಮೂಲನೆಗಾಗಿ ಪಣತೊಟ್ಟಂತಹವರು.

ತೆಲುಗು ಸಾಹಿತ್ಯ ಪರಂಪರೆಯನ್ನು ಅವಲೋಕಿಸಿದಾಗ ಈ ದಿಗಂಬರ ಕವಿಗಳು ಕಾವ್ಯವನ್ನು ರಾಜರಿಗೆ ಮಾತ್ರ ಸೀಮಿತಗೊಳಿಸಿದ ಪ್ರಾಚೀನ ಕವಿಗಳ ಬಗ್ಗೆ ಮೆಚ್ಚಿಗೆಯಿಲ್ಲವೆಂದು ಹೇಳುತ್ತಾರೆ. ನನ್ನಯನ ಕಾವ್ಯವನ್ನು ಆವರು ಮೆಚ್ಚುವುದಿಲ್ಲ. ಹಾಗೆ ಸ್ತ್ರೀಯರ ಅಂಗಾಗಂಗ ವರ್ಣನೆಗಳನ್ನು ಮಾಡುವ ಭಾವ ಕವಿಗಳನ್ನು, ಸ್ತ್ರೀ, ನಪುಂಸಕ, ಕೊಜ್ಜಾ ಎಂದು ಜರಿದರು. ಲಾರಿಗಟ್ಟಲೇ ಪುಸ್ತಕಗಳನ್ನು, ಒಳ ಜಾತಿಮತಗಳನ್ನು ಎತ್ತಿ ಕಟ್ಟುವ ಕಾವ್ಯ ಜನರಿಗೆ ಉಪಯೋಗವಾಗುವುದಿಲ್ಲ ಎಂದು ದಿಗಂಬರ ಕವಿಗಳು ಅಂತಹ ಕವಿಗಳನ್ನು ನಿಂದಿಸಿದ್ದಾರೆ.

ತೆಲುಗು ಸಾಹಿತ್ಯ ಪ್ರಪಂಚದಲ್ಲೇ ಕಾವ್ಯ ಚಳುವಳಿಯೆಂದರೆ ದಿಗಂಬರ ಕಾವ್ಯ ಚಳುವಳಿ . ಈ ಕಾವ್ಯ ಚಳುವಳಿಯು ಆಂಧ್ರದ ಸಾಹಿತ್ಯದಲ್ಲಿ, ರಾಜಕೀಯದಲ್ಲಿ, ಸಾಮಾಜಿಕ ನೆಲೆಯಲ್ಲಿ ಆರ್ಥಿಕ ವ್ಯವಸ್ಥೆಯಲ್ಲಿ. ಮತಧರ್ಮದಲ್ಲಿ ಎಲ್ಲಾ ವಿವಿಧ ರಂಗದಲ್ಲಿ ಎಚ್ಚರಿಕೆಯ ಗಂಟೆಯನ್ನು ಬಾರಿಸಿದರು. ದಿಗಂಬರ ಕಾವ್ಯ ಚಳುವಳಿಯ ಬೆಂಬಲಿಗರು, ದಿಗಂಬರ ಕವಿಗಳು ಇಡೀ ಭಾರತೀಯ ಸಂಸ್ಕೃತಿಯನ್ನು ಸಂಪೂರ್ಣವಾಗಿ ಹೀಯಾಳಿಸಿ, ಓದುಬರಹ ಬಲ್ಲ ಪ್ರಜ್ಞಾವಂತರಿಗೆ ಆಘಾತವನ್ನುಂಟು ಮಾಡುವ ಇವರ ಕಾವ್ಯ ಶೈಲಿಯು ಹೊಸ ರೂಪವಾಗಿ ಕಂಡು ಬಂದಿತು.

ದೇಶದಲ್ಲಿ ನಡೆದ ಅರಾಜಕತೆ, ಮೋಸ ವಂಚನೆ, ವಿಡಂಬನೆ, ಸಾಮಾಜಿಕ ಸಮಸ್ಯೆಗಳು, ವಿಧ್ವಂಸಕತೆಗಳೇ ಜೀವಾಳವಾಗಿರುವ ಇವರ ಸಾಹಿತ್ಯದಲ್ಲಿ ಕಾವ್ಯಗುಣಗಳಿಗಿಂತ ರಾಜಕೀಯ ಅಂಶಗಳೇ ಹೆಚ್ಚಿನ ಮಟ್ಟದಲ್ಲಿ ಕಂಡು ಬಂದಿರುವುದನ್ನು ಕಾಣಬಹುದು.

ದಿಗಂಬರ ಕವಿಗಳು ಮುಖ್ಯವಾಗಿ ಅಂದಿನ ಸಮಾಜದಲ್ಲಿ ನೆಲೆನಿಂತ ಸಾಮಾಜಿಕ ಪರಿಸ್ಥಿತಿಗಳಿಂದ ಹೊಲಸು ರಾಜಕೀಯದಿಂದ ಅಸಂತೃಪ್ತಿ ಹೊಂದಿದ ಅಂದಿನ ವ್ಯವಸ್ಥೆಯನ್ನು ಕಂಡು, ಆಡಂಬರ, ಆತ್ಮ ವಂಚನೆಗಳಿಂದ ಕೂಡಿದ ವರ್ತಮಾನ ವ್ಯವಸ್ಥೆಯ ಮೇಲೆ ತಿರುಗಿಬಿದ್ದರು. ಈ ಕವಿಗಳ ಮುಖ್ಯ ಆಶಯ ಹೊಸ ವ್ಯವಸ್ಥೆ, ಅಂದರೆ ನೂತನ ಸಮಾಜ ನಿರ್ಮಿಸಬೇಕೆಂಬ ದೃಢನಿರ್ಧಾರ. ಇವರ ಕಾವ್ಯದ ಮುಖಾಂತರ ಅಂದಿನ ದಿನಗಳಲ್ಲಿ ನಡೆಯುತ್ತಿದ್ದ, ಸಮಾಜ ಘಾತುಕ ಕೆಲಸಗಳು, ಕೆಡಕುಗಳನ್ನು ನೇರವಾಗಿ ಯಾವುದೇ ಆತಂಕವಿಲ್ಲದೆ ಖಂಡಿಸಿದರು. ಇವರು ಕಾವ್ಯ ರಚನೆಯ ಬಿಸಿಯನ್ನು ಪ್ರತಿಯೊಬ್ಬರಿಗೆ ತಲುಪಿಸಿದರು.

ಇಡೀ ಸಮಾಜ ವ್ಯವಸ್ಥೆಯನ್ನೇ ಬದಲಿಸಿಬೇಕೆಂದು ಗುರಿಯಿಟ್ಟುಕೊಂಡ ಈ ಕವಿಗಳು ಸಮಾಜ ಪರವಾದ ಕಾವ್ಯವನ್ನು ರಚಿಸಿದರು. ಇವರ ಕಾವ್ಯದಿಂದ ಸಾಮಾನ್ಯ ಜನರು ಸಹ ಪ್ರೇರಿತರಾಗಿದ್ದರು, ಅನಕ್ಷರಸ್ಥರು ಇವರ ಕಾವ್ಯವನ್ನು ವಾಚಿಸಿಕೊಂಡು ಕಂಠಪಾಠ ಮಾಡಿಕೊಂಡು ಹಾಡಿನ ಮುಖಾಂತರ ಕುಣಿಯುತ್ತ, ಅಂದಿನ ರಾಜಕೀಯ ನಾಯಕರುಗಳು ಹಾಕಿಕೊಂಡ ಮುಸುಕನ್ನು ಹೊರಗೆಡವಿದರು. ಅಧಿಕಾರಿಗಳ ನಶೆಯನ್ನು ಇಳಿಸಿದರು. ಧನಿಕರ ಮೋಸತನವನ್ನು ಬಯಲಿಗೆಳೆದರು. ಮಠಾಧೀಶರ, ಕಪಟ ಸನ್ಯಾಸಿವೇಷಗಾರರನ್ನು, ಅವರ ವಂಚನೆಯನ್ನು ಬಯಲು ಮಾಡಿದರು. ಮಾನವತೆಯ ಅಂಶಗಳನ್ನು ಒಳಗೊಂಡ ಇವರ ಕವಿತೆಗಳು ಸಾಮಾಜಿಕ ಸಂಕೋಲನೆಗಳನ್ನು ನಿರ್ನಾಮ ಮಾಡಲು ಪಣ ತೊಟ್ಟಂತವು.

ದಿಗಂಬರ ಕವಿಗಳು ಜಿಡ್ಡುಗಟ್ಟಿದ ಸಮಾಜದ ಹೊಲಸನ್ನು ರಾಜಕೀಯ ದುರ್ನಡತೆಗಳನ್ನು ಬಯಲುಗೊಳಸಿದರು. ಇವರ ಆಲೋಚನೆಗಳು ಸಮಾಜಪರವಾದ ಕಾಳಜಿವುಳ್ಳವು. ಎಲ್ಲಾ ಆರು ಜನ ಕವಿಗಳ ಮನೋಭಾವವು ನಿರ್ಮಲ ಸಮಾಜ ರಚನೆ. ಈ ದೃಷ್ಟಿಯಲ್ಲಿ ಎಲ್ಲಾ ಕವಿಗಳಲ್ಲಿ ಸಮಾನವಾದ ಅಂಶಗಳನ್ನು ಕಾಣಬಹುದು. ಇವರ ಆಶಯಗಳು ಒಳ್ಳೆಯವೇ. ಆದರೆ ಇವರು ತಮ್ಮ ಭಾವನೆಗಳನ್ನು ಹೇಳುವುದಕ್ಕೆ ಉಪಯೋಗಿಸಿದ ಬೈಗಳುಗಳಿಂದ ಹಲವಾರು ಓದುಗರು ಈ ಕವಿಗಳನ್ನು ತಿರಸ್ಕರಿಸಿದರು. ಆದರೆ ದಿಗಂಬರ ಕವಿಗಳು ಮಾತ್ರ ಕಾವ್ಯ ರಚನೆಯಲ್ಲಿ ಹಿಂದೆ ಸರಿಯಲಿಲ್ಲ. ಅಂದಿನ ದಿನಗಳಲಿದ್ದ ಕೆಡಕುಗಳನ್ನು ಮುಜುಗರವಿಲ್ಲದೆ ಖಂಡಿಸಿ, ಅವರ ಆಲೋಚನೆಗಳ ಮೂಲಕ ಚುರುಕು ಮುಟ್ಟಿಸಿದರು.

ದಿಗಂಬರ ಕಾವ್ಯ ಅರವತ್ತರ ದಶಕದಲ್ಲೇ ಹುಟ್ಟಿ ಅರವತ್ತರ ದಶಕದಲ್ಲೇ ಬಹುತೇಕ ಕ್ಷೀಣಿಸಿತು. ಈ ದಿಗಂಬರ ಕವಿಗಳಲ್ಲಿ ಸೃಜನಾತ್ಮಕವಾದ ಸಾಹಿತ್ಯಕಾಂಶ ಕಂಡು ಬಂದಿಲ್ಲದ ಕಾರಣ, ಅದು ಬಹಳ ಕಾಲ ಮುಂದುವರಿಯಲಿಲ್ಲ. ದಿಗಂಬರ ಕಾವ್ಯದ ಮೂರು ಸಂಪುಟಗಳು ಪ್ರಕಟಿಸಿದ ನಂತರ ವೈಮನಸ್ಸುಂಟಾಗಿ ದಿಗಂಬರ ಕವಿಗಳು ಸಂಘಟನೆಯಿಂದ ಕೆಲವರು ಹೊರಬಂದರು. ದಿಗಂಬರ ಕವಿಗಳಲ್ಲಿ ಮಹಾಸ್ವಪ್ನ ಮತ್ತು ಭೈರವಯ್ಯ ಹೊರಬಂದರು. ನಗ್ನ ಮುನಿ, ನಿಖಿಲೇಶ್ವರ, ಚೆರಬಂಡರಾಜು, ಜ್ವಾಲಾಮುಖಿ ಇವರು 'ವಿಪ್ಲವ ರಚಯಿಸತಲ ಸಂಘಂ' (೧೯೭೦)ದಲ್ಲಿ ಸೇರಿಕೊಂಡರು. ಹಾಗಾಗಿ ಇವರ ಕನಸಿನ ಉಳಿದ ಮೂರು ದಿಗಂಬರ ಕಾವ್ಯ ಸಂಪುಟಗರು ಕನಸಾಗಿಯೇ ಉಳಿದವು. ಇವರ ಕಾವ್ಯವು ೧೯೬೫-೬೮ ಮಧ್ಯದಲ್ಲಿ ಮೂರು ವರ್ಷಗಳ ಕಾಲ ತೆಲುಗು ಸಾಹಿತ್ಯದಲ್ಲಿ ದಿಗಂಬರ ಕಾವ್ಯ ಚಳುವಳಿ ಉತ್ತುಂಗದಲ್ಲಿತ್ತು. ಇವರಲ್ಲಿ ಆಲೋಚನೆಗಳಿಗಿಂತ ಆವೇಶ, ಕ್ರೋಧ, ತುಡಿತ, ಸ್ವಾಭಿಮಾನವುಳ್ಳ ವ್ಯಕ್ತಿತ್ವವನ್ನು ಪಡೆದವರಾಗಿದ್ದರು. ನಂತರ ಇವರಲ್ಲಿರುವ ಭಾವನೆಗಳು ಇವರಲ್ಲೇ ವೈಮನಸ್ಸುಂಟಾಗಿ ಒಬ್ಬರ ಭಾವನೆಗಳನ್ನು ಮತ್ತೊಬ್ಬರು ಗೌರವಿಸದಾದರು. ಹಾಗಾಗಿ ಮುಂದೆ ವಿಮರ್ಶಕರು ತೀವ್ರವಾಗಿ ಇವರ ಕಾವ್ಯವನ್ನು ಟೀಕಿಸಿದರು.

ತೆಲುಗು ಸಾಹಿತ್ಯ ಲೋಕದಲ್ಲಿ ದಿಗಂಬರ ಕಾವ್ಯ ಒಂದು ಚಾರಿತ್ರಿಕ ಪಾತ್ರ ನಿರ್ವಹಿಸಿತು. ತೆಲುಗು ಸಾಹಿತ್ಯಕ್ಕೆ ಕ್ರಾಂತಿಕಾರಿಯ ವೈಚಾರಿಕತೆಯನ್ನು ಒದಗಿಸಿತು. ಇವರ ಕಾವ್ಯದ ಧೋರಣೆಗಳು ಕಾವ್ಯದ ನಾದವು ಕನ್ನಡ ಕಾವ್ಯದ ಮೇಲೆ ಉಂಟಾಗಿ ದಲಿತ, ಬಂಡಾಯಕ್ಕೆ ಪ್ರೇರಣೆಯಾಯಿತು. ತೆಲುಗು ದಿಗಂಬರ ಕಾವ್ಯವನ್ನು ಕನ್ನಡಕ್ಕೆ ಮೊದಲು ಆರ್ಬಿಯಸ್, ಸುಂದರಂ .ಕೆ. ನಾರಾಯಣಸ್ವಾಮಿ ಭಾಷಾಂತರಿಸಿದರು. ನಂತರ ಸಮಗ್ರ ತೆಲುಗು ದಿಗಂಬರ ಕಾವ್ಯವನ್ನು ಇತ್ತೀಚಿನ ದಿನಗಳಲ್ಲಿ ಗುರುಮೂರ್ತಿ ಪೆಂಡಕೂರು ಅವರು ಕನ್ನಡಿಸಿದರು. ಇವರು ಕನ್ನಡಿಸಿದ ಕಾವ್ಯವನ್ನು ಇಟ್ಟುಕೊಂಡು ಪ್ರಸ್ತುತ ದಿಗಂಬರ ಕಾವ್ಯದ ಅಧ್ಯಯನವನ್ನು ಮಾಡಲಾಗಿದೆ.

ದಿಗಂಬರ ಕವಿಗಳನ್ನು ಅವರ ಕಾವ್ಯವನ್ನು ವಿರೋಧಿಸಿದರೂ. ಅವರ ಕಾವ್ಯದ ಪರಂಪರೆ, ಕ್ರಾಂತಿಯ ಅಭಿವ್ಯಕ್ತಿ, ಆವೇಶ, ಸಮಾಜಪರ ಚಿಂತನೆ, ಕೆಳವರ್ಗದ ಬಗ್ಗೆ ಕಾಳಜಿ ಈ ಕವಿಗಳ ವೈಚಾರಿಕತೆಯ ನಿಲುವುಗಳು ಮುಂದಿನ ಕವಿಗಳಿಗೆ ಪ್ರೇರಣೆ ಇದ್ದೇ ಇದೆ. ಇವರ ಕಾವ್ಯ ವಾಚನ ಮಾಡಲು, ಹಾಡಿನ ಮೂಲಕ ಜನರನ್ನು ಎಚ್ಚರಿಸಲು ಸೂಕ್ತ ಕಾವ್ಯವಾಗಿದೆ. ಚೆರಬಂಡರಾಜು ಕವನಗಳಂತೂ ಹಾಡಿಗಾಗಿ ಜನರಿಗಾಗಿ ಬರೆದಂತ ಕವನಗಳಾಗಿವೆ. ಪ್ರತಿಯೊಬ್ಬರಿಗೆ ಮನಃಮುಟ್ಟುವಂತಹ ಕಾವ್ಯವಾಗಿದೆ.

ಹೀಗೆ ಆಧುನಿಕ ತೆಲುಗು ಸಾಹಿತ್ಯದಲ್ಲಿ ಕಾಣಿಸಿಕೊಂಡ ದಿಗಂಬರ ಕವಿಗಳು ಸಮಕಾಲೀನ ದಿನಗಳನ್ನು ಸಮಾಜ ಸುಧಾರಣೆಯ ಕಾರ್ಯವನ್ನು ನಿರ್ವಹಿಸಿದರು. ಸಾಹಿತ್ಯಕ್ಕಾಗಿ ಸಾಹಿತ್ಯ ರಚನೆ ಮಾಡದೆ ಜನರಿಗಾಗಿ ಜನರ ಬದುಕಿಗಾಗಿ ಕಾವ್ಯಗಳನ್ನು ಕಟ್ಟಿ ಸಾಮಾಜಿಕ

ವಾಸ್ತವವನ್ನು ಅನಾವರಣಗೊಳಿಸಿದರು. ಸರ್ವಜನರ ಸಮಾನತೆಗಾಗಿ ಹೋರಾಡಿದ ತೆಲುಗು ದಿಗಂಬರ ಕವಿಗಳ ಕೃತಿಗಳು ಒಂದು ನಿರ್ದಿಷ್ಟ ಜನ ಸಮುದಾಯವನ್ನು ನೇರವಾಗಿ ಸ್ಪರ್ಶಿಸಿದೆ. ಒಂದು ನಿರ್ದಿಷ್ಟ ಕಾಲ ಘಟ್ಟದ ಅಧಿಕಾರ ಶಾಹಿಗಳ, ಬಂಡವಾಳಶಾಹಿಗಳ ನಿದ್ದೆ ಕೆಡಿಸಿದೆ- ಎಂಬುದು ವಾಸ್ತವ. ಪರಿಣಾಮದಲ್ಲಿ ಸಾಹಿತ್ಯ ಮತ್ತು ಸಮಾಜದ ಕಂದಕ ಕಡಿಮೆಯಾಗಿ ಜನಸಾಮಾನ್ಯರ ಬದುಕಿನ ಮೂಲಕವೇ ಸಾಹಿತ್ಯ ಸೃಷ್ಟಿಗೆ ಹೊಸ ನೆಲೆಯನ್ನು ಒದಗಿಸುವಲ್ಲಿ ದಿಗಂಬರ ಕವಿಗಳು ಯಶಸ್ವಿಯಾದರು. ದೇಶದ ಯಾವುದೇ ಭಾಷೆಯ ಸಾಹಿತ್ಯ ಕ್ಷೇತ್ರದಲ್ಲಿ ಈ ತೆರದ ವಿಶಿಷ್ಟ ಕಾವ್ಯ ರಚಿಸಿದವರು ವಿರಳ. ಮರಾಠಿಯವರ ದಲಿತ ಪ್ಯಾಂಥರ್ಸ್, ಕನ್ನಡದ ದಲಿತ, ಬಂಡಾಯ ಸಾಹಿತ್ಯ ಚಳುವಳಿಗಳೂ ತೆಲುಗು ದಿಗಂಬರ ಕವಿಗಳ ಕಾಳಜಿಗಳನ್ನು ಇರಿಸಿಕೊಂಡು ಕಾವ್ಯ ರಚಿಸಿದರು. ಆದರೆ ದಿಗಂಬರ ಕವಿಗಳ ಕ್ರಾಂತಿ ಮನೋಧರ್ಮ, ನೇರವಾಗಿ ಜನ ಸಾಮನ್ಯರನ್ನು ಬಡಿದೆಬ್ಬಿಸುವ ಕಾವ್ಯ ಸೃಷ್ಟಿಗೆ ಯಾರೂ ಕೈಯಿಕ್ಕಲಿಲ್ಲ. ಇದುವೇ ದಿಗಂಬರ ಕವಿಗಳ ವೈಶಿಷ್ಟ್ಯ. ಕೇವಲ ಮೂರು ವರ್ಷಗಳಲ್ಲಿ ಉಚ್ಛ್ರಾಯ ಸ್ಥಿತಿಯನ್ನು ಕಂಡ ತೆಲುಗು ದಿಗಂಬರ ಕಾವ್ಯ ಚಳುವಳಿ ಎಲ್ಲಾ ಕಾಲಕ್ಕೂ ಪ್ರಸ್ತುತೆನ್ನಿಸುವ ವಿಚಾರಗಳ ಮೂಲಕ ಸಮಕಾಲೀನವಾಗಿದೆ ಈ ಕಾರಣಕ್ಕೆ ಪ್ರಸ್ತುತ ಅಧ್ಯಯನಕ್ಕೆ ಪ್ರಸಕ್ತಿಯಿದೆ ಎಂದು ಭಾವಿಸಲಾಗಿದೆ.

■

## ಆಕರ ಗ್ರಂಥಗಳು

### ಕನ್ನಡ

೧. ಅರ್ಜುನ ಗೋಳಸಂಗಿ (ಡಾ)(ಸಂ): ಕನ್ನಡ ದಲಿತ ಸಾಹಿತ್ಯ ಸಮಾಲೋಚನ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು - ೨೦೦೩.

೨. ಅರ್ಕಸಾಲಿ ವೃಷಬೇಂದ್ರಚಾರ್ (ಡಾ): ಸ್ವಾತಂತ್ರ್ಯೋತ್ತರ ಕನ್ನಡ ಹಾಗೂ ತೆಲುಗು ಕಾವ್ಯಗಳಲ್ಲಿ ಸಾಮಾಜಿಕ ಪ್ರಜ್ಞೆ; ವಿದ್ಯಾನಿಧಿ ಪ್ರಕಾಶನ; ಗದಗ - ೧೯೯೧.

೩. ಆಮೂರ ಜಿ. ಎಸ್. (ಡಾ)(ಸಂ) : ಬೇಂದ್ರೆ-ಕಾವ್ಯ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು - ೨೦೦೩.

೪. ಗುರುಮೂರ್ತಿ ಪೆಂಡಕೂರು (ಅನು): ದಿಗಂಬರ ಕಾವ್ಯ; ಯುವಕರ ಸಂಘ (ರಿ) ಹಗರಿಬೊಮ್ಮನಹಳ್ಳಿ - ೧೯೯೮.

೫. ಗುರುಮೂರ್ತಿ ಪೆಂಡಕೂರು (ಅನು): ಸಮಗ್ರ ದಿಗಂಬರ ಕಾವ್ಯ; ಯುವಕರ ಸಂಘ (ರಿ) ಹಗರಿಬೊಮ್ಮನಹಳ್ಳಿ - ೨೦೦೩.

೬. ಗುರುಮೂರ್ತಿ ಪೆಂಡಕೂರು (ಅನು): ಮರಗುದುರೆ; ಯುವಕರ ಸಂಘ (ರಿ) ಹಗರಿಬೊಮ್ಮನಹಳ್ಳಿ - ೨೦೦೧.

೭. ಚಂದ್ರಶೇಖರ ಪಾಟೀಲ: ಚಂಪಾ ಸಾಹಿತ್ಯ - ೨; ಸ್ವಪ್ನ ಬುಕ್ ಹೌಸ್, ಬೆಂಗಳೂರು - ೨೦೦೬.

೮. ನಾಗಭೂಷಣ ಒ. ಎಲ್: ವಿಮರ್ಶೆಯ ಪರಿಭಾಷೆ; ಅಂಕಿತ ಪುಸ್ತಕ, ಬೆಂಗಳೂರು - ೧೯೯೮.

೯. ಪುರುಷೋತ್ತಮ ಬಿಳಿಮಲೆ (ಡಾ): ಬಂಡಾಯ - ದಲಿತ ಸಾಹಿತ್ಯ ;ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು - ೨೦೦೪.

೧೦. ಬರಗೂರು ರಾಮಚಂದ್ರಪ್ಪ (ಸಂ): ಆಫ್ರಿಕಾದ ಕಪ್ಪು ಸಾಹಿತ್ಯ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು - ೧೯೯೨.

೧೧. ಮಠದ ಎಫ್. ಜಿ. (ಅನು): ಆಂಧ್ರ ವಾಙ್ಮಯ ಚರಿತ್ರೆ ;ಆಂಧ್ರಪ್ರದೇಶ ಕನ್ನಡ ಸಾಹಿತ್ಯ ಪರಿಷತ್ತು, ಹೈದಾರಾಬಾದ್ - ೧೯೯೫.

೧೨. ಮುಗಳಿ. ರಂ.ಶ್ರೀ:ಕನ್ನಡ ಸಾಹಿತ್ಯ ಚರಿತ್ರೆ; ಗೀತಾ ಬುಕ್ ಹೌಸ್,ಮೈಸೂರು - ೧೯೯೨.

೧೩. ರಾಮಚಂದ್ರ ಶರ್ಮ ಬಿ.ಸಿ: ಸಮಗ್ರ ಕಾವ್ಯ; ಸ್ವಪ್ನಾ ಬುಕ್ ಹೌಸ್, ಬೆಂಗಳೂರು - ೨೦೦೦.

೧೪. ರಾಮಚಂದ್ರನ್. ಸಿ. ಎನ್: ಸಾಹಿತ್ಯ ವಿಮರ್ಶೆ; ಕನ್ನಡ ಸಾಹಿತ್ಯ ಅಕಾಡೆಮಿ, ಬೆಂಗಳೂರು - ೨೦೦೨.

೧೫. ಶಿವರುದ್ರಪ್ಪ ಜಿ. ಎಸ್. (ಡಾ) (ಸಂ): ಭಾರತೀಯ ಸಾಹಿತ್ಯ ಸಮೀಕ್ಷೆ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು - ೧೯೯೦.

೧೬. ಶೇಷಗಿರಿರಾವ್ ಎಲ್. ಎಸ್. (ಪ್ರೊ.)(ಸಂ):ಭಾರತೀಯ ಸಾಹಿತ್ಯ ಸಮೀಕ್ಷೆ; ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು - ೧೯೯೦.

೧೭. ಶ್ರೀನಿವಾಸ ಮಾರ್ಕಂಡಪುರಂ (ಅನು):ಮಹಾಪ್ರಸ್ಥಾನ; ಕಾವ್ಯಮಂಜರಿ ಪ್ರಕಾಶನ, ಬೆಂಗಳೂರು - ೧೯೯೧.
೧೮. ಸರಜೂಕಾಟ್ಕರ್ (ಡಾ): ಕನ್ನಡ-ಮರಾಠಿ ದಲಿತ ಸಾಹಿತ್ಯ; ವಿಮೋಚನ ಪ್ರಕಾಶನ, ಅಥಣಿ - ೧೯೯೨.
೧೯. ಸುಂದರಂ ಆರ್.ವಿ:ತೆಲುಗು ಭಾಷೆ ಮತ್ತು ಸಾಹಿತ್ಯ; ಪ್ರಸಾರಾಂಗ, ಮೈಸೂರು - ೧೯೯೨.
೨೦. ಸುಂದರಂ ಆರ್.ವಿ: ದಿಗಂಬರ ಕವಿಗಳು; ಪ್ರಸಾರಾಂಗ, ಮೈಸೂರು - ೧೯೯೮.
೨೧. ಸುಂದರಂ ಆರ್.ವಿ: ಪಾಲ್ಕುರಿಕೆ ಸೋಮನಾಥ; ಪ್ರಸಾರಾಂಗ, ಮೈಸೂರು - ೧೯೮೨.

**ತೆಲುಗು**

೧. ಆಚಾರ್ಯ ಕಾತ್ಯಾಯನಿ ವಿದ್ಮಹ ಇತರರು: ತೆಲುಗುಲೋ ಕವಿತೋದ್ಯಮಾಲು; ತೆಲುಗು ಅಕಾಡೆಮಿ, ಹೈದರಾಬಾದ್ - ೨೦೦೩.
೨. ಬಾಲ ಶ್ರೀನಿವಾಸ ಮೂರ್ತಿ ಗುಮ್ಮನಗಾರಿ (ಡಾ): ಸಮಕಾಲೀನವಾದಲು ಸಾಹಿತ್ಯ ವಿಮರ್ಶೆ; ಜಯಶ್ರೀ ಪಬ್ಲಿಕೇಷನ್ಸ್, ಸಿಕಂದರಾಬಾದ್ - ೨೦೦೨.
೩. ಭಾಸ್ಕರಂ ಕಲ್ಲೂರಿ: ಗ್ಲೋಬಲ್ ಸಂದರ್ಭಂಲೋ ನಗ್ನಮುನಿ ಕೊಯ್ಯಗುರ್ರ್ರಂ; ಪ್ರಜಾಸ್ವಾಮ್ಯ ಪ್ರಚುರಣಲು, ಹೈದರಾಬಾದ್ - ೨೦೦೩.
೪. ಮಂಜುಲತ. ಎ (ಡಾ) (ಸಂ): ತೆಲುಗುಲೋ ಕವಿತ್ವೋದ್ಯಮಲು; ತೆಲುಗು ಅಕಾಡೆಮಿ, ಹೈದರಾಬಾದ್ - ೨೦೦೩.
೫. ನಗ್ನಮುನಿ: ಉಯದಯಂಚಿನಿ ಉದಯಾಲು; ಪ್ರಜಾಸ್ವಾಮ್ಯ ಪ್ರಚುರಣಲು, ಹೈದರಾಬಾದ್ - ೨೦೦೩.
೬. ನಗ್ನಮುನಿ: ಕೊಯ್ಯಗುರ್ರ್ರಂ; ಪ್ರಜಾಸ್ವಾಮ್ಯ ಪರಿಶೋಧನ. ೨೦೦೩.
೭. ನರಸಿಂಹಚಾರಿ ಎಸ್.ಟಿ. (ಡಾ) : ಕೊಯ್ಯಗುರ್ರ್ರಂ ದಾರ್ಶನಿಕತ; ಪ್ರಜಾಸ್ವಾಮ್ಯ ಪರಿಶೋಧನ ಕೇಂದ್ರ, ಹೈದರಾಬಾದ್ - ೨೦೦೭
೮. ಶಾಸ್ತ್ರಿ. ದ್ವಾ.ನಾ(ಡಾ): ತೆಲುಗು ಸಾಹಿತ್ಯ ಚರಿತ್ರೆ; ವಿಶಾಲಾಂಧ್ರ ಪಬ್ಲಿಶಿಂಗ್ ಹೌಸ್, ಬೆಂಗಳೂರು - ೨೦೦೧.
೯. ಸುಜಾತರೆಡ್ಡಿ ಮುದಿಗಂಟಿ: ತೆಲುಗು ಸಾಹಿತ್ಯ ಚರಿತ್ರೆ; ರೋಹಣ ಪಬ್ಲಿಕೇಶನ್, ಹೈದರಾಬಾದ್ - ೨೦೦೪.
೧೦. ಸುಬ್ಬರಾಮಯ್ಯ ಮುವ್ವಲ: ಸಂಸ್ಕೃತಾಂಧ್ರ ಪ್ರಾಚೀನಕವುಲು; ಜಯಂತಿ ಪಬ್ಲಿಕೇಶನ್, ವಿಜಯವಾಡ - ೨೦೦೪.
೧೧. ವೇಲಮಲ ಸಿಮ್ಮನ್ನ (ಪ್ರೊ): ತೆಲುಗು ಸಾಹಿತ್ಯ ವಿಮರ್ಶೆ ಸಿದ್ಧಾಂತಲು; ದಲಿತ ಸಾಹಿತ್ಯ ಪೀಠ, ವಿಶಾಖಪಟ್ನಂ - ೨೦೦೫.

* * * * *

